# ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)









ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬


೨೦೧೫

# “ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ”

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)



**ಸಂಶೋಧಕರು**

**ಹನುಮಂತಪ್ಪ.ಪಿ**

ಮಾರ್ಗದರ್ಶಕರು

**ರಮೇಶ ನಾಯಕ**

ಸಹ ಪ್ರಾಧ್ಯಾಪಕರು



**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ- ೫೮೩೨೭೬

೨೦೧೫

# ಮಾರ್ಗದರ್ಶಕರ ದೃಢೀಕರಣ

**"ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಹನುಮಂತಪ್ಪ. ಪಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

R Nayik

**(ರಮೇಶ ನಾಯಕ)**

ಸಹ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 30/07/2015
ಸ್ಥಳ : ವಿದ್ಯಾರಣ್ಯ

# ಘೋಷಣಾ ಪತ್ರ

**"ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ"**ಎಂಬ ಸಂಪ್ರಬಂಧವನ್ನು **ರಮೇಶ ನಾಯಕ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

(ಹನುಮಂತಪ್ಪ.ಪಿ)

ಸಂಶೋಧಕ
ಪ್ರಾಚೀನ ಇತಿಹಾಸ ಮತ್ತು
ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 20/7/2015
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ-೧

# ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ

**ಪ್ರಸ್ತಾವನೆ:**

ಮಾನವನು ಪ್ರಾರಂಭದಲ್ಲಿ ಒಂದು ಕಡೆ ನೆಲೆಸದೆ ಅಲೆಮಾರಿಯಾಗಿ ಅನುಕೂಲಕರ ಪ್ರದೇಶದಲ್ಲಿ ಅಲೆದಾಡುತ್ತಾ ಜೀವನ ಕಳೆಯುತ್ತಿದ್ದ. ನಂತರ ಒಂದೆಡೆ ಶಾಶ್ವತವಾಗಿ ನೆಲೆನಿಂತು ತನಗೆ ಬೇಕಾದ ಆಹಾರ ಉತ್ಪಾದಿಸಲಾರಂಭಿಸಿದ. ಇಂಥ ಪ್ರಕ್ರಿಯೆಗಳು ಮಾನವನ ಅಲೆಮಾರಿ ಮತ್ತು ಕೃಷಿ ಸಂಸ್ಕೃತಿಗಳ ವಿಕಾಸವನ್ನು ಸೂಚಿಸುತ್ತವೆ. ಈ ಬೆಳವಣಿಗೆಯ ನಂತರದಲ್ಲಿ ಗ್ರಾಮ, ನಗರ ಸಂಸ್ಕೃತಿಯಾಗಿ ಮಾರ್ಪಟ್ಟಿರುವುದನ್ನು ಕಾಣಬಹುದಾಗಿದೆ.

ಚರಿತ್ರೆಯೆಂದರೆ ಸಾಮ್ರಾಜ್ಯಗಳ ನಿರ್ಮಾಣ ಸಮ್ರಾಜ್ಯಗಳ ಸ್ಥೂಲ ವಿಷಯಗಳ ಜೊತೆ ಅವರ ಅರಮನೆ ಸಾಮ್ರಾಜ್ಯದ ವರ್ಣನೆ ಎಂದು ಭಾವಿಸಲಾಗಿತ್ತು. ಆದರೆ ಪ್ರತಿಯೊಂದು ಗ್ರಾಮ ತಾಲ್ಲೂಕು ಜಿಲ್ಲೆ ಹಾಗೂ ರಾಜ್ಯಕ್ಕೂ ತನ್ನದೇ ಆದ ಇತಿಹಾಸವಿದೆ. ಕೆಲವು ದಶಕಗಳಿಂದೀಚೆಗೆ ಸ್ಥಳಿಯ ಚರಿತ್ರೆಯಲ್ಲಿ ಗ್ರಾಮ ಹೋಬಳಿ ನಗರ ತಾಲ್ಲೂಕು ಹಾಗೂ ಜಿಲ್ಲೆಗಳ ಮಟ್ಟದಲ್ಲಿ ಅಧ್ಯಯನಗಳು ನಡೆಯುತ್ತಿವೆ. ಇಂತಹ ಅಧ್ಯಯನಗಳು ಸ್ಥಳೀಯ ಚರಿತ್ರೆಯನ್ನು ತಿಳಿಸುವ ಜೊತೆಗೆ ರಾಜಕೀಯ ಇತಿಹಾಸ ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಪುನರ್‌ರೂಪಿಸಲು ಸಹಾಯಕಾರಿಯಾಗಿವೆ. ಆಯಾ ಪ್ರದೇಶದಲ್ಲಿ ಬದುಕಿ ಬಾಳಿದ ಮಾನವನ ಜೀವನ ವಿಧಾನ ಅನುಸರಿಸಿ ಎದುರಿಸಿದ ಸಮಸ್ಯೆ ಜೀವನ ಮೌಲ್ಯ ಹಾಗೂ ಭೌತಿಕ ಅವಶೇಷಗಳ ವಿಶ್ಲೇಷಣೆಯೇ ಸಾಂಸ್ಕೃತಿಕ ಅಧ್ಯಯನವಾಗಿದೆ. ಸ್ಥಳೀಯ ಚರಿತ್ರೆಯನ್ನು ಕಟ್ಟಲು ಆಕರಗಳು ಬಹಳ ಮುಖ್ಯ ಅಂತಹ ಆಕರಗಳಲ್ಲಿ ಪ್ರಧಾನವಾಗಿ ಸಾಹಿತ್ಯಿಕ ಆಕರಗಳು ಪುರಾತತ್ವ ಆಕರಗಳು ಮೌಖಿಕ ಆಕರಗಳು ಮುಖ್ಯವಾದವು. ಒಂದು ಪ್ರದೇಶದ ಅಧ್ಯಯನದಲ್ಲಿ ಸಾಹಿತ್ಯ ಶಾಸನ ಪುರಾತತ್ವ ಹಾಗೂ ಮೌಖಿಕ ಆಕರಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದರಿಂದ ಆಯಾಯ ಪ್ರದೇಶದ ಚರಿತ್ರೆ ಹಾಗೂ ಸಂಸ್ಕೃತಿಯನ್ನು ವ್ಯವಸ್ಥಿತವಾಗಿ ರೂಪಿಸಬಹುದು.

ಒಂದು ನಿರ್ದಿಷ್ಟ ಪ್ರದೇಶದ ಸಾಂಸ್ಕೃತಿಕ ಅಧ್ಯಯನವು ಅಲ್ಲಿನ ಭೌಗೋಳಿಕ ಪರಿಸರದ ಆಯಾ ಕಾಲದಲ್ಲಿ ಬಿಟ್ಟುಹೋಗಿರುವ ಪ್ರಾಚೀನ ಅವಶೇಷಗಳು ಮತ್ತು ಅಲ್ಲಿ ನೆಲೆಸಿರುವ ಜನರ

ಸಾಮಾಜಿಕ, ಧಾರ್ಮಿಕ, ಆರ್ಥಿಕ ರಾಜಕೀಯ ಕೂಡುಕೊಳ್ಳುವಿಕೆಗಳಿಂದ ಪ್ರಭಾವಿತವಾಗಿರುತ್ತವೆ. ಹಾಗಾಗಿ ಆಯಾ ಪ್ರದೇಶದ ಸಾಂಸ್ಕೃತಿಕ ಮಹತ್ವ ತಿಳಿದುಕೊಳ್ಳಬೇಕಾದರೆ ಅಲ್ಲಿ ದೊರೆಯುವ ಪುರಾತತ್ವ ಅವಶೇಷಗಳು ಹಾಗೂ ಆ ಕಾಲದ ಸಮಾಜದಲ್ಲಿದ್ದ ಪ್ರಚಲಿತ ಐತಿಹ್ಯಗಳು ಮೌಖಿಕ ಕಥನಗಳು ಹಾಗೂ ಸಾಹಿತ್ಯಿಕ ಆಕರಗಳು ಚರಿತ್ರೆಯನ್ನು ಕಟ್ಟುಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ ಎಂದು ಪರಿಭಾವಿಸಬಹುದು. ಕರ್ನಾಟಕದ ಮಧ್ಯಭಾಗದಲ್ಲಿರುವ ದಾವಣಗೆರೆ ಜಿಲ್ಲೆ ಮತ್ತು ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ಒಂದು ಪ್ರಮುಖವಾದ ಹೋಬಳಿಯಾದ ಅಣಜಿ ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದಲೂ ತನ್ನದೇ ಆದ ವಿಶೇಷ ಮಹತ್ವವನ್ನು ಪಡೆದುಕೊಂಡು ಬಂದಿರುವ ಸ್ಥಳವಾಗಿದೆ.

ಅಣಜಿ ಪ್ರದೇಶದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕ ಪ್ರಾಚ್ಯವಶೇಷಗಳು ಕಂಡುಬರುತ್ತವೆ. ಸಾಂಸ್ಕೃತಿಕ ಚರಿತ್ರೆಯ ನಿರ್ಮಾಣದಲ್ಲಿ ಸ್ಮಾರಕ ಕೋಟೆ–ಕೊತ್ತಲು ಕೆರೆ ಕಟ್ಟೆ, ಬಾವಿ, ಶಿಲ್ಪಗಳು ಇಲ್ಲಿರುವ ದೇವಾಲಯಗಳು, ಶಾಸನ ಹಾಗೂ ಐತಿಹ್ಯಗಳು ತುಂಬ ಮಹತ್ವವಾದ ಪಾತ್ರವಹಿಸುತ್ತವೆ. ಜೈನ್ಯ ವೈಷ್ಣವ ಶೈವ ಮುಂತಾದ ಧಾರ್ಮಿಕ ಪಂಥಗಳ ಪ್ರಾಚೀನ ಕುರುಹುಗಳು ಇಲ್ಲಿರುವ ಗುಡಿಗಳಲ್ಲಿ ಉಳಿದಿವೆ. ಮೌಖಿಕ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ನಂಬಿಕೆ ಆಚರಣೆ ಮತ್ತು ಜಾತ್ರೆ ಉತ್ಸವಗಳು ಈ ಪ್ರದೇಶದ ಸಾಂಸ್ಕೃತಿಕ ವೈಶಿಷ್ಟತೆಗೆ ಸಾಕ್ಷಿಯಾಗಿ ನಿಂತಿವೆ. ಅವುಗಳ ಕುರಿತು ವಿಸ್ತೃತವಾದ ಅಧ್ಯಯನ ಕೈಗೊಳ್ಳಬಹುದು ಅಂಥ ಆಕರಗಳನ್ನು ಅವಶ್ಯಕತೆ ತಕ್ಕಷ್ಟು ಈ ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ. ಈ ಪ್ರದೇಶವನ್ನು ಮೌರ್ಯರು. ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ನೊಳಂಬರು, ಸೇವುಣರು, ಹೊಯ್ಸಳರು ವಿಜಯನಗರದ ಅರಸರು, ಮತ್ತು ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ಮಾಡಿರುವ ಬಗೆಗೆ ದಾಖಲೆಗಳು ಲಭ್ಯವಾಗಿರುವುದನ್ನು ಗಮನಿಸಬಹುದು.

ಬೇರೆ ಬೇರೆ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿ ನಿರ್ಮಾಣವಾಗಿ ಅಳಿದುಳಿದ ಅವಶೇಷಗಳಾಗಿ ಕಂಡುಬರುವ ದೇವಾಲಯಗಳು, ಮೂರ್ತಿಶಿಲ್ಪಗಳು, ಶಾಸನಗಳು, ವೀರಗಲ್ಲುಗಳು, ಕೋಟೆಗಳು, ಕೆರೆ ಕಟ್ಟೆಗಳು ಹಾಗೂ ಇನ್ನಿತರ ಪ್ರಾಚ್ಯಾವಶೇಷಗಳು ಚಾರಿತ್ರಿಕವಾಗಿ ಮಹತ್ವವನ್ನು ಪಡೆದುಕೊಂಡಿವೆ. ೧೦ ಮತ್ತು ೧೧ನೇ ಶತಮಾನದಲ್ಲಿ ಈ ಪ್ರದೇಶವು ಚಾರಿತ್ರಿಕ ಪ್ರಮುಖ್ಯತೆಯನ್ನು ಪಡೆದ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ಆದರೆ ಈ ಪ್ರದೇಶದಲ್ಲಿರುವ ಪ್ರಮುಖ ಸ್ಮಾರಕಗಳು ಇತ್ತೀಚೆಗೆ ಸರಿಯಾದ ರಕ್ಷಣೆ ಇಲ್ಲದೆ ಸೊರಗಿ ನಿಂತಿವೆ ಎಂದು ಅಭಿಪ್ರಾಯಿಸಬಹುದು. ಅವುಗಳಲ್ಲಿ ಕೆಲವೊಂದು ಅವಸಾನದತ್ತ ಸಾಗುತ್ತಿರುವ ಹಿನ್ನೆಲೆಯಲ್ಲಿ ಈ ಪ್ರದೇಶದ ಚರಿತ್ರೆಯ ಜೊತೆಗೆ ಅಲ್ಲಿನ ಪ್ರಮುಖ ಸ್ಮಾರಕಗಳನ್ನು ಸಹ ಸಂರಕ್ಷಿಸುವ ಅವಶ್ಯಕತೆಗಳಿವೆ ಎಂದು ಅಭಿಪ್ರಾಯಿಸಬಹುದು

**ಅಧ್ಯಯನದ ಉದ್ದೇಶ**

ಕರ್ನಾಟಕದ ಬೌಗೋಳಿಕ ಸನ್ನಿವೇಶದಲ್ಲಿ ದಾವಣಗೆರೆ ಜಿಲ್ಲೆಯು ಮಧ್ಯಭಾಗದಲ್ಲಿ ಬರುವಂತಹ

ಪ್ರದೇಶವಾಗಿದೆ ಅಲ್ಲದೆ ಅಣಜಿ ಪ್ರದೇಶವು ಕೆಲವು ಕೇಂದ್ರಿಕೃತಗೊಂಡಿವೆ. ಇದು ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ಪ್ರದೇಶ ಪ್ರಸ್ತುತ ಈ ಪ್ರದೇಶವು ಅರೆಮಲೆನಾಡು ಎಂದು ಹೆಸರು ಪಡೆದಿದೆ. ಈ ಪ್ರದೇಶವನ್ನೇ ಸಂಶೋಧನಾ ವಿಷಯವನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಸಂಶೋಧನೆಯ ಅಧ್ಯಯನಕ್ಕೆ ಉದ್ದೇಶ ಬಹುಮುಖ್ಯವಾಗಿರುತ್ತದೆ. ಅಧ್ಯಯನದ ಉದ್ದೇಶವನ್ನು ಸಾಧಿಸಿದರೆ ಗುರಿಯನ್ನು ಸಾಧಿಸಿದ್ದಂತೆ, ಸಮಸ್ಯೆಯ ರೂಪದಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರ ಹುಡುಕುವ ಕೆಲಸವನ್ನು ಇಂಥ ಅಧ್ಯಯನಗಳ ಮೂಲಕ ಮಾಡಬಹುದು. ಇದನ್ನೇ ಇನ್ನೊಂದು ವಿಧದಲ್ಲಿ ಹೇಳುವುದಾದರೆ ಅಧ್ಯಯನವನ್ನು ಶೋಧಿಸಲು ಅಥವಾ ಪರೀಕ್ಷಿಸಲು ಅಥವಾ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದೆ ಎನ್ನುವದನ್ನು ಹೇಳುತ್ತದೆ. ಅಧ್ಯಯನದ ಉದ್ದೇಶಗಳು ಸಂಶೋಧನಾ ಕೆಲಸಕ್ಕೆ ಒಂದು ಮಾರ್ಗಸೂಚಿಯಂತೆ ಕೆಲಸ ಮಾಡುತ್ತದೆ. ಆ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಪೂರೈಕೆ ಮಾಡಲಾಗಿದೆ. ಕೆಲವೊಂದು ನಿರ್ದಿಷ್ಟ ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನ ಅಥವಾ ಸಂಶೋಧನೆಯನ್ನು ಕೈಗೊಂಡು ಕಾರ್ಯ ನಿರ್ವಹಿಸಿದಾಗ ಅದು ಪರಿಪೂರ್ಣವೆನಿಸುತ್ತದೆ.

ಪ್ರಸ್ತುತ ಅಧ್ಯಯನವು "ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯನ್ನು ಹೊಂದಿದ್ದು ಅಜ್ಞಾನತವಾಗಿರುವ ಅಣಜಿ ಪ್ರದೇಶದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಈ ಮೂಲಕ ಬೆಳಕಿಗೆ ತರುವ ಉದ್ದೇಶವನ್ನು ಹೊಂದಲಾಗಿದೆ. ಈ ಪ್ರದೇಶವು ನೈಸರ್ಗಿಕವಾದ ಬೆಟ್ಟಗುಡ್ಡ ಕೋಟೆ ಕೊತ್ತಲುಗಳು ಕಲ್ಲಾಸರೆಗಳನ್ನು ಹೊಂದಿದ್ದು ಭೌಗೋಳಿಕವಾಗಿ ವಿಶಿಷ್ಟವಾಗಿದೆ. ಈ ಭೌಗೋಳಿಕ ಅಂಶಗಳು ಇಲ್ಲಿ ಚರಿತ್ರೆ ಮತ್ತು ಸಂಸ್ಕೃತಿಯ ಮೇಲೆ ಬೀರಿರುವ ಪ್ರಭಾವವನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ಚಾರಿತ್ರಿಕವಾಗಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಪಾಂಡ್ಯ ಸೇವುಣರು, ಹೊಯ್ಸಳ, ನೊಳಂಬರು, ವಿಜಯನಗರದ ಅರಸರು ಸಂತೆಬೆನ್ನೂರುನಾಯಕರು ಚಿತ್ರದುರ್ಗದ ಪಾಳೆಗಾರರು, ಹರಪನಹಳ್ಳಿಯ ಪಾಳೆಯಗಾರರು, ಮೈಸೂರು ಒಡೆಯರು, ಬಿಜಾಪುರ ಹಾಗೂ ಮೊಗಲರ ಆಳ್ವಿಕೆಗೆ ಸಂಬಂಧಿಸಿದ ಪ್ರಾಚೀನ ಕುರುಹುಗಳನ್ನು ಹಾಗೂ ದೊರೆತ ಚಾರಿತ್ರಿಕ ಮತ್ತು ಸಾಹಿತ್ಯಿಕ ಆಧಾರಗಳನ್ನು ಪ್ರಧಾನವಾಗಿ ಇಟ್ಟುಕೊಂಡು ವಿಶ್ಲೇಷಿಸಲಾಗಿದೆ.

ಈ ವಿಷಯಕ್ಕೆ ಪೂರಕವಾಗಿ ಈ ಪರಿಸರದಲ್ಲಿ ದೊರೆಯುವ ಪುರಾತತ್ವ ಆಕರಗಳನ್ನು ಸಂಗ್ರಹಿಸುವ ಹಾಗೂ ವಿಶ್ಲೇಷಣೆಯ ಮೂಲಕ ಸ್ಥಳಿಯ ಚರಿತ್ರೆ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಇಲ್ಲಿರು ಪ್ರಾಚೀನ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ, ಕೋಟೆ, ಕೆರೆಕಟ್ಟೆ ಹಾಗೂ ಶಿಲ್ಪದಲ್ಲಿ ಸ್ಮಾರಕ ಶಿಲ್ಪಗಳ ಕುರಿತು ವಿವರವಾಗಿ ಮಾಹಿತಿ ಸಂಗ್ರಹಿಸುವ ಹಾಗೂ ಸಂಬಂಧಿಸಿದ ವಿವರಗಳನ್ನು ಚರ್ಚಿಸಲಾಗಿದೆ. ಇಲ್ಲಿನ ಪ್ರಾಚೀನ ದೇವಾಲಯಗಳು ಕಲ್ಯಾಣ ಚಾಲುಕ್ಯ ವಿಜಯನಗರ ಪಾಳೆಯಗಾರರ ಕಾಲದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನಿರ್ಮಾಣವಾಗಿವೆ.

ಸಾಂಸ್ಕೃತಿಕ ಇತಿಹಾಸ ನಿರ್ಮಾಣದಲ್ಲಿ ಇಲ್ಲಿರುವ ಪ್ರಾಚೀನ ಕೋಟೆಗಳು ಅತ್ಯಂತ ಪ್ರಮುಖವಾದ ಪಾತ್ರವನ್ನುವಹಿಸಿವೆ ಅವುಗಳ ರಚನೆ, ನಿರ್ಮಾಣ ಹಾಗೂ ಅವುಗಳ ಸ್ಥಿತಿ ಗತಿಗಳ ಕುರಿತು

ಸಂಗತಿಗಳನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ. ಪ್ರಾಚೀನ ಕೆರೆ ನೀರಾವರಿ ವ್ಯವಸ್ಥೆಯು ಅಂದಿನ ಆರ್ಥಿಕ ಜೀವನದ ಬೆನ್ನೆಲುಬಾಗಿದ್ದು ಈ ಭಾಗದಲ್ಲಿ ಉಳಿದು ಬಂದಿರುವ ಹೊಯ್ಸಳ ಹಾಗೂ ವಿಜಯನಗರ ಕಾಲದ ಮತ್ತು ಪಾಳೆಗಾರರ ಕಾಲದ ಕೆರೆ ಕಟ್ಟೆಗಳು, ಕೋಟೆಗಳು ಹಾಗೂ ಅವುಗಳ ಕುರಿತು ಇರುವ ಹಲವು ಆಕರಗಳ ಮೂಲಕ ವಿವರವಾಗಿ ಚರ್ಚಿಸಲಾಗಿದೆ.

ಮೌಖಿಕ ಸಾಹಿತ್ಯ ಮೂಲಕ ಉಳಿದುಕೊಂಡು ಬಂದಿರುವ ಐತಿಹ್ಯ, ನಂಬಿಕೆ ಮತ್ತು ಆಚರಣೆಗಳು ಸಾಂಸ್ಕೃತಿಕವಾಗಿ ಜಾತ್ರೆ–ಉತ್ಸವಗಳನ್ನು ಕುರಿತು ದಾಖಲೀಕರಿಸಿ ವಿಶ್ಲೇಷಣೆ ಮಾಡಲಾಗಿದೆ. ಅಣಜಿ ಪ್ರದೇಶವನ್ನು ಕುರಿತು ಇದುವರೆಗೂ ಪ್ರಕಟಗೊಂಡಿರುವ ಬಿಡಿ ಲೇಖನಗಳನ್ನು ಆಕರಗಳನ್ನು ಪೂರಕವಾಗಿ ಬಳಸಿಕೊಂಡು ವಿಷಯವನ್ನು ಇನ್ನಷ್ಟು ವಿಸ್ತಿರುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಲಭ್ಯವಿರುವ ಸಂಪನ್ಮೂಲ ಆಕರಗಳನ್ನು ವಿವೇಚಿಸುವ ಮೂಲಕ ಸಮಗ್ರ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಮಾಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಸಂಶೋಧನೆಗೆ ಚೌಕಟ್ಟು ಅಥವಾ ವ್ಯಾಪ್ತಿ ಬಹಳ ಮುಖ್ಯ. ಈ ಮಿತಿಯಲ್ಲಿ ಅಧ್ಯಯನ ಕೈಗೊಂಡಾಗ ಮಾತ್ರ ಅದು ಪರಿಪೂರ್ಣವಾಗುತ್ತದೆ. ಈ ಚೌಕಟ್ಟಿನ ಕ್ರಮಬದ್ಧತೆಯಿಂದಾಗಿ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಅಧ್ಯಯನವು ಗೊಂದಲಮಯವಾಗಿ ಅಸ್ಪಷ್ಟವಾದ ಚರಿತ್ರೆ ರೂಪುಗೊಳ್ಳುವ ಸಾಧ್ಯತೆಗಳಿವೆ. ಹಾಗಾಗಿ ಪ್ರಸ್ತುತ 'ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ"ದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕಾಲಾವಧಿಯ ದೃಷ್ಟಿಯಿಂದ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. ಭೌಗೋಳಿಕವಾಗಿ ಅಣಜಿ ಸುತ್ತಮುತ್ತಲಿನ ಹಳ್ಳಿಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕಾಲಾವಧಿಯ ದೃಷ್ಟಿಯಿಂದ ಪ್ರಾಗಿತಿಹಾಸಿಕ ಕಾಲದಿಂದ ಚಿತ್ರದುರ್ಗದ ಪಾಳೆಯಗಾರರ ಕಾಲದ ಆಡಳಿತಾವಧಿಯವರೆಗೂ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ವಿಷಯಕ್ಕೆ ಪೂರಕ ಮಾಹಿತಿಗಳು ಅವಶ್ಯಕತೆಯೆಂದು ಕಂಡುಬಂದಲ್ಲಿ ಇನ್ನಿತರ ಪ್ರದೇಶದ ವಿವರಗಳನ್ನು ಸಹ ಅಧ್ಯಯನದಲ್ಲಿ ಬಳಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ವಿಧಾನ:**

ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತೀ ಮುಖ್ಯ ಹಾಗಾಗಿ ಸಂಶೋಧನ ಕಾರ್ಯಕ್ಕೆ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯಕವಾದುದ್ದು ಪ್ರಸ್ತುತ ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯ ವಿಧಾನವನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ಅಣಜಿ ಹೋಬಳಿ ವ್ಯಾಪ್ತಿಗೆ ಒಳಪಡುವಂತಹ ಪ್ರದೇಶಗಳಿಗೆ ನೇರವಾಗಿ ಭೇಟಿ ಮಾಡಿ ಅಲ್ಲಿ ದೊರೆತಿರುವ ಐತಿಹಾಸಿಕ ಅಥವಾ ಪ್ರಾಚ್ಯವಶೇಷಗಳನ್ನು ಕ್ರೋಢಿಕರಿಸಿ ದಾಖಲಿಸಿಕೊಳ್ಳುವುದರ ಮುಖಾಂತರ ಅಲ್ಲದೇ ಮೌಖಿಕ ಕಥನಗಳನ್ನು ಹಾಗೂ ಐತಿಹ್ಯಗಳನ್ನು ಅರಿತಿರುವಂತಹ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯವನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆತಿರುವ ಪ್ರಾಥಮಿಕ

ಮತ್ತು ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನಗಳ ಪ್ರಚಲಿತ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ವಿಷಯಾನುಸಾರವಾಗಿ ವಿಶ್ಲೇಷಿಸಿ ಚರ್ಚಿಸಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಠವಾದ ವಿಧಾನಗಳನ್ನು ಈ ಸಂಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ.

**ಅಧ್ಯಯನದ ಸ್ವರೂಪ:**

ಈ ಮೇಲಿನ ಅಧ್ಯಯನದ ವಿಧಾನದಲ್ಲಿ ಗಮನಿಸಿದ್ದಂತೆ ಹಲವು ವಿಧಾನಗಳನ್ನು ಅನುಸರಿಸಿ ಪ್ರತ್ಯೇಕಿಸಲಾದ ವಿಷಯಗಳನ್ನು ಇಟ್ಟುಕೊಂಡು ಪ್ರಸ್ತುತ ಅಧ್ಯಯನದ ಪ್ರಬಂಧದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ಆರು ಅಧ್ಯಾಯಗಳು ಒಳಗೊಂಡ ವಿಷಯ ಮತ್ತು ತಾತ್ವಿಕ ಸ್ವರೂಪವನ್ನು ಈ ಕೆಳಕಂಡಂತೆ ಮೊರೂಪಿಸಲಾಗಿದೆ.

ಒಂದನೆಯ ಅಧ್ಯಾಯದಲ್ಲಿ ಪ್ರಸ್ತಾವನೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ, ಮತ್ತು ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಕುರಿತು ಸ್ಪಷ್ಟೀಕರಿಸಲಾಗಿದೆ.

ಎರಡನೆಯ ಅಧ್ಯಾಯವು ಅಣಜಿ ಪರಿಸರದ ಭೌಗೋಳಿಕ ಅಂಶಗಳಾದ ಭೂವಿಸ್ತೀರ್ಣ ಹವಾಗುಣ ಮಣ್ಣು ಜಲಸಂಪತ್ತು ಮತ್ತು ಸ್ಥಳನಾಮ ಐತಿಹ್ಯಗಳ ಕುರಿತು ಚರ್ಚಿಸಲಾಗಿದೆ. ಮತ್ತು ಯಾವುದೇ ಪ್ರದೇಶದ ಚರಿತ್ರೆಯನ್ನು ಕುರಿತು ಅಧ್ಯಯನ ಮಾಡುವಾಗ ಅಲ್ಲಿನ ಸ್ಥಳನಾಮ ಕುರಿತು ವಿವೇಚಿಸುವ ಅವಶ್ಯಕತೆ ಇದ್ದು ಅವು ಸಾಮಾನ್ಯವಾಗಿ ಭೌಗೋಳಿಕ ನೈಸರ್ಗಿಕ ಚಾರಿತ್ರಿಕ ಹಾಗೂ ಭಾಷಿಕ ಹಿನ್ನೆಲೆಯಲ್ಲಿ ನಿಷ್ಪತ್ತಿಗೊಂಡಿರುತ್ತವೆ. ಆ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿಯೂ ಅವುಗಳನ್ನು ಪರಿಗಣಿಸಲಾಗಿದೆ.

ಮೂರನೆಯ ಅಧ್ಯಾಯವು ಪ್ರಾಚೀನ ಅಣಜಿ ಪರಿಸರದ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಕುರಿತು ವಿಶ್ಲೇಷಿಸುವ ಉದ್ದೇಶಗಳನ್ನೊಳಗೊಂಡಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅಣಜಿ ಪರಿಸರದ ವಾಸ್ತು ಮತ್ತು ಮೂರ್ತಿಶಿಲ್ಪಗಳ ಕುರಿತು ವಿವರಿಸಲಾಗಿದೆ.

ಐದನೆಯ ಅಧ್ಯಾಯವು ಈ ಪರಿಸರದ ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುವ ಉದ್ದೇಶವನ್ನು ಹೊಂದಲಾಗಿದೆ. ಇದರಲ್ಲಿ ನಂಬಿಕೆ, ಆಚರಣೆ, ಉತ್ಸವ, ಜಾತ್ರೆ ಹಗೂ ಇನ್ನಿತರ ವಿಷಯಗಳನ್ನು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವು ಸಮಾರೋಪವಾಗಿದ್ದು ಇದು ಇಡೀ ಅಧ್ಯಯನದಲ್ಲಿ ಕಂಡುಕೊಂಡು ಒಟ್ಟಾರೆ ಸಂಶೋಧನೆಯ ಫಲಿತಾಂಶಗಳ ಒಳಗೊಂಡು ನಿರೂಪಿತವಾಗಿವೆ. ಪ್ರತಿ ಅಧ್ಯಾಯಕ್ಕೆ ಸಂಬಂಧಿಸಿದ ಸಂಕ್ಷಿಪ್ತ ವಿವರಗಳನ್ನು ಈ ಅಧ್ಯಾಯದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡು ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ ಪ್ರೌಢ ಪ್ರಬಂಧ ಮುಂತಾದ ವಿವರಗಳನ್ನು ಗ್ರಂಥ ಋಣದಲ್ಲಿ ನೀಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಛಾಯ ಚಿತ್ರ ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ.

## ಅಧ್ಯಯನದ ಸಮೀಕ್ಷೆ

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಅಣಜಿ ಪರಿಸರಕ್ಕೆ ಸಂಬಂಧಿಸಿದಂತೆ ಅಲ್ಲಿನ ಇತಿಹಾಸ ಮತ್ತು ಪುರಾತತ್ವ ದೇವಾಲಯಗಳು ಮೂರ್ತಿಶಿಲ್ಪಗಳು, ವೀರಗಲ್ಲು ಹಾಗೂ ಶಾಸನಗಳು ಕೋಟೆಗಳು ಕೆರೆಗಳು ಕುರಿತಂತೆ ಕಿರುಪರಿಚಯವನ್ನು ಮಾಡಿಕೊಡುವ ಮೂಲಕ ಬಿಡಿ ಬಿಡಿ ಲೇಖನಗಳು ಪ್ರಕಟಣೆಗೊಂಡಿರುವದನ್ನು ಗಮನಿಸಬಹುದು.

ಬಿ.ಎಲ್.ರೈಸ್ ಅವರು ಪ್ರಕಟಿಸಿದ ಎಫಿಗ್ರಾಫಿಯಾ ಕರ್ನಾಟಕ ಸಂಪುಟ–೧೧ರಲ್ಲಿ ಅಣಜಿ ಪ್ರದೇಶಕ್ಕೆ ಸಂಬಂಧಿಸಿದಂತೆ ಶಾಸನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು.

ಟಿ.ಗಿರಿಜ ಅವರು ಚಿತ್ರದುರ್ಗ ಜಿಲ್ಲಾ ದರ್ಶನಿ, ರೇಖಾ ಪ್ರಕಾಶನ–೧೯೯೧ ಮತ್ತು ಟಿ.ಗಿರಿಜರವರು ದಾವಣಗೆರೆ ಇದು ನಮ್ಮ ಜಿಲ್ಲೆ ನಿಹಾರಿಕ ಪ್ರಕಾಶನ ದ್ವಿತೀಯ ಮುದ್ರಣ೨೦೦೧ ಈ ಗಂಥಗಳು ಅಣಜಿ ಪ್ರದೇಶಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಮಾಹಿತಿಗಳನ್ನು ಒದಗಿಸುತ್ತವೆ.

ಡಾ.ಹೆಚ್.ತಿಪ್ಪೇಸ್ವಾಮಿ ದಾವಣಗೆರೆ ಜಿಲ್ಲೆಯ ದೇವಾಲಯಗಳು (ಪ್ರಾಚೀನ ಮತ್ತು ಮಧ್ಯಕಾಲೀನಯುಗ) ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ,೨೦೦೦ ಈ ಗ್ರಂಥವು ಅಣಜಿ ಪರಿಸರದಲ್ಲಿ ಕಂಡುಬರುವ ದೇವಾಲಯಗಳು ಮತ್ತು ಶಾಸನಗಳ ಕುರಿತು ಕೆಲವು ವಿವರಗಳನ್ನು ನೀಡುತ್ತವೆ.

ಡಾ.ವಿರೂಪಾಕ್ಷಿ ಪೂಜಾರಿಹಳ್ಳಿ ಅಣಜಿ ಗ್ರಾಮದ ಪುರಾತತ್ವ ಮತ್ತು ಚರಿತ್ರೆ ಇತಿಹಾಸ ದರ್ಶನ ಸಂಪುಟ–೧೭ ಕರ್ನಾಟಕ ಇತಿಹಾಸ ಅಕಾಡೆಮೆ (ರಿ) ಬೆಂಗಳೂರು,೨೦೦೨ ಪ್ರಕಟಿತವಾದ ಲೇಖನವು ಈ ಗ್ರಮದಲ್ಲಿರುವ ಕೆಲವು ಪ್ರತ್ಯಾವಶೇಷಗಳನ್ನು ಮಾತ್ರ ಕೆಲಮಟ್ಟಿಗೆ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಎಂ.ಎಸ್.ಪುಟ್ಟಣ್ಣ ಚಿತ್ರದುರ್ಗ ಪಾಳೆಯಗಾರರು ಕಾವ್ಯಾಲಯ ಪ್ರಕಾಶಕರು ಮೈಸೂರು ೧೪–೧೯೯೭, ಇದು ಕೂಡು ಅಣಜಿ ಸುತ್ತಮುತ್ತಲಿನ ದೇವಾಲಯಗಳು ಪಾಳೆಯಗಾರರ ಕಾಲದಲ್ಲಿದ್ದಂತಹ ರಾಜಕೀಯ ಇತಿಹಾಸದ ಬಗ್ಗೆ ತಿಳಿಸುತ್ತವೆ.

ಡಾ.ಸಿ.ಆರ್.ಶ್ಯಾಮಲಾ, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ (ಮುಂಬಯಿ ವಿಶ್ವವಿದ್ಯಾಲಯಕ್ಕೆ ಪಿಎಚ್,ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ) ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು–೨೦೦೮ ರಲ್ಲಿ ಈ ಗ್ರಂಥದಲ್ಲಿ ಅಣಜಿ ಕೋಟೆಗೆ ಮುತ್ತಿಗೆ ಹಾಕಿದ ಮಾಹಿತಿಯನ್ನು ದಾಖಲಿಸಲಾಗಿದೆ.

ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ-೨೦೦೬ ಇದರಲ್ಲಿ ಕೂಡು ಅಣಜಿ ಗ್ರಾಮಕ್ಕೆ ಪ್ರಾಚೀನ ಚರಿತ್ರೆ ಸ್ವಲ್ಪ ಮಟ್ಟಿಗೆ ದಾಖಲಾಗಿರುವುದನ್ನು ಗಮನಿಸಬಹುದು.

ಡಾ.ಎಂ.ಜಿ. ಈಶ್ವರಪ್ಪ ಶತಮಾನದ ದಾವಣಗೆರೆ ಚಂಪಾಲಾಲ್ ಬಿ.ಡೆಲ್ಲರಿಯಾ ಪ್ರಕಾಶನ-೨೦೦೧ ಅಣಜಿಯ ಗ್ರಾಮಕ್ಕೆ ಸಂಬಂಧಿಸಿದ ಶಾಸನಗಳ ಬಗ್ಗೆ ಈ ಗ್ರಂಥದಲ್ಲಿ ದಾಖಲಿಸಲಾಗಿದೆ.

ಡಾ.ಎಂ.ವಿ. ಶ್ರೀನಿವಾಸ್ ಮತ್ತು ಲಕ್ಷ್ಮಣ್ ತೆಲಗಾವಿ, 'ಚಂದ್ರವಳ್ಳಿ' ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ ೧೯೭೬ ಅಣಜಿಯಲ್ಲಿ ಕಂಡುಬಂದಿರುವ ಕೆಲವು ಶಾಸನಗಳ ಕುರಿತು ಸುದೀರ್ಘವಾಗಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ.

ಸಂತೆಬೆನ್ನೂರು ಸುಮತೀಂದ್ರನಾಡಿಗ್ "ದಾವಣಗೆರೆ ಜಿಲ್ಲೆಯ ಇತಿಹಾಸದ ಕೆಲವು ಹೆಜ್ಜೆಗಳು" ಎಂಬ ಉಲ್ಲೇಖದಲ್ಲಿ ದಾವಣಗೆರೆ ಜಿಲ್ಲೆಯ ಪ್ರಾಚೀನತೆಯಿಂದ ಪ್ರಸ್ತುತವರೆಗಿನ ಕೆಲವು ಐತಿಹಾಸಿಕ ಮಹತ್ವವುಳ್ಳ ವಿಷಯಕ್ಕೆ ಸಂಬಂಧಿಸಿದ್ದಂತೆ ವಿವರಗಳನ್ನು ಪ್ರಕಟಿಸಿದ್ದಾರೆ. ಅಲ್ಲದೆ ಇದೇ ಲೇಖಕರೇ ಪ್ರಕಟಿಸಿರುವ "ಸಂತೆಬೆನ್ನೂರುನಾಯಕರು" ಎಂಬ ಗ್ರಂಥದಲ್ಲಿ ನಾಯಕರ ಐತಿಹಾಸಿಕ ಕೊಡುಗೆಗಳನ್ನು ಕುರಿತು ವಿವರಿಸಿದ್ದಾರೆ. ರಾಜರಾಮ ಹೆಗಡೆ "ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಕೆರೆಗಳ ನಿರ್ಮಾಣದಲ್ಲಿ ಜನರ ಸಹಭಾಗಿತ್ವ ಅಲ್ಲದೆ ನೀರು ಮನುಷ್ಯನಿಗೆ ಎಷ್ಟು ಅವಶ್ಯಕ ಅದನ್ನು ನಿರ್ವಹಿಸುವ ಬಗ್ಗೆ ಹೇಗೆ ಎಂಬ ಅಂಶವನ್ನು ತುಂಬ ವಿಸ್ತೃತವಾಗಿ ವಿವರಿಸಿದ್ದಾರೆ.

ಗುರುಪ್ರಸಾದ ಸಿ.ಟಿ. "ಕೆರೆ ಹೊನ್ನಮ್ಮ ಮತ್ತು ಕಾವ್ಯ" ಐತಿಹಾಸಿಕ ಮಹತ್ವವುಳ್ಳ ಹೊನ್ನಮ್ಮನ ಬಗ್ಗೆ ಕಾವ್ಯ ರಚಿಸುವುದರ ಮೂಲಕ ಹೊನ್ನಮ್ಮನ ತ್ಯಾಗ ಮನೋಭಾವನೆಯ ನಾಡಿನ ಉದ್ಧಾರಕ್ಕೋಸ್ಕರ ಹೊನ್ನಮ್ಮಳು ಜನತೆಯ ಅಭಿವೃದ್ಧಿಗೆ ತನ್ನ ಬದುಕನ್ನು ಹೇಗೆ ಮುಡುಪಾಗಿಟ್ಟಳು ಎಂಬ ವಿವರಗಳನ್ನು ಬಿಂಬಿಸುವ ಕಾವ್ಯವು ಇದಾಗಿದೆ. ಈಗ ಈ ನಾಡಿನ ಚರಿತ್ರೆ ಕುರಿತಾಗಿ ಅನೇಕ ಬರಹಗಾರರು ಗ್ರಂಥಗಳನ್ನು ಲೇಖನಗಳನ್ನು ಪ್ರಕಟಿಸಿರುವುದು ಕಂಡುಬರುತ್ತದೆ. ಈ ಹಿಂದೆ ರಚಿಸಿದ ಎಲ್ಲಾ ಬರವಣಿಗೆಗಳ ಆಧಾರದ ಮೇಲೆ ಹಾಗೂ ಅಣಜಿ ಪರಿಸರ ಸಾಂಸ್ಕೃತಿಕ ಅಧ್ಯಯನವನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವಿಸ್ತೃತಗೊಳಿಸಿ ವಿಶ್ಲೇಷಿಸುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ. ಎಂಬ ವಿಷಯಕ್ಕೆ ಸಂಬಂಧಿಸಿದಂತೆ ವಿಷಯ ವಿಶ್ಲೇಷಿಸಲಾಗಿದೆ. ಅಣಜಿ ಪರಿಸರವನ್ನೇ ಕೇಂದ್ರವನ್ನಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ಅಣಜಿ ಪರಿಸರದ ಬಗೆಗಿನ ವಿವರಗಳನ್ನು ಸಮಗ್ರವಾಗಿ ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ.

# ಅಧ್ಯಾಯ-೨

## ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನೆಲೆ

ಇತಿಹಾಸವು ಎಲ್ಲಾ ಶಾಸ್ತ್ರಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಅದರಲ್ಲೂ ಮುಖ್ಯವಾಗಿ ಭೂಗೋಳ ಶಾಸ್ತ್ರದೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಹೊಂದಿರುವುದನ್ನು ಗಮನಿಸಬಹುದು ಹಾಗಾಗಿ ಭೌಗೋಳಿಕ ಅಂಶಗಳು ಇತಿಹಾಸ ರಚನೆಗೆ ಬಹು ಮುಖ್ಯ ಆಕರ ಸಾಮಾಗ್ರಿಗಳಾಗಿವೆ ಎಂದು ಹೇಳಬಹುದು. ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯು ಭೌಗೋಳಿಕ ಪರಿಸರದ ನೆಲೆಗಟ್ಟಿನಲ್ಲಿ ತನ್ನ ಹುಟ್ಟು ಹಾಗೂ ಅಂತ್ಯವನ್ನು ಕಂಡು ಕೊಂಡಿರುತ್ತವೆ. ಮತ್ತು ಅಲ್ಲಿನ ಜನ ಜೀವನದ ಮೇಲೆ ಪ್ರಭಾವ ಬೀರುತ್ತವೆ. ಅಲ್ಲದೇ ಅಂಥ ಅಂಶಗಳು ಸಾಂಸ್ಕೃತಿಕ ಬದುಕನ್ನು ರೂಪಿಸಲು ಸಹಕಾರಿಯಾಗಿರುತ್ತವೆ. ಮಾನವನು ಹಂತ ಹಂತವಾಗಿ ಬೆಳವಣಿಗೆ ಹೊಂದಿರುವುದಕ್ಕೆ ಭೌಗೋಳಿಕ ಅಂಶಗಳೇ ಪ್ರಮುಖ ಕಾರಣಗಳೆಂದರೆ ತಪ್ಪಾಗಲಾರದು. ಪ್ರಾಚೀನ ಮಾನವನು ನಾಗರಿಕತೆಯಡೆಗೆ ಸಾಗಿ ನದಿ ದಂಡೆಗಳ ಮೇಲೆ ತನ್ನ ಜೀವನವನ್ನು ರೂಪಿಸಿಕೊಂಡಿರುವುದನ್ನು ಗಮನಿಸಿದಾಗ ಭೌಗೋಳಿಕ ಅಂಶಗಳ ಬಗೆಗಿರುವ ಪ್ರಾಮುಖ್ಯತೆಯನ್ನು ಮನಗಾಣಬಹುದು.

ಅಣಜಿ ಪರಿಸರ ಅರೆಮಲೆನಾಡು ಪರಿಸರದಲ್ಲಿರುವ ಪ್ರದೇಶ. ಇಲ್ಲಿ ಅಡಿಕೆ, ತೆಂಗು, ಬಾಳೆ, ಮೆಕ್ಕೆ ಜೋಳಗಳನ್ನು ವಾಣಿಜ್ಯ ಬೆಳೆಗಳಾಗಿ ಬೆಳೆಯುತ್ತಾರೆ. ಈ ಭಾಗದಲ್ಲಿ ಹುಣಸೆ, ಮಾವು, ಹಿಪ್ಪೆಮರ, ಜಾಲಿ ಜಾತಿಯ ಗಿಡಮರಗಳು ಹಾಗೂ ವಿವಿಧ ಪಕ್ಷಿ ಪ್ರಾಣಿಗಳಾದ ಚಿರತೆ, ಕತ್ತೆ ಕಿರುಬ, ಕರಡಿ, ಕಾಡುಹಂದಿ, ಜಿಂಕೆ, ನಾಗರ ಹಾವು, ಮಂಡರಗಪ್ಪೆ, ಚೇಳುಗಳಂತಹ ವಿಷಕಾರಿ ಜಂತುಗಳನ್ನು ಕಾಣಬಹುದು. ಮರಕುಟಿಕ, ಕಾಡು ಪಾರಿವಾಳ, ಕೌಜುಗ, ನೀರು ಕೋಳಿ, ಕೋಗಿಲೆ, ಮೊದಲಾದ ಪಕ್ಷಿಸಂಕುಲಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.[೧]

ಅಣಜಿ ಹೋಬಳಿಯು ತಾಲೂಕು ಕೇಂದ್ರವಾದ ದಾವಣಗೆರೆಯಿಂದ ೧೨ ಕಿ.ಮೀ. ದೂರದಲ್ಲಿದ್ದು, ಪೂರ್ವ ದಿಕ್ಕಿನಲ್ಲಿದೆ. ಜಗಳೂರಿನಿಂದ ೩೦ ಕಿ.ಮೀ. ಪಶ್ಚಿಮ ದಿಕ್ಕಿನಲ್ಲಿ ಕೇಂದ್ರಿಕೃತವಾಗಿದೆ. ಲ್ಲದೆ ಇದು ೧೯೯೭ ಕ್ಕಿಂತ ಹಿಂದೆ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿತ್ತು. ನಂತರ ಅಣಜಿಯು ಆನಗೋಡ ಹೋಬಳಿಯ ವ್ಯಾಪ್ತಿಗೆ ಒಳಪಟ್ಟಿತ್ತು. ನಂತರ ೨೦೧೪ ರಂದು ಅಣಜಿ ಹೋಬಳಿಯಾಗಿ ಪ್ರತ್ಯೇಕವಾಗಿ ವಿಭಾಗವಾಗಿ ಮಾಡಲಾಯಿತು. ಭೌಗೋಳಿಕವಾಗಿ ಇದು ಬಯಲು ಪ್ರದೇಶವಾಗಿದ್ದು,

ಈ ಭಾಗದಲ್ಲಿ ಚಾರಿತ್ರಿಕವಾಗಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ನೊಳಂಬರು, ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ಮಾಡಿರುವ ಕುರಿತು ದಾಖಲೆಗಳು ಲಭ್ಯವಾಗಿವೆ

ಅಣಜಿ ಪ್ರದೇಶವು ಪ್ರಾಚೀನ ಮತ್ತು ಚಾರಿತ್ರಿಕವಾಗಿ ತುಂಬಾ ಮಹತ್ವ ಪಡೆದ ಪ್ರದೇಶವಾಗಿದ್ದು ಈ ಪ್ರದೇಶದ ಜನರ ಜೀವನ ಶೈಲಿ ಮತ್ತು ಅಭಿವೃದ್ಧಿಯು ಇತಿಹಾಸ ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತಿನ ಹಿನ್ನೆಲೆಯಿಂದ ಪ್ರಭಾವಿತವಾಗಿದೆ. ಮಾನವನ ಜೀವನ ರೀತಿ ಉಡುಗೆ-ತೊಡುಗೆ ಆಹಾರ ವಸತಿ ಸಂಪ್ರದಾಯ ನಂಬಿಕೆಗಳೆಲ್ಲವೂ ಈ ಪರಿಸರದ ಕೊಡುಗೆಗಳು.[೨]

## ಭೌಗೋಳಿಕ ಪ್ರದೇಶ

ಪ್ರಸ್ತುತ ಅಣಜಿ ಹೋಬಳಿಯ ಭೌಗೋಳಿಕ ವಿಸ್ತೀರ್ಣವು ೧.೮೭೮ ಹೆಕ್ಟೇರ್ ವಿಸ್ತೀರ್ಣವನ್ನು ಹೊಂದಿದೆ. ಸಮುದ್ರಮಟ್ಟಕ್ಕಿಂತ ಇದು ೫೯೮ ಮೀಟರ್ ಎತ್ತರವಿದೆ. ೧೪೦.೩೦ ರಿಂದ ೪೮.೫೦ ಉತ್ತರ ಅಕ್ಷಾಂಶ ೨೬೦.೨೦ ರಿಂದ ೫೭.೨ ಪೂರ್ವ ರೇಖಾಂಶಗಳು ನಡುವೆ ನೆಲೆಸಿದೆ. ಅಣಜಿ ಪ್ರದೇಶವು ಪೂರ್ವಕ್ಕೆ ಜಗಳೂರು ತಾಲ್ಲೂಕು ಪಶ್ಚಿಮಕ್ಕೆ ದಾವಣಗೆರೆ ಜಿಲ್ಲೆ ಮತ್ತು ಉತ್ತರಕ್ಕೆ ಹರಪ್ಪನಹಳ್ಳಿ ತಾಲೂಕು ದಕ್ಷಿಣಕ್ಕೆ ಹೊಳಲ್ಕೆರೆ ತಾಲ್ಲೂಕು ಪ್ರದೇಶಗಳಿಂದ ಸುತ್ತುವರೆಯಲ್ಪಟ್ಟಿದೆ.

ಅಣಜಿ ಹೋಬಳಿಯು ಒಟ್ಟು ೨೭ ಹಳ್ಳಿಯನ್ನು ಹಾಗೂ ಆರು ಬೇಚಾರಕ್ ಗ್ರಾಮಗಳನ್ನು ಹೊಂದಿದೆ. ಏಳು ಗ್ರಾಮ ಪಂಚಾಯಿತಿಗಳಿವೆ. ಅವುಗಳೆಂದರೆ ಅಣಜಿ, ಹುಲಿಕಟ್ಟೆ, ಆಲೂರು, ಐಗೂರು, ಹೆಮ್ಮನಬೇತೂರು, ತುಂಬಿಗೆರೆ, ಹಾಗೂ ಗುಡಾಳುಗಳಾಗಿವೆ. ೨೦೧೧ ರ ಜನಗಣತಿಯ ಪ್ರಕಾರ ಈ ಭಾಗದ ಒಟ್ಟು ಜನ ಸಂಖ್ಯೆ ೩.೦೭೯ ಇದ್ದು ಅದರಲ್ಲಿ ಪುರುಷರ ಸಂಖ್ಯೆ-೧೫೪೨ ಮತ್ತು ಮಹಿಳೆಯರ ಸಂಖ್ಯೆ ೧.೫೩೭ ಎಂದು ವಿವರಗಳು ದಾಖಲಾಗಿವೆ.

## ಭೂ ಸ್ವರೂಪ

ಕರ್ನಾಟಕದ ಮಧ್ಯ ಭಾಗದಲ್ಲಿರುವ ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕಿನಲ್ಲಿ ಅಣಜಿ ಪ್ರದೇಶವು ಕೇಂದ್ರಿಕೃತಗೊಂಡಿದೆ. ಇದು ಬಯಲು ಪ್ರದೇಶಗಳನ್ನು ಒಳಗೊಂಡಂತೆ ಸುತ್ತಮುತ್ತಲು ನೈಸರ್ಗಿಕ ಬೆಟ್ಟಗುಡ್ಡಗಳನ್ನು ಒಳಗೊಂಡಿದೆ. ಈ ಪ್ರದೇಶದಲ್ಲಿ ದಾವಣಗೆರೆ ತಾಲೂಕಿನ ಮಾಯಕೊಂಡಿದಿಂದ ಅಣಜಿಯ ಸುತ್ತಮುತ್ತಲು ಬರುವಂತಹ ಹಾಗೂ ಅಷ್ಟೇನು ಎತ್ತರವಲ್ಲದ ಗುಡ್ಡದ ಸಾಲುಗಳು ಹಬ್ಬಿವೆ ಅಲ್ಲದೇ ಈ ಪ್ರದೇಶದಲ್ಲಿ ಸಣ್ಣ ಗುಡ್ಡ ಬೆಟ್ಟಗಳಿವೆ. ಈ ಪ್ರದೇಶವು ಕೆಂಪು, ಕಪ್ಪು ಮತ್ತು ಮರಳು ಮಿಶ್ರಿತ ಮಣ್ಣು ಹೊಂದಿರುವುದನ್ನು ಕಾಣುತ್ತೇವೆ. ಕಪ್ಪು ಮಣ್ಣು ಮಾತ್ರ ವ್ಯವಸಾಯಕ್ಕೆ ಯೋಗ್ಯವಾಗಿದೆ.

## ವಾಯುಗುಣ ಮತ್ತು ಮಳೆ

ಪ್ರಸ್ತುತ ಪರಿಸರದ ವಾಯುಗುಣವು ಉಷ್ಣವಲಯದ ಮನ್ಸೂನ್ ಮಾದರಿಯದ್ದು, ಡಿಸೆಂಬರ್‌ನಿಂದ ಫೆಬ್ರವರಿ ತಿಂಗಳವರೆಗೆ ಚಳಿಗಾಲವಿರುತ್ತದೆ. ಈ ಅವಧಿಯಲ್ಲಿ ಗರಿಷ್ಠ ಉಷ್ಣಾಂಶ ೨೨ ಸೆಂಟಿಗ್ರೇಡಿನಷ್ಟು ಆಗಿರುತ್ತದೆ. ಈ ಪರಿಸರವು ಭಾರತದ ಆಗ್ನೇಯ ಭಾಗದಲ್ಲಿ ಅವರ್ತ ಮಾರುತಗಳಿಂದ ಉಂಟಾಗುವ ಚದುರಿದ ಮಳೆಯನ್ನು ಪಡೆಯುತ್ತದೆ. ಡಿಸೆಂಬರ್–ಜನವರಿ ಮತ್ತು ಫೆಬ್ರವರಿ ತಿಂಗಳುಗಳಲ್ಲಿ ಗಾಳಿಯಲ್ಲಿ ತೇವಾಂಶದ ಮಟ್ಟ ಹೆಚ್ಚಾಗಿ ಇರುತ್ತದೆ. ಮಾರ್ಚ್‌ನಿಂದ ಮೇ ತಿಂಗಳ ಕೊನೆಯವರೆಗೂ ಬಿಸಿ ಹವಾಗುಣವಿರುತ್ತದೆ. ಈ ಅವಧಿಯಲ್ಲಿ ಮಳೆಯು ಒಮ್ಮೊಮ್ಮೆ ಅನಿರೀಕ್ಷಿತವಾಗಿ ಬೀಳುವುದು. ಏಪ್ರಿಲ್ ತಿಂಗಳಲ್ಲಿ ಹೆಚ್ಚು ಉಷ್ಣಾಂಶವಿದ್ದು ಗರಿಷ್ಠ ೩೫ ಡಿಗ್ರಿಯಿಂದ ೩೭ ಡಿಗ್ರಿಯವರೆಗೂ ಇರುತ್ತದೆ. ಏಪ್ರಿಲ್ ಮತ್ತು ಮೇ ತಿಂಗಳ ಕೊನೆಯಲ್ಲಿ ಆಗಾಗ್ಗೆ ಗುಡುಗಿನಿಂದ ಕೂಡಿದ ಮಳೆಯು ಬೀಳುವುದುಂಟು. ಈ ಕಾಲಾವಧಿಯನ್ನು ಬೇಸಿಗೆಕಾಲ ಎಂದು ಕರೆಯುತ್ತಾರೆ.

ಜೂನ್‌ನಿಂದ ಆಗಸ್ಟ್ ತಿಂಗಳವರೆಗೆ ಇಲ್ಲಿ ಮಳೆಗಾಲವಿರುತ್ತದೆ. ಪ್ರಸ್ತುತ ಪರಿಸರದ ಸರಾಸರಿ ಮಳೆಯ ಪ್ರಮಾಣ ೫೭೮ ಮಿಲಿ ಮೀಟರ್. ಈ ಪರಿಸರವು ವರ್ಷದ ಒಟ್ಟಾರೆ ಮಳೆಯಲ್ಲಿ ಸುಮಾರು ಶೇ ೭.೬% ರಷ್ಟು ಮಳೆಯನ್ನು ಪಡೆದುಕೊಳ್ಳುತ್ತದೆ.

ವಿವಿಧ ಬಗೆಯ ಆಹಾರ ಬೆಳೆಗಳನ್ನು ಬೆಳೆಯುತ್ತಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ರಾಗಿ, ಜೋಳ, ಮೆಕ್ಕೆಜೋಳ, ತೊಗರಿ, ಕಬ್ಬು, ಬಾಳೆ, ಅಡಿಕೆ, ಹತ್ತಿ ತೆಂಗು, ಮಾವು ಅವರೆ, ಕಡಲೆಕಾಯಿ, ಸೂರ್ಯಕಾಂತಿ ಬೆಳಗಳನ್ನು. ಬೆಳೆಯಲಾಗುತ್ತದೆ. ಕೆಲವು ಕಡೆ ಕ್ಯಾರೇಟ್, ಮೂಲಂಗಿ, ಟೊಮೊಟೊ, ಗೆಡ್ಡೆಕೋಸು, ಬದನೆ, ತರಕಾರಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಜೊತೆಗೆ ಸೇವಂತಿಗೆ, ಚಂಡಹೂ, ಮಲ್ಲಿಗೆ ಕಾಕಡ ಹೂ, ಕನಕಾಂಬರ ಮುಂತಾದ ಹೂವುಗಳನ್ನು ತೋಟಗಾರಿಕೆಯ ಬೆಳೆಗಳನ್ನಾಗಿ ಬೆಳೆಯುವ ಕೆಲಸದಲ್ಲಿ ಈ ಪ್ರದೇಶದಲ್ಲಿ ಜನಸಮುದಾವು ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

## ಸಸ್ಯ ಸಂಪತ್ತು ಮತ್ತು ಅರಣ್ಯ

ಈ ಭಾಗದಲ್ಲಿ ಗಟ್ಟಿ ಮುಟ್ಟಾದ ಅರಣ್ಯ ಉತ್ಪನ್ನಗಳು ಮತ್ತು ನದಿ ನೀರಿನಂತಹ ಸಂಪನ್ಮೂಲಗಳು ಕಂಡುಬರುವುದಿಲ್ಲ. ಏಕೆಂದರೆ ಇದೊಂದು ಸಾಧಾರಣವಾದ ಒಣಭೂಮಿಯಿಂದ ಕೂಡಿದ ಪ್ರದೇಶವಾಗಿವೆ. ಅಲ್ಲದೆ ಮಾನವ ನಿರ್ಮಿತ ವಸತಿ ಪ್ರದೇಶಗಳಿಂದ ಕೂಡಿದ್ದು ಸಸ್ಯ ಸಂಪತ್ತಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾನವ ನಿರ್ಮಿತ ಸಸ್ಯಗಳೆ ಆಗಿವೆ. ಅಣಜಿ ಪ್ರದೇಶವು ಸುತ್ತಮುತ್ತಲು ತಗ್ಗು ದಿನ್ನೆಗಳಿಂದ ಕೂಡಿದೆ. ಈ ಪರಿಸರದಲ್ಲಿ ವಾರ್ಷಿಕವಾಗಿ ತೀರಾ ಸಾಧಾರಣ ಮಳೆ ಬೀಳುವುದರಿಂದ ಇಲ್ಲಿನ ಮರಗಿಡಗಳು ಬಹುಮಟ್ಟಿಗೆ ಉರುವಲು ಸೌದೆಗೆ ಬಳಸುವ ಮರಗಳಿಂದ ಕೂಡಿವೆ. ಇಲ್ಲಿ ವನ್ಯ ಜೀವಿಗಳು ಅಷ್ಟಾಗಿ ಕಂಡುಬರುವುದಿಲ್ಲ. ನಾಯಿ, ಮೇಕೆ, ಕುರಿ, ಹಸು,

ಎತ್ತು ಎಮ್ಮೆ ಮುಂತಾದವು ಈ ಭಾಗದ ರೈತಾಪಿ ವರ್ಗದ ಸಾಕು ಪ್ರಾಣಿಗಳಾಗಿವೆ. ಈ ಪ್ರದೇಶವು ಚಾರಿತ್ರಿಕ ದೃಷ್ಟಿಯಿಂದ ಮಹತ್ವವನ್ನು ಪಡೆದುಕೊಂಡಿದೆ. ಈ ಭಾಗದಲ್ಲಿ ಅನೇಕ ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಕೋಟೆಗಳು, ಬರುಜುಗಳು, ವೀರಗಲ್ಲುಗಳು, ನಾಗಶಿಲ್ಪಿಗಳು ಹೀಗೆ ಅನೇಕ ರೀತಿಯ ವಿಶೇಷಗಳು ನಮಗೆ ಲಭ್ಯವಾಗುತ್ತವೆ. ಇಂತಹ ಅವಶೇಷಗಳ ಪ್ರತಿನಿಧೀಕರಣವು ಈ ಪ್ರದೇಶದಲ್ಲಿ ಹೇರಳವಾದ ಸಂಪನ್ಮೂಲಗಳನ್ನು ಹೊಂದಿತ್ತು ಎಂದು ತಿಳಿಸಿ ಕೊಡುವುದರ ಸೂಚಕವಾಗಿತ್ತು ಎಂದು ತಿಳಿಯಬಹುದು.

**ಐತಿಹಾಸಿಕ ಹಿನ್ನೆಲೆ**

ಕರ್ನಾಟಕದಲ್ಲಿ ಚಾರಿತ್ರಿಕ ಕಾಲ ಕ್ರಿ.ಪೂ.೪-೩ನೆಯ ಶತಮಾನಗಳಿಂದ ಆರಂಭವಾಗುತ್ತದೆ. ಅಣಜಿ ಸುತ್ತಮುತ್ತಲಿನ ಪ್ರದೇಶವು ಪ್ರಾಚೀನ ಕಾಲದಿಂದಲೂ ವಿವಿಧ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂಬುದನ್ನು ಅಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದಾಗಿದೆ. ಅಷ್ಟೇ ಅಲ್ಲದೇ ಈ ಪ್ರದೇಶವು ಪ್ರಾದೇಶಿಕ ಸಾಮಂತ ರಾಜ ಮನೆತನಗಳ ಆಳ್ವಿಕೆಗೂ ಸಹ ಒಳಪಟ್ಟಿತ್ತು ಎಂಬುದನ್ನು ಅನೇಕ ಆಧಾರಗಳಿಂದ ತಿಳಿಯಬಹುದಾಗಿದೆ.

**ಮೌರ್ಯರ ಆಳ್ವಿಕೆ**

ಕ್ರಿಸ್ತ ಪೂರ್ವ ನಾಲ್ಕನೆಯ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯವು ಸ್ಥಾಪನೆಯಾಗುವ ಮೊದಲೇ ಉತ್ತರದ ಸಾಮ್ರಾಜ್ಯ ಸ್ಥಾಪಕರು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನೂ ಗೆದ್ದು, ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರು. ಮೌರ್ಯರಿಗಿಂತ ಮೊದಲು ನಂದರು, ಕೈಶುನಾಗರು (ಶಿಶುನಾಗರು) ಕರ್ನಾಟಕದ ಕೆಲವು ಭಾಗಗಳನ್ನು ಆಳಿರುವುದಕ್ಕೆ ಆಧಾರಗಳಿವೆ.

ನಂದರನ್ನು ಕೆಳಗುರುಳಿಸಿದ ಮೌರ್ಯರು ಅನುಕ್ರಮವಾಗಿ ದಕ್ಷಿಣ ಭಾರತವನ್ನು ಒಳಗೊಂಡ ಮಗಧ ರಾಜ್ಯದ ಒಡೆಯರಾದರೆಂದು ತಿಳಿದು ಬರುತ್ತದೆ. ಹನ್ನೆರಡನೆಯ ಶತಮಾನದ ಶಿಕಾರಿಪುರದ ಶಾಸನಗಳು ಉಲ್ಲೇಖಿಸುವಂತೆ ಆ ಪ್ರದೇಶದಲ್ಲಿ ಹಿಂದೆ ನಂದರ ಆಳ್ವಿಕೆಯಿದ್ದಿತೆಂಬುದನ್ನು ಸೂಚಿಸುತ್ತವೆ. ಕರ್ನಾಟಕದಲ್ಲಿ ಬ್ರಹ್ಮಗಿರಿ, ಅಶೋಕ, ಸಿದ್ದಾಪುರ; ಜಟ್ಟಂಗಿ ರಾಮೇಶ್ವರ, (ಚಿತ್ರದುರ್ಗ ಜಿಲ್ಲೆ) ಮಸ್ಕಿ, ಕೊಪ್ಪಳ, ರಾಯಚೂರು, ಜಿಲ್ಲೆ, ಉದಯಗೋಳಂ, ನಿಟ್ಟೂರು, ಬಳ್ಳಾರಿ ಜಿಲ್ಲೆ, ಹಾಗೂ ಸನ್ನತಿ (ಗುಲ್ಬರ್ಗ ಅಥವಾ ಕಲಬುರ್ಗಿ ಜಿಲ್ಲೆ) ಯಲ್ಲಿ ಅಶೋಕನ ಕಾಲದ ಶಾಸನಗಳು ದೊರೆತಿವೆ. ಇವುಗಳಿಂದ ಕಲ್ಬುರ್ಗಿ, ರಾಯಚೂರು ಬಳ್ಳಾರಿ, ಮತ್ತು ಚಿತ್ರದುರ್ಗ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಅಧೀನದಲ್ಲಿದ್ದವೆಂದು ಹೇಳಬಹುದು.

ದಾವಣಗೆರೆ ಮತ್ತು ಅದರ ಸುತ್ತಲಿನ ಪ್ರದೇಶಗಳು ಸಹ ಮೌರ್ಯರ ಅಧೀನಕ್ಕೊಳಗಾಗಿದ್ದವೆಂದು ಹೇಳಬಹುದು. ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗದಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅಶೋಕನ ಶಾಸನಗಳು

ದಕ್ಷಿಣದ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ. ಬ್ರಹ್ಮಗಿರಿ ಅಶೋಕಸಿದ್ದಾಪುರ ಮತ್ತು ಜಟ್ಟಾಂಗಿರಾಮೇಶ್ವರ ಎಂಬಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಶಾಸನಗಳು ಅವನ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತಗಾಳಾಗಿವೆ. ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಕೆಲವು ಭಾಗಗಳಲ್ಲಿದೆ. ಈಗಿನ ದಾವಣಗೆರೆ ಜಿಲ್ಲೆಯ ಕೆಲ ಭಾಗಗಳನ್ನು ಒಳಗೊಂಡಿದ್ದುದಾಗಿ ತಿಳಿದು ಬಂದಿದೆ.

ಜಗಳೂರು ತಾಲ್ಲೂಕಿನ ಅಸಗೋಡು ಹಿಂದೆ ಅಶೋಕ ಪಟ್ಟಣವೆಂದು ಕರೆಯಲ್ಪಡುತ್ತಿತ್ತು. ಇಲ್ಲಿ ಭೌದ್ಧ ಧರ್ಮವು ಇದ್ದುದರ ಸೂಚನೆಗಳು ಸಿಕ್ಕುತ್ತಿವೆ. ಈ ಪ್ರದೇಶ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂದು ಹೇಳಬಹುದು. ಬ್ರಹ್ಮಗಿರಿಯ ಸಮೀಪದಲ್ಲಿ ಇಟ್ಟಿಗೆಗಳಿಂದ ಕಟ್ಟಿದ ಚೈತ್ಯಾಲಯ ಮತ್ತು ಮೌರ್ಯರ ಕಾಲದ ಅನೇಕ ಅವಶೇಷಗಳು ದೊರಕಿದ್ದು. ಇಸಿಲ ಬ್ರಹ್ಮಗಿರಿಯ ಬಳಿಯೇ ಇದ್ದ ನಗರ ಎಂಬ ವಾದಕ್ಕೆ ಪುಷ್ಟಿದೊರೆತಿದೆ. ಈ ಪ್ರದೇಶದಲ್ಲಿ ಸಿಕ್ಕಿದ ಅವಶೇಷಗಳು ಅಶೋಕನ ಕಾಲಕ್ಕೆ ಸೇರಿದುವೆಂದು ಮಾಟಿರ್‌ವಿಲ್ಹರ್ ಮೊದಲಾದ ಪ್ರಕ್ತಾನಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ಸ್ಥಳದಲ್ಲಿನ ಬೃಹತ್ ಶಿಲಾಯುಗದ ಸಮಾಧಿಗಳನ್ನು ಜನರು ಮೌರ್ಯರ ಮನೆ ಎಂದು ಕರೆಯುತ್ತಿರುವುದು ಅರ್ಥಪೂರ್ಣವಾಗಿದೆ.[೩]

ದಾವಣಗೆರೆ ಸಮೀಪದ ಶಾಮನೂರು ಬೇತೂರು ಅಸಗೋಡುಗಳಲ್ಲಿ ಬೌದ್ದರಿಗೆ ಸಂಬಂಧಿಸಿದ ಕೆಲ ಅವಶೇಷಗಳು ದೊರೆತಿವೆ ಈ ಜಿಲ್ಲೆಯ ಸಮೀಪದ ಸ್ಥಳಗಳಲ್ಲಿ ಮೌರ್ಯರ ಆಳ್ವಿಕೆಗೆ ಸಂಬಂಧ ಪಟ್ಟ ಸ್ಪಷ್ಟವಾದ ಆಧಾರಗಳು ದೊರೆತಿರುವುದರಿಂದ ದಾವಣಗೆರೆ ಮತ್ತು ಅದರ ಸುತ್ತ ಮುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು ಅವರ ದಕ್ಷ ಆಡಳಿತ ಪದ್ದತಿಯಿಂದ ಪ್ರಯೋಜನ ಹೊಂದಿದವೆನ್ನಬಹುದು. ಜೊತೆಗೆ ಅವರ ಸಾಂಸ್ಕೃತಿಕ ಪರಂಪರೆಯ ವ್ಯಾಪ್ತಿಗೆ ಒಳಗಾಗಿರುವುದನ್ನು ಗಮನಿಸಬಹುದು. ಮೌರ್ಯ ಸಾಮ್ರಾಟರ ಉದಾರ ಧ್ಯೇಯಗಳು ಅದರಲ್ಲೂ ಅವರ ಧಾರ್ಮಿಕ ಸಹಿಷ್ಣುತೆ ಇಲ್ಲಿನ ಜನರ ಅನುಕರಣೆಯ ಆದರ್ಶಗಳಾದವು. ಈ ರೀತಿಯಲ್ಲಿ ದಾವಣಗೆರೆ ಹಾಗೂ ಸುತ್ತಲಿನ ಮತ್ತು ಅಣಜಿ ಸುತ್ತಲಿನ ಪ್ರದೇಶಗಳಲ್ಲಿ ಮೌರ್ಯರ ಶಾಸನ ಮತ್ತಿತರ ಅವಶೇಷಗಳು ಹೆಚ್ಚು ದೊರೆಯದೆ ಹೋದರು ಸಹ ಆ ಸಾಮ್ರಾಟರ ಧಾರ್ಮಿಕ ಸಾಂಸ್ಕೃತಿಕ ಪರಂಪರೆಯು ಮುಂದುವರೆಯಿತೆಂದು ಹೇಳಲು ಪಕ್ಕದ ಚಿತ್ರದುರ್ಗ ಪ್ರದೇಶದಲ್ಲಿ ಹೇರಳವಾಗಿ ಶಾಸನ ಅವಶೇಷಗಳು ದೊರೆತಿವೆ. ಇದರಿಂದಾಗಿ ಈ ಪ್ರಾಂತ್ಯವು ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.[೪]

**ಶಾತವಾಹನರ ಆಳ್ವಿಕೆ**

ಮೌರ್ಯ ಸಾಮ್ರಾಜ್ಯ ಪತನವಾದ ನಂತರ ಕ್ರಿ.ಪೂ.೨೨೦ ಕ್ರಿ.ಶ.ಸು.೨೩೦ರವರೆಗೆ ಅಂದರೆ ಸುಮಾರು ೪೫೦ ವರ್ಷಗಳ ದೀರ್ಘಕಾಲ ಭಾರತದಲ್ಲಿ ರಾಜ್ಯವಾಳಿದರು. ಡಾ.ಸುಂಕಷ್ಟಕರ್‌ರವರು ಶಾತವಾಹನರ ಕುಟುಂಬ ಪ್ರದೇಶದಿಂದ ಬಂದಿದೆ ಎಂದು ಹೇಳಿದ್ದಾರೆ. ರಾಜಶೇಖರನ ಕಾವ್ಯ

ಮೀಮಾಂಸೆಯಲ್ಲಿ ವಾತ್ಸಾಯ ಕಾಮಸೂತ್ರದಲ್ಲಿ ಪ್ರಾಕೃತ ಗಥಸಪ್ತಸತಿಯಲ್ಲಿ 'ಹುಲ' ಕುಂತಲದ ರಾಜನೆಂದು ತಿಳಿಸಿದೆ. ಪುರಾಣದಲ್ಲಿ ಗೌತಮಿ ಪುತ್ರ ಶಾತಕರ್ಣಿ ಕುಂತಲ ಪ್ರದೇಶವನ್ನು ಆಳುತ್ತಿದ್ದ ಬಗ್ಗೆ ಗೋತ್ತಾಗುತ್ತದೆ. ಕರ್ನಾಟಕದ ಬಹುಭಾಗವನ್ನಾಳಿದ ಮೊಟ್ಟಮೊದಲನೆಯ ಪ್ರಮುಖ ರಾಜವಂಶದವರಾದ ಈ ಶಾತವಾಹನರು ತಮ್ಮನ್ನು 'ಕುಂತಳ ಸ್ವಾಮಿ' ಗಳೆಂದು ಕರೆದುಕೊಂಡದ್ದುಂಟು (ಇವರಿಗೆ ಆಂದ್ರು, ಆಂಧ್ರ ಭತ್ಯರು, ಶಾತಕರ್ಣಿಗಳು ಎಂದು ಕರೆಯಲಾಗಿದೆ.) ಸುಮಾರು ಮೂವತ್ತು ಮಂದಿ ದೊರೆಗಳಿದ್ದ ಈ ಮನೆತನದ ಬಗ್ಗೆ ಇದುವರೆಗೆ ದೊರೆತಿರುವ ಶಾಸನಗಳು ಅತ್ಯಲ್ಪ.

ದಾವಣಗೆರೆ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ ಇತ್ತು ಎಂಬುದರ ಬಗ್ಗೆ ಖಚಿತ ಮಹಿತಿ ನೀಡುವ ಶಾಸನಗಳು ದೊರೆತಿಲ್ಲ. ಆದರೆ ಬಳ್ಳಾರಿ ಜಿಲ್ಲೆಯ ಪುಲಮಾಯಿ ಶಾಸನದಿಂದ ಶಾತವಾಹನರ ಕೊನೆಯ ಅರಸರು ತಮ್ಮ ಆಳ್ವಿಕೆಯನ್ನು ಇಲ್ಲಿಯವರೆಗೆ ವಿಸ್ತರಿಸಿದ್ದರೆಂದು ತಿಳಿಯಲಾಗಿದೆ. ಪುರಾತತ್ವಕ್ಕೆ ಸಂಬಂಧಿಸಿದ ಆಧಾರಗಳಾದ ನಾಣ್ಯಗಳು ಕಟ್ಟಡಗಳು, ದೇವಾಲಯಗಳು ಅಲಂಕಾರಿಕ ವಸ್ತುಗಳು ಇತ್ಯಾದಿಗಳು ನಮಗೆ ದೊರೆತಿದ್ದರಿಂದ ಹಾಗೂ ಈಗಿನ ಚಿತ್ರದುರ್ಗ ಜಿಲ್ಲೆಯಲ್ಲಿ ಎರಡು ಕಡೆ ನಡೆದ ಭೂ-ಶೋಧನೆಯಿಂದ ಶಾತವಾಹನರ ಬಗ್ಗೆ ಅನೇಕ, ಮಹತ್ವದಾಯಕ ಅಂಶಗಳು ಹೊರಬಿದ್ದಿರುವುದನ್ನು ಈಗಾಗಲೇ ಹಲವು ವಿದ್ವಾಂಸರು ದಾಖಲಿಸಿರುವುದನ್ನು ಗಮನಿಸಬಹುದು.

ಈ ಹಿನ್ನೆಲೆಯಿಂದ ತುಲನಾತ್ಮಕ ಅಧ್ಯಯನ ಮಾಡಿ ಶಾತವಾಹನರ ಚರಿತ್ರೆಯನ್ನು ನಿರೂಪಿಸಬಹುದು. ಚಿತ್ರದುರ್ಗ ತಾಲೂಕಿನ ಚಿಪ್ಪನಕೆರೆಯ ಅನ್ವೇಷಣೆ ನಡೆಸಿದ ಫಲವಾಗಿ ಚಿಪ್ಪನಕೆರೆ ನೆಲೆಯಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಸೀಸದ ನಾಣ್ಯಗಳು ಕರ್ಲೇನಿಯನ್ ಆಗೇಟ್‌ದಿಂದ ತಯಾರಿಸಲಾದ ಮಣಿಗಳು ಮತ್ತು ಕೆಲವುಬಿಳಿ ಬಣ್ಣದ ಮಡಿಕೆಗಳು ದೊರೆತಿರುವುದನ್ನು ಗಮನಿಸಬಹುದು. ಇದರಿಂದಾಗಿ ಚಿಪ್ಪನಕೆರೆ ಮತ್ತು ಅದರ ಸುತ್ತಲಿನ ಪ್ರದೇಶ ಶಾತವಾಹನರ ಕಾಲಕ್ಕೆ ಸೇರಿರಬಹುದೆಂದು ಊಹಿಸಿಸಲು ಅವಕಾಶವಿದೆ. ಹಾಗೇ ಜಗಳೂರು ತಾಲ್ಲೂಕಿನ ಆಕನೂರು ಗ್ರಾಮದ ಬಳಿ ಇದೇ ಕಾಲದ ಬಿಳಿ ಬಣ್ಣದ ರೇಖಾ ಚಿತ್ರಗಳನ್ನೊಳಗೊಂಡ ಮಡಿಕೆಗಳು ದೊರೆತಿವೆ. ಈಗಿನ ಚಿತ್ರದುರ್ಗ ಜಿಲ್ಲೆಯ ಮೋಳಕಾಲ್ಮೂರು ತಾಲೂಕಿನಲ್ಲಿರುವ ಬ್ರಹ್ಮಗಿರಿ ಮತ್ತು ಚಿತ್ರದುರ್ಗ ನಗರದ ಪಶ್ಚಿಮದಿಕ್ಕಿಗಿರುವ ವಿಸ್ತಾರವಾದ ಕಲ್ಲುಗುಡ್ಡಗಳ ಸಾಲಿನಲ್ಲಿರು ಚಂದ್ರವಳ್ಳಿ ಉತ್ಖನನಗಳಿಂದಾಗಿ ಶಾತವಾಹನರ ಆಳ್ವಿಕೆ ಮೇಲೆ ಹೆಚ್ಚಿನ ಬೆಳಕು ಬೀರಿದಂತಾಗಿದೆ. ಡಾ. ಎಂ.ಎಚ್ ಕೃಷ್ಣರವರು ಚಂದ್ರವಳ್ಳಿಯಲ್ಲಿ ದೊರೆತ ಶಾತವಾಹನರ ಮತ್ತು ಅವರ ಮಂಡಲೀಕರ ನಾಣ್ಯಗಳನ್ನು ಪ್ರಾಚ್ಯವಸ್ತು ವಿಶೇಷಗಳನ್ನು ಕೂಲಂಕುಷವಾಗಿ ಅಭ್ಯಾಸ ಮಾಡಿದ್ದಾರೆ. ಚಂದ್ರವಳ್ಳಿಯಲ್ಲಿ ಶಾತವಾಹನರ ನಾಣ್ಯಗಳು , ರೋಮನ್ ಚಕ್ರವರ್ತಿಗಳಾದ ಅಗಸ್ಟಿನ್(ಕ್ರಿ.ಪೂ. ೨೭-೧೪ಕ್ರಿಶ.) ಮತ್ತು ಟೈಬೀರಿಯಸ್ (ಕ್ರಿ.ಶ. ೧೪-೩೭)ರ ನಾಣ್ಯಗಳು ಅಚ್ಚೊತ್ತಿದ ನಾಣ್ಯಗಳು

ಕಾಲೆಟ್‌ಡ್ ಹಾಗೂ ಬಿಳಿ ಬಣ್ಣದ ಚಿತ್ರಗಳುಳ್ಳ ಮಣ್ಣಿನ ಪಾತ್ರೆಗಳು ನಂತರ ಮಾಡಿದ ಉತ್ಖನನದಲ್ಲಿ ಪುನಃ ದೊರೆತಿವೆ.[೫]

ಒಟ್ಟಿನಲ್ಲಿ ಚಿತ್ರದುರ್ಗ ಜಿಲ್ಲೆ ಶಾತವಾಹನ ಆಳ್ವಿಕೆಗೊಳಪಟ್ಟಿದ್ದು ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿದರೆ ಬನವಾಸಿಯಂತೆ ಚಂದ್ರವಳ್ಳಿಯೂ ಸಹ ಆ ಕಾಲದ ವಾಣಿಜ್ಯ ಕೇಂದ್ರವಾಗಿತ್ತು. ಈ ವಾಣಿಜ್ಯ ಕೇಂದ್ರವು ರೋಮ್ ಮುಂತಾದ ಹೊರ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನಿಟ್ಟಿಕೊಂಡಿದ್ದಿತೆಂದು ಅಲ್ಲಿ ದೊರೆತಿರುವ ಕೆಲ ನಾಣ್ಯಗಳ ಆಧಾರದಿಂದ ಹೇಳಬಹುದು ಅಂತೆಯೇ ಜಗಳೂರು ತಾಲ್ಲೂಕಿನ ಆಕನೂರು ಪ್ರದೇಶದಲ್ಲಿ ಈ ಕಾಲಕ್ಕೆ ಸೇರಿದ ಮಡಿಕೆ ಚೂರುಗಳು ದೊರೆತಿವೆ. ಅವುಗಳಲ್ಲಿ ಕಪ್ಪು ಕೆಂಪು ಬಣ್ಣದ ಮಡಿಕೆಗಳು ಬಿಳಿ ವರ್ಣದ ರೇಖಾ ಚಿತ್ರಗಳನ್ನು ಒಳಗೊಂಡಿವೆ. ಈ ಪ್ರದೇಶಗಳಲ್ಲಿ ಹೆಚ್ಚು ಸ್ಪಷ್ಟ ಆಧಾರಗಳು ದೊರೆಯದೇ ಇದ್ದರೂ ಸಹ ಸಮೀಪದ ಚಿತ್ರದುರ್ಗ ಜಿಲ್ಲೆಯ ಹೆಚ್ಚು ಸ್ಪಷ್ಟವಾದ ಆಧಾರಗಳು ದೊರೆತಿವೆ. ಈ ಸಾಂಸ್ಕೃತಿಕ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಶಾತವಾಹನರ ಆಳ್ವಿಕೆ ಹಿಂದೆ ಈ ಪ್ರದೇಶಗಳಲ್ಲಿ ವಿಸ್ತರಿಸಿತು. ಎಂದು ಹೇಳಬಹುದು.

**ಕದಂಬರ ಆಳ್ವಿಕೆ**

ಕರ್ನಾಟಕದ ಚರಿತ್ರೆಯಲ್ಲಿ ಇತರೆ ರಾಜವಂಶಗಳಂತೆ ಕದಂಬರು ಕ್ರಿ.ಶ. ೪–೬ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿ ತಮ್ಮದೆ ಆದ ಸ್ಥಾನವನ್ನು ಗಿಟ್ಟಿಸಿಕೊಂಡಿದ್ದಾರೆ. ದಾವಣಗೆರೆ ಜಿಲ್ಲೆಯವರೆಗೆ ಕದಂಬರ ಅವರ ಆಳ್ವಿಕೆ ವಿಸ್ತರಿಸಿತ್ತೆಂಬುದು ಇದಕ್ಕೆ ಆಧಾರವಾಗಿದೆ. ಎಂಬಂತೆ ಇಲ್ಲಿ ಕೆಲ ಶಾಸನಗಳು ದೊರೆತಿವೆ. ಹಾಗೆಯೇ ಇವುಗಳಿಗೆ ಪೂರಕವೆಂಬಂತೆ ಕೆಲ ಸ್ಮಾರಕಗಳು ಸಹ ಉಳಿದುಕೊಂಡಿವೆ. ಹಾಗಾಗಿ ಲಭ್ಯ ಆಧಾರಗಳನ್ನು ಅನುಸರಿಸಿ ಇವರ ಚರಿತ್ರೆಯನ್ನು ರಚಿಸುವುದು ಅನಿವಾರ್ಯವಾಗಿದೆ. ಶಾತವಾಹನರ ಆಳ್ವಿಕೆ ೨ನೇಯ ಶತಮಾನದ ಹೊತ್ತಿಗೆ ಮುಕ್ತಾಯಗೊಂಡು ಅವರ ಸಾಮ್ರಾಜ್ಯ ಹರಿದು ಹಂಚಿ ಹೋಗುತದ್ದ ಹಾಗೆಯೇ ಈ ಸಾಮ್ರಾಜ್ಯದ ದಕ್ಷಿಣ ಮತ್ತು ಪಶ್ಚಿಮ ಭಾಗಗಳ ಒಡೆತನವನ್ನು ಆಗತಾನೆ ತಲೆ ಎತ್ತಿದ ಕದಂಬರ ವಶವಾಯಿತು. ಹೀಗೆ ಕದಂಬರ ಅಧೀನಕ್ಕೊಳಪಟ್ಟ ಭಾಗಗಳಲ್ಲಿ ದಾವಣಗೆರೆ ತಾಲ್ಲೂಕುನಲ್ಲಿ ಬರುವಂತಹ ಅಣಜಿಯಲ್ಲಿ ದೊರೆತಿರುವ ಶಿವಸ್ಕಂದವರ್ಮನ ಶಾಸನವು ಕದಂಬರ ಇತರೆ ಶಾಸನಗಳ ರಚನಾ ಶೈಲಿಯಲ್ಲಿಯೇ ರಚಿತವಾಗಿದೆ. ಈ ಶಾಸನವು ಐತಿಹಾಸಿಕವಾಗಿ ಹಾಗೂ ವಸ್ತು ವಿಶೇಷತೆಯಲ್ಲಿ ವಿಶಿಷ್ಟವಾದುದಾಗಿದೆ.

ಕ್ರಿ.ಶ.೪೫೦ ಶಾಸನ ನೊಳಂಬರ ಬಗ್ಗೆ ಉಲ್ಲೇಖಯಿದೆ. ನೊಣ್ಣಕ್ಕಸ ಪಲ್ಲವನಿಗೂ ಕದಂಬ ಕೃಷ್ಣವರ್ಮನಿಗೆ ಯುದ್ದ ನಡೆದು ಆ ಯುದ್ದದಲ್ಲಿ ಕೃಷ್ಣವರ್ಮನ ಸೈನ್ಯವು ಸಂಪೂರ್ಣವಾಗಿ ಸೋತು ಹೋದದ್ದನ್ನು ಈ ಶಾಸನ ವರ್ಣಿಸುತ್ತದೆ. ಹಾಗೆ ಸೋಲುಂಟಾದಾಗ ಶಿವಸ್ಕಂದವರ್ಮನು ಭಗ್ನ ಹೃದಯನಾಗಿ ದರ್ಭಶಯನನಾಗಿ ಭೋಗ ವಿಶಕ್ತ ಮಾನಸನಾಗಿ ಸ್ವರ್ಗ ಪ್ರಾಪ್ತನದ

ವಿಷಯವನ್ನು ಶಾಸನ ಹೃದಯಂಗಮವಾಗಿ ವರ್ಣಿಸುತ್ತದೆ. ಇಲ್ಲೇ ನೊಣಕ್ಕಸ ಪಲ್ಲವನೊಡನೆ ಯುದ್ಧಮಾಡಿದ ಕದಂಬ ಕೃಷ್ಣವರ್ಮನು ತ್ರಿಪರ್ವತದಿಂದ ಆಳುತ್ತಿದ್ದು. ಈತ ಕದಂಬರ ಒಂದು ಶಾಖೆಗೆ ಸೇರಿದವನೆಂದು ತಿಳಯಲಾಗಿದೆ[೬]. ಈ ಸೋಲಿನ ಫಲವಾಗಿ ಮರಣ ಹೊಂದಿದ ಶಿವಸ್ಕಂದವರ್ಮ ಕೇಕೆಯ ಕುಲದವನೆಂದೂ ಪರಮ ಮಹಾವೀರನೆಂದು ಸೋಮವಂಶಕ್ಕೆ ಸೇರಿದವನೆಂದು ಶಾಸನ ತಿಳಿಸುತ್ತದೆ. ಬಹುಶಃ ಕೇಕೆಯ ರಾಜಪುತ್ರಿಯನ್ನು ಮದುವೆಯಾಗಿದ್ದ ಕೃಷ್ಣವರ್ಮನಿಗೆ ಇವರು ಪಲ್ಲವರ ವಿರುದ್ಧ ಯುದ್ಧದಲ್ಲಿ ಸಹಾಯ ನೀಡಿ ಅಲ್ಲಿ ಉಂಟಾದ ಸೋಲಿನಿಂದ ನಿರಾಸೆಗೊಂಡು ತನ್ನ ಪ್ರಾಣಾರ್ಪಣೆ ಮಾಡಿದಂತೆ ತೋರುತ್ತದೆ.

'ಇವನ ವೀರ ಶೌರ್ಯ ವಿಕ್ರಮ ಪ್ರತಾಪ' ಗಳಿಂದ ಕೂಡಿದವನೆಂದು ಶಾಸನ ಶ್ಲಾಘಿಸುತ್ತದೆ. ಈ ಶಾಸನದ ಭಾಷೆ ಸಂಸ್ಕೃತವಾಗಿದ್ದರು ಶೈಲಿ ಸರಳವಾಗಿದೆ. ಈ ಶಾಸನದ ಕೊನೆಯಲ್ಲಿ ಮನುಷ್ಯನ ಯಶಸ್ಸು ಎಲ್ಲಿಯವರೆಗೆ ಲೋಕದಲ್ಲಿ ಪ್ರಚಲಿತದಲ್ಲಿರುವುದೋ ಅಲ್ಲಿಯವರೆಗೆ ಅವನು ಸ್ವರ್ಗಸುಖವನ್ನು ಅನುಭವಿಸುತ್ತಾನೆ ಎಂಬವಾಕ್ಯ ಸರ್ವಕಾಲೀಕ ಸತ್ಯವಾಗಿದೆ. ರಾಜಕೀಯ ಚರಿತ್ರೆಯ ಜೊತೆಗೆ ಸಾಮಾಜಿಕ ಧಾರ್ಮಿಕ ನಡುವಳಿಕೆಗಳು ಹೀಗಿದ್ದವು ಎಂಬುದಕ್ಕೆ ಈ ಶಾಸನ ಕೈಗನ್ನಡಿ ಎನ್ನಬಹುದು. ಅಣಜಿ ಯಲ್ಲಿನ ಕೋಟೆ ಮತ್ತು ಕೆಲ ಆವಶೇಷಗಳು ಇವರ ಕಾಲದ್ದೆನ್ನಬಹುದು. ಈ ಆಧಾರಗಳಿಂದ ಅಣಜಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲೂ ಕದಂಬರ ಆಳ್ವಿಕೆ ವಿಸ್ತರಿಸಿತ್ತು ಎಂದು ಹೇಳಬಹುದು.[೭]

**ಬಾದಾಮಿ ಚಾಲುಕ್ಯರ ಆಳ್ವಿಕೆ**

ಕನ್ನಡ ನಾಡಿನ ಘನತೆವೆತ್ತ ಅರಸುಮನೆತನಗಳಲ್ಲಿ ಚಾಲುಕ್ಯಮನೆತನವು ಒಂದು ದಕ್ಷಿಣ ಭಾರತದಲ್ಲಿ ಚಾಲುಕ್ಯ ಮನೆತನದ ಪ್ರಾಭಾವವು ಗಣನೀಯವಾದುದಾಗಿದೆ. ಕ್ರಿ.ಶ. ೬ನೇಯ ಶತಮಾನದಿಂದ ಕ್ರಿ.ಶ.೮ನೇಯ ಶತಮಾನದವರೆಗೂ ಪುನಃ ಕ್ರಿ.ಶ.೧೦ನೇ ಶತಮಾನದಿಂದ ಕ್ರಿ.ಶ. ೧೨ನೇಯ ಶತಮಾನದವರೆಗೂ ಇವರು ಆಳ್ವಿಕೆ ನಡೆಸಿದರು. ಬಾದಾಮಿಯ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು ಮತ್ತು ವೆಂಗಿಯ ಚಾಲುಕ್ಯರು ಎಂಬ ಮೂರು ಶಾಖಾ ಮನೆತನಗಳು ಚಾಲುಕ್ಯರಲ್ಲಿ ಕಂಡು ಬರುತ್ತವೆ. ಅಖಂಡ ಕರ್ನಾಟಕದ ಪ್ರಪ್ರಥಮ ಚಕ್ರವರ್ತಿಗಳಾಗಿ ಬಾದಾಮಿಯ ಚಾಲುಕ್ಯರು ಇನ್ನೂರ ವರ್ಷಗಳ ಕಾಲ ಕ್ರಿ.ಶ.೫೫೩ ರಿಂದ ಕ್ರಿ.ಶ.೭೫೩ ವೈಭವದಿಂದ ಆಳಿದರು.

ರಾಷ್ಟ್ರಕೂಟ ದೊರೆ ೨ನೇಯ ಕರ್ಕನನ್ನು ಚಾಲುಕ್ಯವಂಶದ ಇಮ್ಮಡಿ ತೈಲಪನು ಅಧಿಕಾರದಿಂದ ಕೆಳಗಿಳಿಸಿ ಚಾಲುಕ್ಯವಂಶವನ್ನು ಪುನಃ ಸ್ಥಾಪಿಸಿದನು ಅದರ ವೈಭವವನ್ನು ಮತ್ತೆ ಕಾಣುವಂತೆ ಮಾಡಿದನು. ಕಲ್ಯಾಣಿಯನ್ನು ರಾಜಧಾನಿಯನ್ನಾಗಿಟ್ಟುಕೊಂಡು ಆಳಿದುದ್ದರಿಂದ ಇವರನ್ನು ಕಲ್ಯಾಣಿಯ ಚಾಲುಕ್ಯರೆಂದು ಕರೆಯುತ್ತಾರೆ. ಇವರೂ ಸಹ ರಾಷ್ಟ್ರಕೂಟರಂತೆ ಎರಡು ಶತಮಾನಗಳ ಮೇಲ್ಪಟ್ಟು ರಾಜ್ಯವನ್ನಾಳಿದ ನಂತರ ಬಾದಾಮಿ ಚಾಲುಕ್ಯರು ಆಳ್ವಿಕೆಯನ್ನು ಮಾಡಿದ್ದರು.

ಬಾದಾಮಿ ಚಾಲುಕ್ಯರು ತಮ್ಮ ಆಳ್ವಿಕೆಯ ಅವಧಿಯಲ್ಲಿ ದಾವಣಗೆರೆ ಜಿಲ್ಲೆಯ ಕೆಲವು ಪ್ರದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆಂಬುದನ್ನು ಇಲ್ಲಿನ ಶಾಸನಗಳಿಂದ ತಿಳಿಯಬಹುದು ಜಯಸಿಂಹನು ಬಾದಾಮಿ ಚಾಲುಕ್ಯವಂಶದ ಮೂಲ ಪುರುಷ. ಇವನ ಬಗ್ಗೆ ಖಚಿತ ಸಂಗತಿಗಳು ನಮಗೆ ತಿಳಿದು ಬಂದಿಲ್ಲ ಇವನ ನಂತರ ಅಧಿಕಾರಕ್ಕೆ ಬಂದ ಮೊದಲನೇಯ ಪುಲಿಕೇಶಿಯು (ಕ್ರಿ.ಶ.೫೪೦–೫೬೬ರವರೆಗೆ) ಸಮರ್ಥ ದೊರೆ ಎನಿಸಿ ಉತ್ತಮ ಕಾರ್ಯಗಳನ್ನು ಕೈಗೊಂಡನೆಂದು ಬಾದಾಮಿ ಶಾಸನದಿಂದ ತಿಳಿದು ಬರುತ್ತದೆ. ಈತನಿಗೆ ಕೀತಿವರ್ಮ, ಮಂಗಳೇಶ ಎಂಬ ಇಬ್ಬರು ಮಕ್ಕಳಿದ್ದು ತಂದೆಯ ಮರಣದ ನಂತರ ಆಳ್ವಿಕೆ ನಡೆಸಿದ್ದರೆಂದು ತಿಳಿದುಬರುತ್ತದೆ.[೮] ಇಮ್ಮಡಿ ಪುಲಕೇಶಿಯ ಮರಣದ ನಂತರ ಈತನ ಮಗ ಒಂದನೇ ವಿಕ್ರಮಾದಿತ್ಯನು (ಕ್ರಿ.ಶ.೬೫೫ ರಿಂದ ೬೮೧) ಆಳ್ವಿಕೆ ನಡೆಸಿ ಚಾಲುಕ್ಯಮನೆತದ ಕೀರ್ತಿ ಮತ್ತು ಪ್ರತಿಷ್ಠೆಗಳನ್ನು ಪುನಃ ಉಳಿಸಿಕೊಂಡನು ಇವನ ನಂತರ ವಿನಿಯಾದಿತ್ಯನು(ಕ್ರಿ.ಶ.೬೮೧, ೬೯೬)ಅಧಿಕಾರಕ್ಕೆ ಬಂದನು. ಇವನ ಕಾಲಕ್ಕೆ ಸೇರಿದ ಶಾಸಶನವೊಂದು ಹರಿಹರದಲ್ಲಿ ದೊರೆತಿದೆ. ಈ ಶಾಸನವು ಇವರ ವಂಶದ ಮೂಲವನ್ನು ಈ ಮುಂದಿನಂತೆ ವಿವರಿಸುತ್ತದೆ. ಈ ಮೇಲಿನ ಶಾಸನಗಳ ಆಧಾರದಿಂದ ಬಾದಾಮಿ ಚಾಲುಕ್ಯರ ಆಳ್ವಿಕೆಯು ಈಗಿನ ಅಣಜಿ ಪ್ರದೇಶವು ಅವರ ಆಳ್ವಿಕೆಗೆ ಒಳಪಟ್ಟಿತ್ತೆಂಬುದನ್ನು ಅವರ ಕಾಲದಲ್ಲಿನ ರಚನೆಯಾದ ಅನೇಕ ದೇವಾಲಯಗಳು ಈ ಭಾಗದಲ್ಲಿ ಕಂಡುಬರುವುದರೊಂದಿಗೆ ಅಂದಿನ ಕಾಲದ ಸಾಮಾಜಿಕ ಧಾರ್ಮಿಕ ಸ್ಥಿತಿಗಳನ್ನು ತಿಳಿಸಿಕೊಡುತ್ತವೆ.

**ರಾಷ್ಟ್ರಕೂಟರ ಆಳ್ವಿಕೆ ಆಡಳಿತ**

ಎಂಟನೇಯ ಶತಮಾನದ ಮಧ್ಯಭಾಗದ ವೇಳೆಗೆ ದಖ್ಖನ್ನಿನ ಆಧಿಪತ್ಯವು ಚಾಲುಕ್ಯರ ತತ್ತರಿಸುವ ಕೈಗಳಿಂದ ಜಾರಿ ರಾಷ್ಟ್ರಕೂಟರ ಕೈ ಸೇರಿತು. ಅವರ ಪ್ರಬಾಲ್ಯವು ಸುಮಾರು ೧೦ನೇ ಶತಮಾನದ ಕೊನೆಯವರೆಗೂ ಮುಂದುವರಿದಿತ್ತು ವಿಂಧ್ಯಪರ್ವತ ಉತ್ತರ ಮತ್ತು ದಕ್ಷಿಣಗಳ ಆಸ್ಥಿರ ರಾಜಕೀಯದಲ್ಲಿ ಅವರು ನಿರ್ಣಾಯಕ ಪಾತ್ರವನ್ನು ನಿರ್ವಹಿಸಿದರು. ಅಂದಿನ ರಾಜಕಿಯದಲ್ಲಿ ಗುರ್ಜರರು ಪ್ರತಿಹಾರರು, ಪಾಲರು, ಗಂಗರು, ವೆಂಗಿ ಚಾಲುಕ್ಯರು, ಪಲ್ಲವರು ಚೋಳರು ಮತ್ತು ಇತರ ಅನೇಕ ಸಣ್ಣಪುಟ್ಟ ರಾಜರುಗಳೂ ಆಳ್ವಿಕೆ ಮಾಡಿದ್ದಾರೆ. ವಾಸ್ತವವಾಗಿ ಈ ಶತಮಾನದಲ್ಲಿ ರಾಜಮನೆತನಗಳ ಹೋರಾಟದ ಚದುರಂಗದ ಹಾಸಿನಲ್ಲಿ ರಾಷ್ಟ್ರಕೂಟರು ಉತ್ತಮವಾದ ಸ್ಥಾನದಲ್ಲೇ ಇದ್ದಂತೆ ತೋರುತ್ತಿತ್ತು. ಉತ್ತರದಲ್ಲಿ ಅವನು ಮಾಡಿದ ಸಾಹಸಗಳು ಪಡೆದ ಗೆಲವುಗಳು ವಿಶೇಷವಾಗಿ ಮನ್ನಣೆಗೆ ಪಾತ್ರವಾದದ್ದೇ ಅಲ್ಲದೇ ದಕ್ಷಿಣದ ಶಕ್ತಿಯೆಂದು ಉತ್ತರದಲ್ಲಿ ಹತೋಟಿಯನ್ನು ಇಟ್ಟಕೊಂಡ ಸಂದರ್ಭ ಅಪೂರ್ವ ನಿರ್ದೇಶನವಾಯಿತು. ಅದು ಬಹು ಅಲ್ಪ ಕಾಲವೆಂದವರು ಅಪವಾದವೆನ್ನಿಸುವ ರೀತಿಯಲ್ಲಿ ತನ್ನ ಹತೋಟಿಯನ್ನು ಸ್ಥಾಪಿಸಿತು ಅಷ್ಟೇ ಅಲ್ಲದೆ ಕಲೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿಯೂ ತಮ್ಮ ಅನನ್ಯ ಕೋಡುಗೆಗಳಿಂದಾಗಿ ಅವರು ಪ್ರಶಂಸೆಗೊಳಪಟ್ಟಿದ್ದಾರೆ. ಆ ಕಾಲದಲ್ಲಿ ಕಲೆ ಸಾಹಿತ್ಯಗಳು ಸಮೃದ್ದಿಯಾದವು ಜೊತೆಗೆ ವೈವಿಧ್ಯ ಪೂರ್ಣವೂ ಆಗಿದ್ದವು.[೯]

ರಾಷ್ಟ್ರಕೂಟರು ಕ್ರಿ.ಶ.೯೬೪ ರ ಕದಂಬಳಿಗೆಯಲ್ಲಿ ಕನ್ನಯ್ಯ ಆಳುತ್ತಿದ್ದನು ಆಗ ಲೋಕಯ್ಯ ಎಂಬುವವನು ನಾಡನ್ನು ೧೦೦೦ ಆಳುತ್ತಿದ್ದನು. (ಚೋಳರ ನಿಡಗಲ್ಲು ರಾಯದುರ್ಗ ಪಾಪದೇವ). ನೊಳಂಬವಾಡಿ ೩೨೦೦೦ರಲ್ಲಿ ಜಗಳೂರು ಪ್ರದೇಶ ಸೇರಿತ್ತು. ಎಂದು ತಿಳಿದು ಬರುತ್ತದೆ. ರಾಷ್ಟ್ರಕೂಟ ಮನೆತನಗಳಲ್ಲಿ ಮಾಳಖೇಡದ ಶಾಖೆ ಪ್ರಮುಖವಾದುದು ದಾವಣಗೆರೆ ತಾಲ್ಲೂಕಿನ ರಾಷ್ಟ್ರಕೂಟರ ಶಾಸನಗಳು ಬಹುಸಂಖ್ಯೆಯಲ್ಲಿ ದೊರೆಯದಿದ್ದರೂ ಈ ಭಾಗದಲ್ಲಿ ಇವರ ಆಳ್ವಿಕೆ ಸುಮಾರು ಕ್ರಿ.ಶ.೭೯೮ ರಿಂದ ಕ್ರಿ.ಶ.೯೮೨ ರವರೆಗೆ ಇದ್ದಿತೆಂದು ಈ ತಾಲ್ಲೂಕು ವಿವಿಧ ಕಡೆ ದೊರೆತ ಶಾಸನಗಳು ದೃಢ ಪಡಿಸಿವೆ. ಭಾರತದಲ್ಲೇ ಯಶಸ್ವಿ ರಾಜಕಿಯ ಶಕ್ತಿಯಾಗಿ ಮೆರೆದು ರಾಷ್ಟ್ರಕೂಟ ಸಾಮ್ರಾಜ್ಯದ ಹಿರಿಮೆ ಅವರ ಇಂದಿನ ಮಹಾರಾಷ್ಟ್ರ, ಕರ್ನಾಟಕದ, ಮಧ್ಯ ಪ್ರದೇಶದ ಹಲವು ಭಾಗಗಳು ಮತ್ತು ಆಂಧ್ರಪ್ರದೇಶ , ತಮಿಳುನಾಡುಗಳನ್ನು ಒಳಗೊಂಡಿದ್ದಿತು.[೧೦]

**ಕಲ್ಯಾಣಿ ಚಾಲುಕ್ಯರ ಆಳ್ವಿಕೆ**

ಕಲ್ಯಾಣಿಯನ್ನು ರಾಜಧಾನಿಯನ್ನಾಗಿಟ್ಟುಕೊಂಡು ಕ್ರಿ.ಶ.೯೭೭ ರಿಂದ೧೧೯೮ರ ವರೆಗೆ ಆಳ್ವಿಕೆ ಮಾಡಿದ ಇವರನ್ನು ಕಲ್ಯಾಣಿ ಚಾಲುಕ್ಯರೆಂದು ಕರೆಯಲಾಗುತ್ತದೆ. ರಾಷ್ಟ್ರಕೂಟ ದೊರೆ ೨ನೇ ಕರ್ಕನನ್ನು ಚಾಲುಕ್ಯವಂಶದ ಇಮ್ಮಡಿ ತೈಲಪನ್ನು ಅಧಿಕಾರದಿಂದ ಕೇಳಗಿಳಿಸಿ ಈ ವಂಶವನ್ನು ಸ್ಥಾಪಿಸಿದನು. ಕಲ್ಯಾಣಿ ಚಾಲುಕ್ಯ ವಂಶದಲ್ಲಿ ಶ್ರೇಷ್ಠನಾದ ೬ನೇ ವಿಕ್ರಮಾದಿತ್ಯನು ಕ್ರಿ.ಶ.೧೦೭೬–೧೧೨೬ ಮತ್ತು ೫೦ ವರ್ಷಗಳ ಕಾಲದವರೆಗೆ ದಕ್ಷತೆಯಿಂದ ಆಳಿದನು. ಇವನಿಗೆ ವಿಕ್ರಮಾಂಕ ತ್ರಿಭುವನ ಮಲ್ಲ ಎಂಬ ಬಿರುದುಗಳಿದ್ದವು. ಚೋಳರೊಡನೆ ಕೈಗೊಂಡ ಯುದ್ಧಗಳಲ್ಲಿ ಸಾಮಂತ ಅರಸರಾದ ಉಚ್ಚಂಗಿಯ ಪಾಂಡ್ಯರು ಇವನಿಗೆ ಹೆಚ್ಚಿನ ಸಹಾಯ ನೀಡಿದ್ದರು. ಕ್ರಿ.ಶ.೧೦೮೩ರಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿಗೆ ಮಹಾ ಮಂಡಲೇಶ್ವರನಾಗಿದ್ದನೆಂದು ಶಿವಮೊಗ್ಗ ಜಿಲ್ಲೆಯ ಶಾಸನವೊಂದರಿಂದ ತಿಳಿಯುತ್ತದೆ. ದಾವಣಗೆರೆಗೆ ವಾಯುವ್ಯ ಭಾಗದಲ್ಲಿ ಬರುವಂತಹ ಬೇತೂರು, ಎಲೇಬೇತೂರು ಗ್ರಾಮ ಇವನ ಆಡಳಿತದ ಕೇಂದ್ರವಾಗಿ ಸ್ಥಾನವಾಗಿತ್ತೆಂದು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ದಾವಣಗೆರೆ ಶಾಸನವೊಂದರಲ್ಲಿ ವಿಕ್ರಮಾದಿತ್ಯ ತ್ರಿಭುವನಮಲ್ಲನು ರಾಷ್ಟ್ರಪತಿ, ವಿಷಯಪತಿ, ಗ್ರಾಮ ಕೂಟಕ, ಆಯುಕ್ತಕ, ನಿಯುಕ್ತಕ, ಅಧಿಕಾರಿಕ, ಮಹತ್ತರ, ಮತ್ತಿತರಿಗೆ ಆಜ್ಞಾಪಿಸಿದುದ್ದನ್ನು ಹೇಳಲಾಗಿದೆ. ಇವರೆಲ್ಲರು ಕೆಳದರ್ಜೆಯ ಅಧಿಕಾರಿಗಳಾಗಿರಬಹುದೆಂದು ತೋರುತ್ತದೆ. ಕಲ್ಯಾಣದ ಚಾಲುಕ್ಯರು ಆಳ್ವಿಕೆಯನ್ನು ತಿಳಿಯಲು ಅನೇಕ ಶಾಸನಗಳು ದೇವಾಲಯಗಳು ಪ್ರಮುಖ ಆಧಾರಗಳಾಗಿವೆ. ಅಸಗೋಡು ಗ್ರಾಮದ ಕೆರೆತೂಬಿನ ಬಳಿ ದೊರೆತಿರುವ ಶಾಸನವು ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸೇರಿದ್ದು ಅವರ ಅರಸನಾದ ದಶವರ್ಮನ ದೊರೆ ಸತ್ಯಾಶ್ರಯನ ಕಾಲಕ್ಕೆ ಸೇರಿದ್ದು. ಕ್ರಿ.ಶ.೧೦೧೦ ಗ್ರಾಮದ ಶಂಭೂಲಿಂಗೇಶ್ವರ ದೇವಾಲಯದ ದಕ್ಷಿಣದ ಭಾಗದಲ್ಲಿರುವ ಇನ್ನೊಂದು ಶಾಸನವು ಕಲ್ಯಾಣದ ಚಾಲುಕ್ಯರ ಒಂದನೇಯ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ್ದು.[೧೧]

ಇವರ ಕಾಲ ಕ್ರಿ.ಶ.೧೦೫೪ ದೇವಾಲಯದ ಮತ್ತೊಂದು ಶಾಸನವು ೬ನೇಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಅಸಗೋಡಿನ ಶ್ರೀ ಸ್ವಯಂಭು ದೇವರಿಗೆ ಭೂಮಿ ದಾನ ನೀಡಿದ ವಿವರ ಇದೆ ಇವರ ಕಾಲ ಕ್ರಿ.ಶ. ೧೧೦೬ ಹೀಗೆ ಕೆಲವು ಆಧಾರಗಳಲ್ಲಿ ಕಲ್ಯಾಣದ ಚಾಲುಕ್ಯರು ಈ ಭಾಗದಲ್ಲಿ ಆಳ್ವಿಕೆಯನ್ನು ನಡೆಸಿದ್ದನ್ನು ದೃಢಪಡಿಸುತ್ತವೆ.೮

**ನೊಳಂಬರ ಆಳ್ವಿಕೆ**

ಈ ಪ್ರದೇಶದಲ್ಲಿ ಗಂಗರು ಚಾಲುಕ್ಯರು, ಚೋಳರು ಮತ್ತು ಹೋಯ್ಸಳರ ಮಹಾ ಸಾಮಂತರಾಗಿ ಆಳ್ವಿಕೆ ಮಾಡಿದ ನೊಳಂಬರು ಖ್ಯಾತಿವೆತ್ತ ಸಾಮಂತ ಕುಲದವರಾಗಿದ್ದು, ಇವರು ಆಳುತ್ತಿದ್ದ ಒಟ್ಟು ಪ್ರದೇಶವನ್ನು ನೊಳಂಬವಾಡಿಯನ್ನು ೩೨೦೦೦ ನಾಡು ಎಂದು ಕರೆಯುತ್ತಿದ್ದರು. ಅಣಜಿ ಮತ್ತು ಸುತ್ತಮುತ್ತಲಿನ ಪ್ರದೇಶಗಳೆಲ್ಲವು ನೊಳಂಬರ ಆಳ್ವಿಕೆಗೆ ಒಳಪಟ್ಟಿದ್ದ ನಂತರ ನೊಳಂಬರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಿಲಾ ಶಾಸನವು ಅಣಜಿಯ ಗುಡ್ಡಪ್ಪನ ಹೊಲದಲ್ಲಿ ದೊರೆತ ಶಾಸನ ಇದರ ಕಾಲ ಕ್ರಿ.ಶ೪೫೦ (ದಾ.ಶಾ.ಸಂ.೧೬೧) ಇದು ಪ್ರಾಚೀನ ಶಿಲಾಶಾಸನ ಮತ್ತು ಸಂಸ್ಕೃತ ಭಾಷೆಯ ಶಾಸನ ಇದರಲ್ಲಿ ನೊಣಕ್ಕಸಪಲ್ಲವನಿಗೂ ಕದಂಬ ಸಾಮ್ರಾಜ್ಯದಲ್ಲಿ ಸಾಮಂತನಾಗಿದ್ದ ಕೃಷ್ಣವರ್ಮನಿಗೂ ಘನಘೋರ ಯುದ್ಧ ನಡೆದಾಗ ಕೃಷ್ಣವರ್ಮನು ಸೋಲುತ್ತಾನೆ. ಈತನಿಗೆ ಸಹಾಯ ಮಾಡಿದ ಶಿವಸ್ಕಂದವರ್ಮ ಭಗ್ನ ಮನಸ್ಕನಾಗಿ ಮರಣ ಹೊಂದುತ್ತಾನೆ.

ಶಿವಸ್ಕಂದವರ್ಮನು ಸೋಮವಂಶದ ಕೇಕೆಯ ಕುಲದವನಾಗಿ ವೀರಶೌರ್ಯ ಪ್ರತಾಪಗಳಿಂದ ಕೂಡಿದ್ದು ಕೃಷ್ಣವರ್ಮನು ಕೇಕೆಯ ರಾಜಪುತ್ರಿಯನ್ನು ವಿವಾಹವಾಗಿದ್ದರಿಂದ ಶಿವಸ್ಕಂದನು ಈತನಿಗೆ ಯುದ್ದದಲ್ಲಿ ಸಹಾಯ ಮಾಡಿದ್ದ. ಕೃಷ್ಣವರ್ಮನು ಶಾಂತಿವರ್ಮನ ಸೋದರ ಮಹಾವೀರ ತ್ರಿಪರ್ವತದಿಂದ ಆಳುತ್ತಿದ್ದ. ಪೂರ್ವಕದಂಬರ ಶಾಖೆಗೆ ಸೇರಿದವನು ನೊಣಕ್ಕಸ ಪಲ್ಲವನ ಹೆಸರು ಬೇರೆಲ್ಲೂ ಉಲ್ಲೇಖಗೊಂಡಿಲ್ಲ ಕ್ರಿ.ಶ. ೧೧೨೫ ರ ಕಾಲದ ಶಾಸನದಲ್ಲಿ ಅರಸನನ್ನು ವಾರಣಾಂಕುಶ ತೆಲುಂಗರಾಯ, ಬಜಬಲಭೀಮ ಮುಂತಾದ ಬಿರುದುಗಳಿಂದ ಸುಂದವರವಾಗಿ ವರ್ಣಿಸಿದೆ.

ಕ್ರಿ.ಶ. ೧೦೫೪ ರ ಅಸಗೋಡು ಶಂಭುಲಿಂಗೇಶ್ವರ ದೇವಾಲಯದ ಶಾಸನದಲ್ಲಿ ಪಲ್ಲವಕುಲ ವೈಭವ ನರಸಿಂಗದೇವನು ಚಾಲುಕ್ಯರ ಲೋಕ್ಯದೇವನ ಪಾದ ಕಮಲಗಳಲ್ಲಿ ಆಶ್ರಯ ಪಡೆದು ಅನೇಕ ಪ್ರಾಂತ್ಯಗಳನ್ನು ವೈಭವದಿಂದ ಆಳುತ್ತಿರುವುದನ್ನು ತಿಳಿದು ಬಂದಿದೆ. ಇದೇ ಶಾಸನದಿಂದ ನೊಳಂಬ ನರಸಿಂಗದೇವನ ಮಗ ಕುಮಾರ ದೋರೆಯ್ಯನು ಉಚ್ಚಂಗಿಯಲ್ಲಿ ತನ್ನ ತಂದೆಯ ಸಾಮಂತನಾಗಿ ಕದಂಬ ನಾಡನ್ನು ಆಳುತ್ತಿದ್ದ ಮಣಿಯ ನಾಗತಿಯರಸ ಅಸಗೋಡಿನ ಶಂಭುಲಿಂಗೇಶ್ವರ ದೇವಾಲಯಕ್ಕೆ ಮತ್ತು ಕಾಳಮುಖಸ್ಥಾನ ಕಾರ್ತರ ಮಠಕ್ಕೆ ನಿಡಿದ ದತ್ತಿ ಈ ದೇವಾಲಯದ ನಿರ್ಮಾಣದ ಮೇಲ್ವಿಚಾರಣೆ ನಡೆಸಿದ ಅವನಿಗೆ ನೀಡಿದ ಸಂಭಾವನೆಯ ವಿಷಯಗಳು ಇದೇಶಾಸನದಲ್ಲಿ ನಿರೂಪಿಸಲ್ಪಟ್ಟಿವೆ.[೨]

ಜಗಳೂರು ತಾಲ್ಲೂಕು ಮುಷ್ಟೂರಿನ ಕಲ್ಲೇಶ್ವರ ದೇವಾಲಯದ ಕ್ರಿ.ಶ.೯೨೦ರ ಶಾಸನವು ನೊಳಂಬವಾಡಿ ಮತ್ತಿತರ ನಾಡುಗಳನ್ನು ಆಳುತ್ತಿದ್ದ ಎಂದು ಎರಡನೆಯ ಶಾಸನವು ಜನಿಯ್ಯನ ಮಗ ನಾಥವರ್ಮನು ಮುಷ್ಟೂರಿನ ಕಲ್ಲೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನೆಂದಿದೆ ತಿಳಿದು ಬರುತ್ತದೆ. ಈ ಮೇಲ್ಕಾಣಿಸಿದ ಶಾಸನಗಳಿಂದ ಈ ಪ್ರದೇಶದಲ್ಲಿ ಆಳಿದ ಕದಂಬರು ನೊಳಂಬರು, ಸೇವುಣರು, ಪಲ್ಲವರು ಮುಂತಾದವರ ವಿಚಾರ ತಿಳಿಯುತ್ತವೆ.

**ಸೇವುಣರ ಆಳ್ವಿಕೆ**

ಕ್ರಿ.ಶ. ಸುಮಾರು ೮೩೫-೧೩೧೩ವರೆಗೆ ಆಳ್ವಿಕೆ ,ಆಡೊದ ಕರ್ನಾಟಕದಲ್ಲಿ ಸೇವುಣರು ವಿಶೇಷವಾಗಿ ದೇವಗಿರಿಯ ಯಾದವರೆಂದೇ ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಹೇಮಾವಹಿಯ 'ರಾಜಪ್ರಶಸ್ತಿಯು' ಈ ರಾಜವಂಶದ ಎರಡನೇಯ ದೊರೆ ಸೇವುಣಚಂದ್ರನಿಂದ ಈ ವಂಶಕ್ಕೆ ಸೇವುಣ ವಂಶವೆಂದು ಹೆಸರು ಬಂದಿತರೆಂದು ತಿಳಿಸುತ್ತದೆ. ಹೋಯ್ಸಳರು-ಚಾಲುಕ್ಯರು ಕಾಕತೀತಯ ಅವರನ್ನು ಸೇವುಣರೆಂದು ಕರೆದಿದ್ದಾರೆ. ಅಂದರೆ ಸಮಕಾಲೀನ ರಾಜರುಗಳು ಇವರನ್ನು ಸೇವುಣರೆಂಬ ಹೆಸರಿನಿಂದ ಕೆರೆಯುತ್ತಿದ್ದರು.

ದೇವಗಿರಿಯ ಸೇವುಣರನ್ನು ಕುರಿತ ಶಾಸನಗಳು ಮತ್ತು ಅವರ ಕಟ್ಟಿಸಿದ ದೇವಾಲಯಗಳು ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ದೊರೆತಿವೆ. ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ಹರಿಹರ ಜಗಳೂರು, ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿ ತಾಲೂಕುಗಳಲ್ಲಿ ಇವರ ಶಾಸನಗಳು ದೊರೆತಿರುವುದರಿಂದ ಈ ಜಿಲ್ಲೆಯ ಕೆಲವು ಭಾಗದಲ್ಲಿ ಅವರ ಅಧೀನಕ್ಕೋಳಪಟ್ಟವೆಂಬುದು ಸ್ಪಷ್ಟವಾಗುತ್ತದೆ. ಸೇವುಣರಾಜ್ಯವು ಚಿತ್ರದುರ್ಗ, ಶಿವಮೊಗ್ಗ, ಹಾಸನ, ಧಾರವಾಡ, ವಿಜಾಪುರ, ರಾಯಚೂರು, ಬೀದರ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರದೇಶಗಳನ್ನೊಳಗೊಂಡಿತ್ತು. ಅಣಜಿ ಪ್ರದೇಶದಲ್ಲಿ ಸೇವುಣರ ಆಳ್ವಿಕೆ ಸಂಬಂಧಿಸಿದಂತೆ ಜಗಳೂರು ತಾಲ್ಲೂಕಿನ ಕಲ್ಲೇದೇವಪುರ ಗ್ರಾಮದ ಶಾಸನವು ಕ್ರಿ.ಶ. ೧೨೭೯ರದ್ದಾಗಿದ್ದು ಅರಸರನ್ನು ಸೈನ್ಯ ಸಮಯ ಸಂವರ್ಧನ ಸರಳ ಸಮಯ ಸಮುದ್ದರಣ ಕ್ಷಿತಿಪತಿ ಮತ್ತು ಮಾತಂಗ ಪೆಂಡಾರಲಕ್ತೀದೇವ ತ್ರಿಕುಳ ಕುಳಕಾಂತರ ಮಾಳುವುಣಾರ್ದ್ದವ ದಂಡ ಮುಂತಾದ ಆಕರ್ಷಕ ಹೆಸರಿನಿಂದ ಉಲ್ಲೇಖಿಸಿರುವುದು. ಕಂಡುಬಂದಿದೆ. ಎಲೇಬೇತೂರು ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವೊಂದು ಗಮನಾರ್ಹವಾಗಿದೆ ಮಹಾದೇವನ ರಾಜ್ಯರಿಗೆ ಗೋಮಳ ಸರಸಿಜರೆನಿಸಿದ ಚಟ್ಟರಾಜ ಹಾಗೂ ಕೂಚರಸರಳ ತಂಗಿ ಮೈಳುಬಾಯಿ ಆಕೆ ಹಾಗೂ ದಾಯ್ಯ ಎಂಬುವರಿಗೆ ಸೇನ ಜನಿಸಿದ ಹೆಮ್ಮೆನಬೇತೂರು ಡಿಂಗರ ಮಲ್ಲಯ ದೇವರಿಗೆ ಕಲ್ಲಿಗುರುಗಳ ಕಾಲ್ತೊಳೆದು ಧಾರಪೂರ್ವಕವಾಗಿ ಛತ್ರಕ್ಕೆ ಬಿಟ್ಟು ಭೂದಾನ ವಿವರಗಳನ್ನು ತಿಳಿಸುವ ಶಾಸನ ಹೆಮ್ಮೆನಬೇತೂರಿನ ಸಿದ್ದೇಶ್ವರ ದೇವಾಲಯದ ಬಳಿ ಇದೆ. ಇದೇ ಡಿಂಗರ ಮಲ್ಲಯ್ಯ ದೇವರಿಗೆ ಹಾಲು ಮಂಡಶಿಗೆ ಭೂಮಿ ದಾನವನ್ನು ಈ ಶಾಸನದಲ್ಲಿ ವಿವರಿಸಲಾಗಿದೆ.[೧೩] ಈ ಹೇಮ್ಮನಬೇತೂರು ಗ್ರಾಮದ ಭಕ್ತ ಜನಗಳ ಆರಾಧನೆಯು ಕಾಶಿಗಿಂತ ಮಿಗಿಲಾದುದೆಂದು

ಶಾಸನವರ್ಣಿಸಿದೆ. ಈ ಶಾಸನದ ಕಾಲ ಕ್ರಿ.ಶ ೧೨೬೫ ರ ಅಣಜಿ ಗ್ರಾಮದ ಶಾಸನಗಳಲ್ಲಿ ಅರಸನನ್ನು ಗೂರ್ಜರರಾಯ, ವಾರಣಾಂಕುಶ, ತೆಲುಂಗಾರಾಯ, ಶಿರಕಮಳನಾಳೋತ್ಪಾಟನ ಕರ ಪ್ರತಿಜ್ಞೆ ಪರಶುರಾಮ ಮಾಳವಿಯ ಮಲ್ಲಿ ಭುಜಬಳಭೀಮ ಇತ್ಯಾದಿ ಬಿರುದುಗಳಿಂದ ಉಲ್ಲೇಖಿಸಲಾಗಿದೆ. ಹೆಮ್ಮೊಡಿ ದೇವರಸನ ಮಗ ವಿಠಲ ದೇವರಸ ಮಹಾ ಅಗ್ರಹಾರವಾದ ಅಣಜಿಯ ದೇವರಿಗೆ ದಾನ ನೀಡಿದುದನ್ನು ಈ ಶಾಸನ ತಿಳಿಸುತ್ತದೆ. ಹೇಮ್ಮೆನಬೇತೂರಿನ ಶಾಸನೋಕ್ತದಾನಿಯ ಈತನೇ ಅಣಜಿ ಸುತ್ತ ಮುತ್ತಲಿನ ಚಿತ್ರದುರ್ಗ, ಪ್ರದೇಶಗಳಲ್ಲಿ ಸೇವುಣರ ಆಳ್ವಿಕೆಗೆ ಸಂಬಂಧಿಸಿದ್ದಂತೆ ಆಧಾರಗಳು ಲಭ್ಯವಾದ ಹಿನ್ನೆಲೆಯಲ್ಲಿ ಈ ಪ್ರದೇಶಗಳವರೆಗೂ ಸಹ ಪ್ರತ್ಯಕ್ಷ ಅಥವಾ ಪರೋಕ್ಷವಾದ ಆಳ್ವಿಕೆ ವಿಸ್ತರಿಸಿತ್ತೆಂದು ಹೇಳಬಹುದು.

**ಹೋಯ್ಸಳರ ಆಳ್ವಿಕೆ**

ಕರ್ನಾಟಕ ರಾಜ ಮನೆತನಗಳಲ್ಲಿ ಕ್ರಿ.ಶ೧೦೦೦-೧೩೪೬ ರ ವರೆಗೆ ಆಳ್ವಿಕೆ ಮಾಡಿದ ಹೋಯ್ಸಳರ ಸ್ಥಾನ ಮಹತ್ವದ್ದಾಗಿದೆ. ಇವರು ತಮ್ಮ ಸಮಕಾಲೀನ ರಾಜ ಮನೆತನ ಹಾಗೂ ಸಾಮಂತ ಕುಲಗಳಿಗಿಂತಲೂ ಹೆಚ್ಚು ಪ್ರಸಿದ್ದರಾಗಿದದ ಕ್ರಿ.ಶ. ೧೧ನೇ ಶತಮಾನದಿಂದ ೧೪ ನೇ ಶತಮಾನದ ಮಧ್ಯಕಾಲದವರೆಗೆ ಕರ್ನಾಟಕ ಮಾತ್ರವಲ್ಲದೆ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ್ದರು.

ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಕ ಮತ್ತು ಶಿಲ್ಪ ಕಲೆಗಳ ದೃಷ್ಟಿಯಿಂದ ಹೊಯ್ಸಳರ ಆಳ್ವಿಕೆಯ ಅವಧಿ ಅತ್ಯಂತ ಪ್ರಭಾವಯುತವಾದುದ್ದು. ಶಿಲ್ಪಕಲಾ ಶೈಲಿ ಇವರ ಕಾಲದಲ್ಲಿ ತನ್ನದೇ ಆದ ರೂಪ ಹೊಂದಿ ಜಾಗತಿಕ ಕಲಾ ಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆಯನ್ನಿತ್ತಿತು. ಚಾಲುಕ್ಯರ ನಂತರ ಹಿಂದೂ ಸಾಮ್ರಾಜ್ಯವನ್ನು ಬೆಳೆಸಿ ಪೋಷಿಸಿಕೊಂಡು ಬಂದವರು ಹೊಯ್ಸಳರು. ಅದೇ ಹಾದಿಯಲ್ಲಿ ಮುಂದುವರಿಯುವಂತೆ ತಮ್ಮ ನಂತರ ಸ್ಥಾಪಿತಗೊಂಡ ವಿಜಯನಗರ ಸಾಮ್ರಾಜ್ಯಕ್ಕೆ ಇವರೇ ಪ್ರೇರಕ ಶಕ್ತಿಯಾದರು.[೧೪]

ಪ್ರಸ್ತುತ ಅಣಜಿ ಪ್ರದೇಶದಲ್ಲಿ ಹೊಯ್ಸಳರ ಆಳ್ವಿಕೆಯನ್ನು ಗುರುತಿಸಲು ಇಲ್ಲಿನ ಶಾಸನಗಳು ಸಹಾಯಕವಾಗಿವೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ-ಕಾಲುವೆ ದೇವಾಲಯಗಳು ಅಗ್ರಹಾರ ಇತ್ಯಾದಿಗಳ ಕುರಿತು ಈ ಪ್ರದೇಶದಲ್ಲಿ ಸಿಕ್ಕ ಶಾಸನಗಳು ಸಾರುತ್ತವೆ ಕೇವಲ ರಾಜಕೀಯವಲ್ಲದೇ ಈ ಜಿಲ್ಲೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ ಹೊಯ್ಸಳರ ಕೊಡುಗೆಯು ಮಹತ್ವವಾದುದೆಂಬುದು ಈ ಶಾಸನಗಳಿಂದ ವ್ಯಕ್ತವಾಗುತ್ತದೆ. ಹೋಯ್ಸಳ ಸಾಮ್ರಾಜ್ಯದ ನಾಡು ಪ್ರಭು ಅಣ್ಣಮರಸನು ಹೊಳಲ್ಕೆರೆ ನಾಡನ್ನು ಪಾಲಿಸುತ್ತಿದದು ಸ್ವಯಂಭು ಕಲಿ ದೇವಾಲಯಕ್ಕೆ ಕೋಡಿಹಳ್ಳಿಯನ್ನು ದತ್ತಿಬಿಟ್ಟಿದ್ದನು ತಿಳಿಸುತ್ತವೆ. ಇವು ಹೊನ್ನಾಳಿ ತಾಲೂಕಿನ ಕುರುವದಗಡ್ಡೆ ರಾಮೇಶ್ವರನಿಗಾಗಿ ನದಿತೀರದ ಭೂಮಿಯನ್ನು ಹಾಗೂ ದಾನದತ್ತಿಗಳನ್ನು ಮುಂದವರಿಸಿದ ಬಗ್ಗೆ ಅಲ್ಲಿನ ಶಾಸನವೊಂದು ವಿವರಿಸುತ್ತದೆ. "ತೋಡಪಿಲ್ಲೆ" ದಣ್ಣಾಯಕನನ್ನು ಬೆಳಗರ್ತಿ (ಈಗಿನ

ಬೆಳಗುತ್ತಿ) ನಾಡಿನ ರಾಜ್ಯಪಾಲನನ್ನಗಿ ನೇಮಿಸಿದನೆಂದು ಅಲ್ಲಿನ ಶಾಸನದಿಂದ ತಿಳಿಯಬಹುದು. ಇಮ್ಮಡಿ ನರಸಿಂಹನು ಕ್ರಿ.ಶ. ೧೨೩೪ರಲ್ಲಿ ಮೃತನಾಗಲು ಅವನ ಮಗ ಸೋಮೇಶ್ವರನು ಕ್ರಿ.ಶ೧೨೩೪-೧೨೫೬ ಪಟ್ಟಕ್ಕೆ ಬಂದನು. ಜಗಳೂರು ತಾಲ್ಲೂಕು ಕಲ್ಲೇದೇವಪುರ ಕಲ್ಲೇಶ್ವರ ದೇವಾಲಯಕ್ಕೆ ಸಮೀಪದಲ್ಲಿರುವ ಶಾಸನ ದೊರೆತ ಸೋಮೇಶ್ವರನಿಗೆ ಸಂಬಂಧಿಸಿದ ಮೊದಲನೆಯ ಶಾಸನ. ಅವನು ಪಟ್ಟಕ್ಕೆ ಬಂದ ವರ್ಷದಲ್ಲೇ ಈ ಶಾಸನ ಬರೆಸಲಾಗಿದೆ. ಸೋಮೇಶ್ವರನು ಸಹ ಗಂಗವಾಡಿ ೬೬.೦೦೦ ಮತ್ತು ನೊಳಂಬವಾಡಿ ೩೨೦೦೦ ನಾಡುಗಳನ್ನು ಆಳುತ್ತಿದ್ದು ಸಾಮಾನ್ಯವಾಗಿ ಹೊಯ್ಸಳ ಅರಸರೆಲ್ಲರೂ ಧರಿಸಿದ್ದ ಬಿರುದುಗಳನ್ನು ಈ ಶಾಸನದಲ್ಲಿ ಕಾಣಬಹುದು. ಈ ಶಾಸನವು ಸಾಕಷ್ಟು ಅಳಿಸಿ ಹೋಗಿರುವುದರಿಂದ ಸಿಕ್ಕುವ ವಿವರಗಳು ಕಡಿಮೆ. ನರಸಿಂಗಯ್ಯ ನಾಯಕ ಮತ್ತು ಮಲ್ಲಯ್ಯ ನಾಯಕರು ಹೇಮ್ಮನಬೇತೂರು ಆಳುತ್ತಿದ್ದು. ದುರ್ಗದ ಸ್ವಯಂಭುವನೇಶ್ವರಿ ದೇವಿಗೆ ದತ್ತಿ ಕೊಟ್ಟಿದ್ದನ್ನು ಅದು ತಿಳಿಸುತ್ತದೆ.

ದಾವಣಗೆರೆ ತಾಲ್ಲೂಕಕಿನ ಲೋಕಿಕೆರೆ ಗ್ರಾಮದಲ್ಲಿ ಈಶ್ವರ ದೇವಾಲಯದ ಕಂಭವೊಂದರ ಮೇಲೆ ಇರುವ ಕ್ರಿ.ಶ. ೧೨೩೬ ರ ಶಾಸನವು ಸೋಮೇಶ್ವರ ಧರಿಸಿದ್ದ ಬಿರುದುಗಳನ್ನು ತಿಳಿಸಿ ಅಂದಿನ ಆರ್ಥಿಕ ಸ್ಥಿತಿಯನ್ನು ಕುರಿತು ಸ್ವಲ್ಪ ಮಾಹಿತಿ ನೀಡುತ್ತದೆ. ಕೇತೇಶ್ವರ ದೇವರಿಗೆ ನಂದಾದೀವಿಗೆ ಗೋಸ್ಕರ ಸುಂಕ ಸರ್ವಾಧಿಕಾರಿಗಳು ಅಡಿಕೆ ಎಲೆ ಸುಂಕ ಮತ್ತು ಗಧ್ಯಾಣಗಳನ್ನು ಸಲ್ಲಿಸಲು ಏರ್ಪಟು ಮಾಡಿದ್ದನ್ನು ಶಾಸನದಲ್ಲಿ ವಿವರಿಸಲಾಗಿದೆ. ಈ ಎಲ್ಲಾ ಶಾಸನಗಳಿಂದ ಸೋಮೇಶ್ವರನು ಜಗಳೂರು, ದಾವಣಗೆರೆ ನಾಡುಗಳನ್ನು ತನ್ನ ಅಧೀನ ಮಾಡಿಕೊಂಡು ಆಳ್ವಿಕೆ ನಡೆಸಲು ವ್ಯವಸ್ಥೆ ಮಾಡಿದ್ದನೆಂದು ತಿಳಿದುಬರುತ್ತದೆ. ಅಣಜಿ ಸುತ್ತಮುತ್ತಲಿನ ಪ್ರದೇಶದವರೆಗೂ ಅವರ ಆಳ್ವಿಕೆ ವಿಸ್ತರಿಸಿತು ಎಂಬುದಕ್ಕೆ ನಮಗೆ ಅಸಗೋಡು ಪಲ್ಲವರ ಕಾಲದಲ್ಲಿ ಉಚ್ಚಂಗಿ ಮತ್ತು ಹೋಯ್ಸಳರ ದೊರೆವೀರ ನರಸಿಂಹನು ಕಲಿದೇವರಿಗೆ ಭೂಮಿಯನ್ನು ದಾನ ಕೊಟ್ಟ ವಿವರ ಶಾಸನದಲ್ಲಿದೆ. ಈ ಹಿನ್ನೆಲೆಯಿಂದ ಹೊಯ್ಸಳರ ಆಳ್ವಿಕೆಗೆ ಅಣಜಿ ಪ್ರದೇಶವು ಕೂಡ ಒಳಪಟ್ಟಿತ್ತು ಎಂಬುದಾಗಿ ಹೇಳಬಹುದು.[೧೫]

## ವಿಜಯನಗರದ ಅರಸರ ಆಳ್ವಿಕೆ

ಹೊಯ್ಸಳ ಸಾಮ್ರಾಜ್ಯವು ಪತನ ಹೊಂದಿದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತು ಹೋದ ಹಾಗೂ ಎಂದೆಂದೂ ಮರೆಯಲಾಗದ ಮಹಾ ಸಾಮ್ರಾಜ್ಯವೆಂದು ವಿದ್ವಾಂಸರು ವರ್ಣಿಸಿದ್ದಾರೆ. ಅಷ್ಟೆ ಅಲ್ಲದೇ ವಿದೇಶಿ ಲೇಖಕರು ಪ್ರವಾಸಿಗರು ಇತಿಹಾಸಕಾರರು ವರ್ತಕರು ವಿಜಯನಗರದ ಭವ್ಯತೆಯನ್ನು ಮನಸಾರೆ ಕೊಂಡಾಡಿದ್ದಾರೆ ಕ್ರಿ.ಶ. ೧೩೩೬-ಕ್ರಿ.ಶ೧೫೬೫ ರ ವರೆಗೆ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ನೇರವಾಗಿ ಇಲ್ಲವೇ ಮತ್ತು ಅವರ ಸಾಮಂತರು ಕೆಲವು ಭಾಗಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಆಳ್ವಿಕೆ ನಡೆಸಿದರು. ಕ್ರಿ.ಶ. ೧೩೫೪ ರಿಂದ ಸದಾಶಿವರಾಯನ ಕಾಲದ ಇವರ ಚರಿತ್ರೆಯನ್ನು ರಚಿಸಲು ಸಹಾಯಕವಾಗಿದೆ.

ವಿಜಯನಗರದ ಅರಸರು ನೇರವಾಗಿ ಇಲ್ಲವೇ ಪರೋಕ್ಷವಾಗಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು. ಎಲೇಬೇತೂರು ಕೇಂದ್ರವನ್ನಾಗಿ ಮಾಡಿಕೊಂಡು ವಿಜಯನಗರದ ಪ್ರತಿನಿಧಿ ಮಲ್ಲಿನಾಥ ಒಡೆಯನೆಂಬುವನು ಆಡಳಿತ ನಡೆಸತ್ತಿದ್ದನೆಂದು ತಿಳಿದುಬರುತ್ತದೆ. ಮಲ್ಲಿನಾಥ ಒಡೆಯನು ಅಳಿಯ ಸಾಯಿನಾಯಕನ ಮಗನೆಂದು ಸಾಯಿನಾಯಕನು ರಾಜನಾಗಿದ್ದ ಮೊದಲನೆಯ ಬುಕ್ಕನ ಮಗನೆಂದು ಅದೇ ಶಾಸನ ವಿವರಿಸುತ್ತವೆ ಇದರಿಂದ ಈ ಮೊದಲಿನಿಂದಲೂ ರಾಜಮನೆತನದ ಸಮೀಪ ಸಂಬಂಧಿಗಳ ಕೈಯಲ್ಲಿದ್ದಿತೆಂದು ಅರಿಯಬಹುದು. ದಾವಣಗೆರೆ ತಾಲೂಕಿನಲ್ಲಿ ದೊರೆತಿರುವ ಶಾಸನವೊಂದು ಎರಡನೇ ಹರಿಹರನು ಶಂಕಾರಿಪುರವೆಂಬ ಗ್ರಾಮವನ್ನು ದಾನಕೊಟ್ಟನು. ಈ ಗ್ರಾಮವು ಹರಿಹರ ಸೀಮೆ ಉಚ್ಚಂಗಿವೆಂತೆ ಕೊಟ್ಟೂರು ಚಾವಡಿಗೆ ಸೇರುತ್ತೆಂದು ಶಾಸನ ತಿಳಿಸುತ್ತದೆ. ವೇದ ಮತ್ತು ಶಾಸ್ತ್ರಗಳನ್ನು ಸತತವಾಗಿ ಅಭ್ಯಾಸ ಮಾಡುವುದಕ್ಕಾಗಿ ಎರಡನೇ ಹರಿಹರನು ಶಂಕಾರಿಪುರವೆಂಬ ಗ್ರಾಮವನ್ನು ಬ್ರಹ್ಮಣರಿಗೆ ದಾನ ಮಾಡಿದ. ಇದೇ ಅರಸನ ಮಂತ್ರಿಯಾಗಿದ್ದ ದಂಡನಾಯಕನು ಮುವತ್ತಾರು ವೃತ್ತಿಗಳುಳ್ಳ ಅಗ್ರಹಾರವೊಂದನ್ನು ರಚಿಸಿ ಬ್ರಾಹ್ಮಣರಿಗೂ ದೇವಾಲಯಕ್ಕು ದತ್ತಿಕೊಟ್ಟಿದ್ದನು.

ವಿಜಯನಗರ ಸಾಮ್ರಾಜ್ಯದ ಕೊಟ್ಟೂರು ಚಾವಡಿಗೆ ಇಂದಿನ ದಾವಣಗೆರೆ ಮತ್ತು ಹರಿಹರ ತಾಲ್ಲೂಕುಗಳು ಸೇರಿದ್ದವೆಂಬ ಅಭಿಪ್ರಾಯವು ಇದೆ ಮೊದಲನೆಯ ದೇವರಾಯನ ಮಂತ್ರಿಯಾಗಿದ್ದ ಜಗನ್ನಾಥನ ಮಗ ಬುಳ್ಳಪ್ಪನು ಹರಿಹರ ನದಿಗೆ ಕೃಷಿಯ ಅಭಿವೃದ್ದಿಗಾಗಿ ಆಣೆಕಟ್ಟನ್ನು ಕಟ್ಟಿಸಿದನೆಂದು ದಾವಣಗೆರೆ ತಾಲ್ಲೂಕಿನ ಶಾಸನವೊಂದರಿಂದ ತಿಳಿದುಬರುತ್ತದೆ. ಕಾಲಕ್ರಮೇಣ ಈ ಆಣೆಕಟ್ಟು ಒಡೆದು ಪ್ರಜೆಗಳು ಕಷ್ಟ ನಷ್ಟಗಳನ್ನು ಅನುಭವಿಸುತ್ತಿದ್ದಾಗ ದಂಡನಾಯಕನಾದ ಚಾಮನೃಪನ ಸಹಾಯದಿಂದ ಬುಳ್ಳಪ್ಪನು ಅದನ್ನು ಸರಿಪಡಿಸಿ ಜನರಿಗೆ ಅನುಕೂಲ ಮಾಡಿಕೊಟ್ಟನು.

ಅಣಜಿಗೆ ಸಮಿಪ ಇರುವ ಬಿಳಿಚೋಡು ಗ್ರಾಮದಲ್ಲಿ ಕಂಡುಬರುವ ಈಶ್ವರ ದೇವಾಲಯದ ಮುಂಭಾಗದಲ್ಲಿರುವ ಶಾಸನವು ಕ್ರಿ.ಶ. ಸು.೧೫೮೫ ರ ಕಾಲದ್ದೆಂದು ವಿವರಿಲಾಗಿದೆ. ಇದರ ಮೇಲ್ಭಾಗ ಸಿಡಿದು ಹೋಗಿದ್ದರು ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನ ಒಬ್ಬ ಅಧಿಕಾರಿ ಅಥವಣೆಯ ಚೆನ್ನರಸ ಎಂಬುವನು ಮದುವೆಗೆ ಹಾಕಲಾಗುತ್ತಿದ್ದ ಸುಂಕವನ್ನು ಬಿಡಿಸಿದನೆಂಬ ಸಂಗತಿ ಅದರಿಂದ ತಿಳಿಯುತ್ತದೆ. ಇದರಲ್ಲಿ ಈ ದೇವಾಲಯದ ಮತ್ತೊಂದು ಶಾಸನವು ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನಿಗೆ ಸಕಲ ಪುಣ್ಯವಾಗಬೇಕೆಂದು ಈ ಪ್ರದೇಶದ ಪಾಲಕನೊಬ್ಬ ಬಂದು ಗ್ರಾಮವನ್ನು ಬಿಳಿಜೋಡಿನ ರಾಮದೇವರಿಗೆ ದಾನವಾಗಿ ಕೊಟ್ಟನೆಂದು ತಿಳಿಸುತ್ತದೆ. ಹಾಗೂ ಇಲ್ಲಿಯ ರಾಮೇಶ್ವರ ದೇವಾಲಯದ ಮುಂದೆ ಇವರು ಕಂಬವೊಂದರಲ್ಲಿರುವ ಕ್ರಿ.ಶ. ೧೪೮೫ರ ಒಂದು ಶಾಸನವು ಕೃಷ್ಣಪ್ಪ ನಾಯಕನ ಕಾರ್ಯಕರ್ತನಾದ ಧರ್ಮಪ್ಪ ನಾಯಕನೆಂಬುವನು ಕುರುಬರಿಗೆ ಕುರಿಯ ಮೇಲೆ ಹಾಕುತ್ತಿದ್ದ ತೆರಿಗೆಯೊಂದನ್ನು ಬಿಟ್ಟಿದ್ದನ್ನು ಹೇಳುತ್ತದೆ. ಅಣಜಿ ಸುತ್ತಮುತ್ತಲಿನ ಪ್ರದೇಶವು ಕೂಡ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿದ್ದನ್ನು ಈ ಆಧಾರಗಳ ಮೂಲಕ ನಾವು ದೃಢಪಡಿಸುತ್ತೇವೆ.[೧೬]

## ಚಿತ್ರದುರ್ಗದ ಪಾಳೆಗಾರರ ಆಳ್ವಿಕೆ

ಈ ಭಾಗದಲ್ಲಿ ೧೫ನೇಯ ಶತಮಾನದ ಆರಂಭದಲ್ಲಿ ಪಾಳೆಯಗಾರರು ವಿಜಯನಗರದ ಪರೋಕ್ಷ ಆಡಳಿತವು ಆರಂಭವಾಯಿತೆನ್ನಬಹುದು. ಅಂತಹ ಪಾಳೇಗಾರರಲ್ಲಿ ಚಿತ್ರದುರ್ಗ ಪಾಳೇಗಾರರು, ಹರತಿ, ರಾಯದುರ್ಗ, ಬೇಲೂರು, ಸಂತೆಬೆನ್ನೂರು, ಹರಪನಹಳ್ಳಿ ಬಸವಪಟ್ಟಣ ಪಾಳೇಗಾರರು ಇತ್ಯಾದಿ. ಇವುಗಳಲ್ಲಿ ಕೆಲವು ಪಾಳೇಗಾರರು ಜಿಲ್ಲೆಯ ಹೊರಗಿದ್ದರು ವಿಜಯನಗರದ ಅರಸರು ಇಂತಹ ಪಾಳೇಗಾರರನ್ನು ಸೃಷ್ಟಿಸಿದರು. ಈ ಪಾಳೆಯಗಾರಿಕೆಯನ್ನು ಅಮರನಾಯಕರಿಗೆ ಕೊಡಲಾಗಿತ್ತು. ಇದಕ್ಕೆ ಬದಲಾಗಿ ಅಮರನಾಯಕರು ವಿಜಯಗನರ ಸಾಮ್ರಾಜ್ಯಕ್ಕೆ ಸೈನಿಕ ಸೇವೆ ಸಲ್ಲಿಸಬೇಕು ಎಂದಿತ್ತು. ದಂಡೆಯಾತ್ರೆಯ ಸಮಯದಲ್ಲಿ ವಿಜಯನಗರ ರಾಜನಿಗೆ ನೆರವು ನೀಡಬೇಕಾಗಿದ್ದಿತು. ಸಾಮಂತರ ಮೂಲ ಸಾಮ್ರಾಜ್ಯದ ಇಂತಹ ಆಡಳಿತ ಪದ್ದತಿಗೆ ನಾಯಕರ ಪದ್ದತಿ ಎಂದು ಹೆಸರಾಯಿತು.

ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ಈ ಭಾಗದಲ್ಲಿ ಆಗಿದ್ದಕ್ಕೆ ಅನೇಕ ಆಧಾರಗಳಿವೆ. ಚಿತ್ರದುರ್ಗವನ್ನು ಪ್ರಮುಖವಾಗಿ ಎರಡು ಸಂತತಿಯವರು ಆಳ್ವಿಕೆ ನಡೆಸಿದ್ದಾರೆ. ಮತ್ತಿ ಸಂತತಿ, ಬಿಳಿಚೋಡು ಸಂತತಿಯವರು. ಆಳಿದರು ಅದರಲ್ಲಿ ಬಿಳಿಚೋಡು ಸಂತತಿಯವರೇ ಚಿತ್ರದುರ್ಗವನ್ನು ಆಳಿದ ಕೊನೆಯ ಸಂತತಿಯವರಾಗಿದ್ದಾರೆ. ಇವರ ಪೂರ್ವ ಚರಿತ್ರೆಯು ಕೂಡ್ಲಿಗಿ ಬೆಟ್ಟದ ಸಾಲುಗಳಿಂದ ಅನೇಕ ಕಲ್ಲುಗುಡ್ಡದಲ್ಲಿ ಪ್ರಾರಂಭವಾಗಿ ಜರಿಮಲೆದವರೆಗೂ ಸಾಗುತ್ತದೆ. ಮತ್ತು ಚಿತ್ರದುರ್ಗದ ಪಾಳೆಯಗಾರರ ಇತಿಹಾಸದಲ್ಲಿ ಅಣಜಿ ಹಾಗೂ ಬಿಳಿಚೋಡುಗಳು ಅತ್ಯಂತ ಪ್ರಮುಖವಾದ ಆಯಕಟ್ಟಿನ ಸ್ಥಳವಾಗಿದ್ದು. ಈಗಲೂ ಅವಶೇಷಗಳಿವೆ. ಚಿತ್ರದುರ್ಗದ ಮೊದಲ ಪಾಳೆಯಗಾರ ಮತ್ತಿತಿಮ್ಮಣ್ಣನಾಯಕರಲ್ಲಿ ಬಿಳಿಚೋಡಿನ ವಿರೂಪಾಕ್ಷಜೋಯಿಸರ ಮಗ ಪರಶುರಾಮಪ್ಪನವರು ಹರಿಯದ ಹಚ್ಚಡಮುರಿಯದ ಬಡವೆಯನ್ನು ಕೇಳಿದಾಗ ನಾಯಕರು ಪರಶುರಾಮಪ್ಪನವರ ಮಕ್ಕಳಾದ ಯಲ್ಲಪ್ಪ, ಭುವನಪ್ಪನವರಿಗೆ ಲಿಂಗದಹಳ್ಳಿ ಶಾನುಭೋಗಿಕೆಯನ್ನು ನೀಡಿದಾಗ[೭] ಇವರಲ್ಲೊಬ್ಬರು ಅಣಜಿಯಲ್ಲಿ ನೆಲೆಸಿದಾಗ ಪಾಳೆಯಗಾರರ ಪ್ರತಿನಿಧಿ ಈ ವಂಶಸ್ಥರಿಗೆ ಶ್ಯಾನುಭೋಗಿಕೆ ಸ್ಥಳಪೌರೋಹಿತ್ಯ ಸುಂಕವಸೂಲಿ ಅಧಿಕಾರ ನೀಡಿದನು ಈ ಮನೆತನವರು ಬಹುಕಾಲ ಅಣಜಿಯಲ್ಲಿದ್ದರು ಅಣಜಿಯ ವಿರೂಪಾಕ್ಷ ಜೋಯಿಸರೆನ್ನುವವರು ರಾಜಾವೀರ ಮದಕರಿನಾಯಕನ ಆಸ್ಥಾನದಲ್ಲಿದ್ದರು. ಮಕ್ಕಳಿಲ್ಲದ ಇವರಿಗೆ ಶ್ರೀ ಮುರಗೋಡು ಚಿದಂಬರ ಕೃಪೆಯಿಂದ ವಂಶವೃದ್ದಿಯಾಯಿತೆಂದು ತಿಳಿಯುತ್ತದೆ. ಶಾಸನದಲ್ಲಿ ಕೊಮ್ಮನಾಯಕನ ಮಗ ಚಿಕ್ಕನಾಗಪ್ಪನಾಯಕನು ತಮ್ಮ ತಂದೆ ತಾಯಿಗಳಿಗೆ ಪಣ್ಯವಾಗಲೆಂದು ಕ್ರಿ.ಶ.೧೫೭೭೮ರಲ್ಲಿ ಅಣಜಿಯ ಮಾಚಪ್ಪ ದೇವರ ಮಠಕ್ಕೆ ದತ್ತಿಬಿಟ್ಟು ವಿಚಾರವಿದ್ದರೂ ಈಗ ಅಣಜಿಯಲ್ಲಿ ಮಾಚಪ್ಪದೇವರ ಮಠ ಯಾವುದೆಂದು ತಿಳಿಯವುದಿಲ್ಲ. ಆದರೆ ದಿಗಂಬರ ಸ್ವಾಮಿಗಳ ಮಠವಿದೆ ಏಳುನೂರು ವರ್ಷಗಳ ಹಿಂದ ಸ್ವಾಮಿಗಳೊಬ್ಬರು ಹಳೇಯ ಊರಿನಲ್ಲಿದ್ದು ಶಿವಭಕ್ತರಾಗಿ ನಿರ್ಮಾಣದಿಂದ ಸಮಾಧಿ ಹೊಂದಿದರಿಂದ ಗದ್ದುಗೆಯ ಮೇಲೆ ಮಠ ಕಟ್ಟಿದ್ದಾನೆ.

ಅಣಜಿಯು ಕೆಲವು ಕಾಲ ಬಸವಾಪಟ್ಟಣದ ಪಾಳೆಯಗಾರಿಗೂ ಸೇರಿದ್ದು ಕ್ರಿ.ಶ. ೧೬೦೨–೧೬೫೨ರ ವರೆಗೆ ಚಿತ್ರದುರ್ಗವನ್ನಾಳಿದ ಕಸ್ತೂರಿ ರಂಗಪ್ಪನಾಯಕರು ಮತ್ತೆಗೆದ್ದು ಚಿತ್ರದುರ್ಗಕ್ಕೆ ಸೇರಿಸಿಕೊಂಡರು. ಈ ಬೆಟ್ಟದ ತಪ್ಪಲಿನಲ್ಲಿ ಜಡೆಕಲ್ ದುರ್ಗದ ಕಡೆಯಿಂದ ಸಬ್ಬಾಗಡಿ ಒಬನಾಯಕ ಜಡವಿನಾಯಕ ಬುಳ್ಳನಾಯಕ ಎನ್ನುವ ಮೂರು ಜನ ಅಣ್ಣ ತಮ್ಮಂದಿರು ತಮ್ಮ ಕಂಪಳ ಸವೇತ ವಲಸೆ ಬಂದು ಬಿಳಿಚೋಡಿನಲ್ಲಿ ರೋಪ್ಪಹಾಕಿದ್ದರು. ಮುಂದೆ ಶ್ಯಾಗಲೆ ಗ್ರಾಮಕ್ಕೆ ಜಡವೇನಾಯಕರು ಮತ್ತಿ ಗ್ರಾಮಕ್ಕೆ ಸವ್ಬಾಗಡಿ ಓಬನಾಯಕರು ವಲಸೆಹೋದರು ಬುಳ್ಳನಾಯಕರು ಮಾತ್ರ ಬಿಳಿಜೋಡಿನಲ್ಲಿ ಉಳಿದರು. ಇವರ ಮಕ್ಕಳು ಚಿಕ್ಕಹನುಮನಾಯಕರು, ಓಬಣ್ಣನಾಯಕರು ಮುಂದೆ ಭರಮಣ್ಣನಾಯಕರು ಮೊಮ್ಮಗ ಕಸ್ತೂರಿ ರಂಗಪ್ಪನಾಯಕ ಹೀಗೆ ಬಿಳಿಜೋಡಿನ ಸಂತತಿಯೇ ಚಿತ್ರದುರ್ಗದಲ್ಲಿ ಕೊನೆಯವರೆಗೂ ಆಳ್ವಿಕೆ ನಡೆಸಿತು.[೧೮]

ಅಣಜಿ ಪ್ರದೇಶದಲ್ಲಿ ಮೌರ್ಯರು ,ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ನೊಳಂಬರು, ಸೇವುಣರು, ಹೊಯ್ಸಳರು, ವಿಜಯನಗರದ ಅರಸರು ಚಿತ್ರದುರ್ಗದ ಪಾಳೇಯಗಾರರು. ಹಾಗೂ ಅವರಿಗೆ ಸಂಬಂದಿಸಿದ ಇನ್ನಿತರ ಅಧಿಕಾರಿಗಳು ಮತ್ತು ಅವರ ಸಾಮಂತರ ಅರಸರು ಅಣಜಿ ಪ್ರದೇಶದಲ್ಲಿ ಆಳ್ವಿಕೆ ಮಾಡಿರುವ ಬಗೆಗೆ ಹಲವು ದಾಖಲೆಗಳು ಸಿಗುತ್ತವೆ. ಆ ಕಾಲದ ಜನರ ಧಾರ್ಮಿಕ ರಾಜಕೀಯ ಮತ್ತು ಸಾಮಾಜಿಕ ಸಂಗತಿಗಳನ್ನು ಅವರ ಕಾಲದಲ್ಲಿ ನಿರ್ಮಾಣವಾಗಿರುವ ಶಾಸನ ಆಕರಗಳಿಂದ ಮತ್ತು ಪ್ರಾಚ್ಯವಶೇಷಗಳಿಂದ ತಿಳಿಯಬಹುದಾಗಿದೆ ಅಂದಿನ ಜನರ ಜೀವನ ಸಾಂಸ್ಕೃತಿಕ ಬದುಕನ್ನು ತಿಳಿಯಬಹುದಾದ ಅವರ ಕಾಲದಲ್ಲಿ ರಚನೆಯಾಗಿ ಅಳಿದು ಉಳಿದು ಬಂದಿರುವ ಪ್ರಾಚೀನ ಸಂಗತಿಗಳೇ ಸಾಕ್ಷಿಯಾಗಿ ನಿಲ್ಲುತ್ತವೆ ಎಂದು ತಿಳಿಯಬಹುದು.

ಅಣಜಿ ಪ್ರದೇಶವು ದುರ್ಗದ ಸೇನೆನಾಯಕರ ಮನಸ್ಸಿನಲ್ಲಿ ನಾಟಿಕೊಂಡೇ ಇತ್ತು. ಪುನಃ ದಳವಾಯಿ ಭರಮಪ್ಪನು ಒಳಗೆ ಸಂಧಾನ ಮಾಡಿ ಹರಪನಹಳ್ಳಿಯವರಿಂದ ಅಣಜಿಯನ್ನು ಕಿತ್ತುಕೊಳ್ಳಬೇಕೆಂದು ಆಗಾಧವಾದ ಪ್ರಯತ್ನ ಮಾಡಿದನು ಆದರೆ ಹಾವನೂರು, ಗುಡೆಕೋಟೆ, ಅನಂತಪುರ, ಜರಿಮಲೆ, ತರೀಕೆರೆ ಈ ಸಂಸ್ಥಾನಗಳ ಸಹಾಯವನ್ನು ಪಡೆದು ಸಕಲ ಬಲಸಹಿತ ದಳವಾಯಿ ಭರಮಪ್ಪನು ಕೋಟೆ ಹೊರಗೆ ಸೂಲದ ಮರದ ಮೇಲಿನಿಂದ ಪಿರಂಗಿಯನ್ನು ಹೊಡಿದರು. ಹೊರಗಿನಿಂದ ಹೊಡೆದು ಫಿರಂಗಿ ಗುಂಡು ಕೋಟೆಯೊಳಗೆ ಶತ್ರುಗಳು ಹಾಸಿಸುತ್ತಾಇದ್ದ ಫಿರಂಗಿ ಬಾಯಿಯೊಳಕ್ಕೆ ಹೋಗಿ ಹೊಕ್ಕಿತು. ಕೋಟೆಯೊಳಗಿನ ಹರಪನಹಳ್ಳಿಯವರ ಫಿರಂಗಿಯು ಮಾರ್ಗ ತಪ್ಪಿಹೋದ್ದರಿಂದ ದುರ್ಗದವರ ಕೈ ಬಲವಾಯಿತು ಶತ್ರುಗಳ ಕೈ ನಿಂತು ಹೋಯಿತು. ಅವರು ಒಪ್ಪಂದ ಮಾಡಿಕೊಳ್ಳಲು ಸಲಹೆ ಕಳುಹಿಸಿದರು ಮತ್ತು ಮೊದಲು ತಾವುತೆಗೆದುಕೊಂಡಿದ್ದ ಅಂಗಳ ಬಿರುದು ಮುಂತಾದವುಗಳಲ್ಲವನ್ನು ದಳವಾಯಿ ಭರಮಪ್ಪನಿಗೆ ಒಪ್ಪಿಸಿದರು.[೧೯]

ಅಣಜಿ ಗ್ರಾಮ ಮಟ್ಟಿಯ ಮೇಲೆದ್ದು ತರುವಾಯ ಸ್ಥಳಾಂತರಗೊಂಡು ಅಧುನಿಕ ಗ್ರಾಮವಾಗಿದೆ ಮೌರ್ಯರ ಕಾಲಕ್ಕೆ ಇದು ಬೌದ್ದ ನೆಲೆಯಾಗಿರಬೇಕೆಂಬ ಸೂಚನೆ ಸುಳಿಯುತ್ತದೆ. ಇಲ್ಲಿಗೆ

ಸಮೀಪದ ಆಸಗೋಡು ಬಳಿಚೋಡು. ಮೊದಲಾದ ಗ್ರಾಮ ಚರಿತ್ರೆ ಇಲ್ಲಿ ಪ್ರಸ್ತುತ ಎನಿಸುತ್ತದೆ. ಶಾತವಾಹನರ ಕಾಲಕ್ಕಾಗಲೇ ವ್ಯಾಪಾರ ರಾಜಕೀಯರಂಗದಲ್ಲಿ ಮಹತ್ತರ ಪಾತ್ರ ವಹಿಸಿತ್ತು. ಈ ಅಣಜಿ ಆರಂಭಿಕ ಚರಿತ್ರೆ ಕಂಡು ಬರುವುದು ಕೇಕೆಯ ಶಿವಸ್ಕಂದವರ್ಮನ ಮೂಲಕ, ಇಲ್ಲಿನ ಶಾಸನವು ಇದನ್ನು ದೃಡಿಪಡಿಸುತ್ತದೆ. ಅಣಜಿ ಗ್ರಾಮದಲ್ಲಿನ ಈ ಶಾಸನದ ಲಿಪಿ ಮಳವಳ್ಳಿ ಸ್ತಂಭಶಾಸನದ ಲಿಪಿಯನ್ನು ಹೋಲುತ್ತದೆ. ಭಾಷೆ ಸಂಸ್ಕೃತ ಕ್ರಿ.ಶ. ೪೫೦ ರಲ್ಲಿ ನೊಣ್ಣಕ್ಕೆ (೦) ಸಂ ಪಲ್ಲವನಿಗೂ ಕದಂಬರಾಜ್ಯದ ಸಾಮಂತನಾಗಿ ಆಳುತ್ತಿದ್ದ ಕೃಷ್ಣವರ್ಮನಿಗೂ ಘೋರಯುದ್ದನಡೆದು ಈತನಿಗೆ ಯುದ್ದದಲ್ಲಿ ಸೋಲುಂಟಾಗಿ ಯುದ್ದದಲ್ಲಿ ಕೃಷ್ಣವರ್ಮನಿಗೆ ಸಹಾಯ ಮಾಡಿದ ಶಿವಸ್ಕಂಥವರ್ಮನು ಭಗ್ನಹೃದಯವಾಗಿ ಮರಣ ಹೊಂದಿದ. ಕ್ರಿ.ಶ. ೧೧೨೫ರ ಶಾಸನಗಳಲ್ಲಿ ನನ್ನ (ನೋ)ಕ್ಕರಸನನ್ನು ವಾರಣಾಂಕುಶ, ತೆಲುಂಗಾರಾಯ ಭುಜಬಲಭೀಮ ಇತರ ಬಿರುದುಗಳಿಂದ ಕರೆಯಲಾಗಿದೆ.

ಕದಂಬರ ತರುವಾಯ ಗಂಗರು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ ಅಣಜಿ ಮಹತ್ವವನ್ನು ಇಲ್ಲಿಂದಲೇ ಗುರುತಿಸಿಕೊಂಡಿತು. ಹದಡಿ ಶಾಸನದ ಪ್ರಕಾರ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ದಾವಣಗೆರೆ ಪ್ರದೇಶ ಸೇರಿತು ಕಳಚೋರಿ ಬಿಜ್ಜಳನಿಗೂ ಅಣಜಿಪರಿಸರ ಸೇರಿಕೊಂಡಿತ್ತು. ಕ್ರಿ.ಶ. ೧೧೭೩ ರಲ್ಲಿ ಚೋಳರಿಗೂ ಮತ್ತು ಹೊಯ್ಸಳ ಇಮ್ಮಡಿ ಬಲ್ಲಾಳರಾಯನಿಗೂ ಉಚ್ಚಂಗಿಯಲ್ಲಿ ಯುದ್ದ ನಡೆದು ಬಲ್ಲಾಳ ಜಯಗಳಿಸಿದ ಕ್ರಿ.ಶ.೧೧೮೨ರ ಶಾಸನವು ಅಣಜಿಯ ಆಗ್ನೆಯಕ್ಕಿರುವ ಕೆರೆ ಹೊನ್ನಮ್ಮನ ದೇವಾಲಯದಲ್ಲಿದೆ. ಇದರಲ್ಲಿ ಹೆಮ್ಮಡಿದೇವರಸರ ಕುಮಾರ ವಿಠ್ಠಲ ದೇವರಸನ ಸೋಮನಾಥ ದೇವರಿಗೆ ಅಣಜಿಯೆಂಬ ಅಗ್ರಹಾರವನ್ನು ದಾನವಾಗಿ ನೀಡಿದ ಉಲ್ಲೇಖವಿದೆ.

**ಸ್ಥಳನಾಮ**

ಪ್ರಾರಂಭದಲ್ಲಿ ಅಲೆಮಾರಿ ಜೀವನದಿಂದ ಆರಂಭವಾದ ಮಾನವರ ಬದುಕು ಕ್ರಮೇಣ ಕೃಷಿಯ ಆರಂಭದೊಂದಿಗೆ ಒಂದೆಡೆ ನೆಲೆ ನಿಲ್ಲುವಂತಾಯಿತು. ಅಲೆಮಾರಿ ಸಮುದಾಯಗಳು ಭೌಗೋಳಿಕ ಪರಿಸರದ ಗವಿ, ಬಂಡೆ, ಬೆಟ್ಟದ ಅಂಚಿನಲ್ಲಿ ಕೆಲವು ಹಂತಗಳಲ್ಲಿ ಅಲೆಮಾರಿತನವನ್ನು ತೊರೆದ ಸಮುದಾಯಗಳು ಒಟ್ಟಿಗೆ ಬದುಕುವುದನ್ನು ಆರಂಭಿಸಿದ್ದರು. ಈ ಹಂತವನ್ನು ಸಮುದಾಯಗಳು ನೆಲೆಸುವಿಕೆಯ ಗ್ರಾಮ ಕಲ್ಪನೆಯ ಪೂರ್ವಸ್ಥಿತಿಯೆಂದು ತಿಳಿಯಬಹುದು. ಆರಂಭಿಕ ಹಂತದಲ್ಲಿ ಪ್ರಕೃತಿನಿಷ್ಠ ಗ್ರಾಮನಾಮಗಳು ಹುಟ್ಟಿಕೊಂಡರೂ ಕಾಲಾನಂತರದಲ್ಲಿ ವ್ಯಕ್ತಿವಾಚಕ, ಸಮುದಾಯವಾಚಕ ಮತ್ತು ವಸ್ತುವಾಚಕ ಮುಂತಾದವುಗಳಿಂದ ಗ್ರಾಮನಾಮವನ್ನು ಹೆಸರಿಸಲಾಯಿತು ಒಂದು ಗ್ರಾಮ ಸಮಾಜದ ಒಟ್ಟು ಸಂಸ್ಕೃತಿಯನ್ನು ಒಂದು ರೂಪುರೇಷೆಯ ಮಾದರಿಯಲ್ಲಿ ಹೆಸರುಗಳು ಈ ಕಾರಣದಿಂದ ಸಂಸ್ಕೃತಿಯ ಅಧ್ಯಯನದಲ್ಲಿ ಸ್ಥಳನಾಮಗಳು ಮಹತ್ವದ ಪಾತ್ರ ಪಡೆದುಕೊಳ್ಳುತ್ತವೆ.

ಆರಂಭಿಕ ಹಂತದಲ್ಲಿ ಆದಿ ಮಾನವ ಅಲೆಮಾರಿಯಾಗಿದ್ದು ಆಗ ಆತನಿಗೆ ಆಹಾರವನ್ನು ಹುಡುಕುವುದು ಅನಿವಾರ್ಯವಾಗಿತ್ತು. ಈ ರೀತಿಯ ಸ್ಥಿತಿಯಲ್ಲಿ ಆತ ಗೆಡ್ಡೆ ಗೆಣಸು ಹಣ್ಣು

ಹಂಪಲುಗಳು ಪಕ್ಷಿ ಪ್ರಾಣಿಗಳನ್ನು ಬೇಟೆ ಆಡಿ ಆಹಾರ ಹುಡುಕುತ್ತಾ ಏಕೈಕ ದಾರಿಯಾಗಿತ್ತು ಕಾಲಕಳೆದಂತೆ ಬೇಸಾಯವನ್ನ ಮುಂದೆ ರೂಢಿಸಿಕೊಂಡ ಮೇಲೆ ಆಹಾರ ಸಂಗ್ರಹಣೆ ಕಾರ್ಯವನ್ನು ಸ್ತ್ರಿ ಮಾಡುತ್ತಿದ್ದಳು ನಂತರದ ದಿನಮಾನಗಳು ಕಳೆದಂತೆ ಸ್ಮರಣ ಶಕ್ತಿಯ ಕಂಡು ಕೊಳ್ಳುವ ಮೂಲಕ ಬದುಕಿನ ಅಂಶಗಳನ್ನು ದಾಖಿಲಿಸಿದ ಈ ರೀತಿ ಗುಂಪು ಗುಂಪಾಗಿ ಜನ ನೆಲೆಯೂರಿದ ಸ್ಥಳ ಊರಾಯಿತು. ಎಡೆ, ತಾಣ, ಹಳ್ಳಿ, ಗ್ರಾಮ, ಪುರ, ಗೂಡು, ಬೀಡು, ನಾಡಿಯಾದವು. ವ್ಯವಹಾರದ ಅನುಕೂಲತೆಗಾಗಿ ತನ್ನ ಕುಟುಂಬಕ್ಕೆ ಹೆಸರಿಟ್ಟಂತೆ ಮುಂದೆ ತಾನು (ತಳಊರಿದ) ನೆಲೆಸಿದ ಸ್ಥಳಗಳಲ್ಲಿ ಹೆಸರಿಟ್ಟು ಕಾಲನಂತರ ಹೆಸರುಗಳಿಗೆ (ಪ್ರಾಕೃತಿಕ) ನಿಸರ್ಗ ಮೂಲದಿಂದ ಬಂದ ಸಸ್ಯ, ಗಿಡ, ಬಳ್ಳಿ, ಮರ, ಹಣ್ಣು, ಹೂ, ನದಿ, ಬೆಟ್ಟ, ಪ್ರಾಣಿ ಪಕ್ಷಿ,ವ್ಯಕ್ತಿ, ಐತಿಹ್ಯ ಮತು ಐತಿಹಾಸಿಕ ಘಟನೆಗಳು ಬೆಳೆವಣಿಗೆಗೆ ಕಾರಣವಾದವು.

ಪ್ರಾಗಿತಿಹಾಸ ಯುಗದಲ್ಲಿ ಮಾನವ ಬೇಟೆಯಿಂದ ಜೀವನ ನಡೆಸುತ್ತಿದ್ದಾಗ ಸ್ಥಳದಿಂದ ಸ್ಥಳಕ್ಕೆ ವಸಲೆ ಹೋಗುತ್ತಿದ್ದರಿಂದ ವ್ಯವಸ್ಥಿತವಾದ ಗ್ರಾಮಗಳಿರುವುದು ಸಾಧ್ಯತೆ ಇರಲಿಲ್ಲ ವ್ಯವಸಾಯ ಹಾಗೂ ಪಶು ಪಾಲನೆಯ ಬೇಳಕಿಗೆ ಬಂದು ಶಿಲಾಯುದಲ್ಲಿ (ಕ್ರಿ.ಪೂ.೨೫೦೦) ಕರ್ನಾಟಕದಲ್ಲಿ ಈ ಘಟಕದ ಹಲವು ಗ್ರಾಮ ನೆಲೆಗಳು ಬಯಲು ಸೀಮೆಯ ಭಾಗಗಳಲ್ಲಿ ರಾಯಚೂರು ಜಿಲ್ಲೆಯ ಪಿಕ್ಲಿಹಾಳು, ಬಳ್ಳಾರಿಯ ತೆಕ್ಕಲಕೋಟೆ, ಸಂಗನಕಲ್ಲು, ಹಾವೇರಿ, ಜಿಲ್ಲೆಯ ಹಳ್ಳೂರು, ಚಿತ್ರದುರ್ಗ ಜಿಲ್ಲೆ ಬ್ರಹ್ಮಗಿರಿ, ಮೈಸೂರು ಜಿಲ್ಲೆಯ ಟಿ.ನರಸೀಪುರ, ಹೆಮ್ಮಿಗೆ, ಹಾಗೂ ದಾವಣಗೆರೆ ಜಿಲ್ಲೆಯ ಹರಪನಹಳ್ಳಿಯ ಮಾಡಲಗೇರಿ, ಹರಿಹರದ ಕೊಮಾರನಹಳ್ಳಿ ಹರಿರ, ಕೊಂಡಜ್ಜಿ, ಹಲಸಬಾಳು, ಹೊನ್ನಾಳಿಯ ಕೋನಾಯಕನಹಳ್ಳಿ, ಜಗಳೂರಿನ ಆಕನೂರು, ದಾವಣಗೆರೆ ತಾಲ್ಲೂಕಿನ ಅಣಜಿ ಮುಂತಾದ ಭಾಗಗಳಲ್ಲಿ ಹಿಂದೆ ಮಾನವನ ನೆಲೆಗಳಾಗಿದ್ದವು.

ಸ್ಥಳನಾಮ ಅಧ್ಯಯನ ಮೊದಲು ಆರಂಭವಾದದ್ದು ಪಾಶ್ಚಾತ್ಯ ರಾಷ್ಟ್ರದಲ್ಲಿ ಖಚಿತ ಸಂಗತಿ ಕ್ರಿ.ಶ. ೧೭೬೮ರಲ್ಲಿ ಜರ್ಮನಿಯ ಗಾಫ್ರಿಡ್ ವಿಲ್ಹ್‌ಹೆಲ್ಮ ಲಿಬ್ನೀಜ್ ಆಂಗ್ಲ ಸ್ಥಳನಾಮಗಳ ಬಗೆಗೆ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿ ಕೊಟ್ಟ ಕೀರ್ತಿ ಎಚ್.ಡಿ. ಸಂಕಾಲಿಯ ಅವರಿಗೆ ಸಲ್ಲುತ್ತದೆ.

ಸ್ಥಳನಾಮದ ಚರಿತ್ರೆಯೆಂದರೆ ಮಾನವ ಜೀವನಕ್ಕೆ ಯೋಗ್ಯವಾದ ಪರಿಸರ ಜೀವನದ ಸುಖ ಸಂತೃಪ್ತಿಗೆ ಸಾಧನವಾಗಬಲ್ಲ ಸನ್ನಿವೇಶವನ್ನು ಹುಡುಕುತ್ತಾ ಒಂದು ಕಡೆ ವಲಸೆ ಹೋಗಿ ನೆಲೆಸಿದ ಮಾನವ ಜನಾಂಗ ಲಿಖಿತ ಇತಿಹಾಸವೇ ಆಗಿದೆ.

ಸಾವಿರಾರು ಪುಟಗಳುಳ್ಳ ದೊಡ್ಡ ಗ್ರಂಥದ ಸಾರ ಅದರ ಹತ್ತಾರು ಅಕ್ಷರಗಳ ಶಿರೋನಾಮೆಯಲ್ಲಿ ಅಡಗಿರುವಂತೆ ಒಂದು ಗ್ರಾಮದ ವಿಶೇಷತೆಯನ್ನು ಗ್ರಾಮಕ್ಕೊಂದು ಹೆಸರಿಡುವುದರ ಮೂಲಕ ಆ ವಿಶೇಷತೆಯನ್ನು ಕಾಣಬಹುದು. ಮತ್ತು ಅವುಗಳ ಮೇಲೆ ಪ್ರಾಕೃತಿಕ ಹಾಗೂ ಭೌಗೋಳಿಕ ಅಂಶಗಳು ಪ್ರಾಭಾವವಾಗಿರುವದನ್ನು ಕಾಣಬಹುದು.೨೦

ಈವರೆಗೆ ಸ್ಥಳನಾಮ ಅಧ್ಯಯನಕಾರರು ವರ್ಗೀಕರಣದ ಮಾದರಿಗಳನ್ನು ವಿವಿಧ ರೀತಿಯಲ್ಲಿ ಪಟ್ಟಿಮಾಡಿದ್ದಾರೆ ಅಂತಹ ಕೆಲವು ಮಾದರಿಗಳನ್ನು ನೋಡುವ ಮೂಲಕ ಪ್ರಸ್ತುತ ಅಧ್ಯಯನ ಪ್ರಾದೇಶಿಕ ವರ್ಗೀಕರಣ ಮಾಡಿಕೊಳ್ಳಲಾಗಿದೆ.[೨೦]

**ಎಚ್.ಡಿ. ಸಂಕಾಲಿಯ ಅವರ ವರ್ಗೀಕರಣ.**

೧. ವ್ಯಕ್ತಿಯಾಧಾರಿತ

೨. ಘಟನೆ ಆಧಾರಿತ

೩. ಸಂಪ್ರದಾಯ ಮತ್ತು ಮೌಲ್ಯಗಳಿಂದ

೪. ಭೌಗೋಳಿಕ ಲಕ್ಷಣಗಳಿಂದ

೫. ಹೂ, ಹಣ್ಣು, ಮರ, ಬೆಳೆಗಳಿಂದ

೬. ಪ್ರಾಣಿ ಪಕ್ಷಿಗಳಿಂದ

**ಎಂ.ಎಂ ಕಲಬುರ್ಗಿ ಅವರ ನಾಮ ವಿಜ್ಞಾನದಲ್ಲಿ**

೧. ನಿಸರ್ಗವಾಚಿ

೨. ನಿರ್ಮಾಣವಾಚಿ

೩. ಜನಾಂಗ ವಾಚಿ

೪. ವ್ಯಕ್ತಿವಾಚಿ

೫. ಆದರ್ಶವಾಚಿ

ಹೀಗೆ ಅನೇಕ ವಿದ್ವಾಂಸರು ಸ್ಥಳನಾಮಗಳ ವರ್ಗೀಕರಣ ಮಾದರಿಗಳನ್ನು ನೀಡಿದ್ದಾರೆ. ಒಂದು ಪ್ರದೇಶದ ಸ್ಥಳನಾಮ ವರ್ಗೀಕರಣವು ಅದೇ ಪ್ರದೇಶಕ್ಕೆ ಹೊಂದುತ್ತದೆ.

ಪ್ರಸ್ತುತ ಅಣಜಿ ಪರಿಸರದ ಗ್ರಾಮನಾಮಗಳನ್ನು ಪರಿಶೀಲಿಸಿ ಅವುಗಳನ್ನು ಹಟ್ಟಿವಾಚಕ, ಜಲವಾಚಕ, ವ್ಯಕ್ತಿವಾಚಕ, ವಂಶವಾಚಕ, ನಿಸರ್ಗವಾಚಕ, ಸಸ್ಯವಾಚಕ ಎಂದು ವರ್ಗೀಕರಿಸಲಾಗಿದೆ.

**ಹಟ್ಟಿವಾಚಕ**

ಪ್ರಾರಂಭದಲ್ಲಿ ಮಾನವರು ಒಂದೇ ಕಡೆ ಸೀಮಿತವಾಗಿ ನಿಲ್ಲುತ್ತಿರಲಿಲ್ಲ. ಈಗಿನ ಹಕ್ಕಿಪಿಕ್ಕಿಯವರಂತೆಯೇ ಕುರಿಗಾಹಿಗಳಂತೆಯೇ ನಾಲ್ಕಾರು ದಿನ ಒಂದೆಡೆಯಲ್ಲಿ ದನಕರು, ಕುರಿ ನಾಯಿಗಳನ್ನು ಹಿಡಿದುಕೊಂಡು ಮುಂದೆ ಮುಂದೆ ಸಾಗುತ್ತಿದ್ದರು. ಅನುಕೂಲಕರ ಪರಿಸರದಲ್ಲಿ ಕಾಲಿಟ್ಟೊಡನೆಯೇ ಬೀಡು ಬಿಡುತ್ತಿದ್ದರು. ಕಾಲಾನಂತರದಲ್ಲಿ ಅವರು ಬೀಡುಗಳೇ ಹಟ್ಟಿಗಳಾಗುತ್ತಿದ್ದವು. ಕೊಪ್ಪಲಗಳಾಗುತ್ತಿದ್ದವು, ಹಟ್ಟಿಗಳೇ ಆರಂಭಕಾಲದ ವಸತಿಗಳೆಂಬುದು ಕಾಣುತ್ತೇವೆ.

**ಜಲವಾಚಕ**

ಮಾನವ ಸಂಸ್ಕೃತಿಯ ವಿಕಾಸದ ಹಂತದಲ್ಲಿ ಜಲಕ್ಕೆ ಅತಿ ಮುಖ್ಯ ಸ್ಥಾನವಿದೆ. ಬಹುತೇಕ ಸಂಸ್ಕೃತಿಗಳಲ್ಲಿ ನೀರಿನ ಮೂಲವಿರುವ ಪ್ರದೇಶಗಳ ಬಳಿ ಜನ್ಮ ತಾಳಿವೆ ಎಂಬುದು ತಿಳಿಯುತ್ತದೆ. ಸದಾ ಅಲೆಮಾರಿ ಜೀವನವನ್ನು ನಡೆಸುತ್ತಿದ್ದ ಆದಿಮಾನವರು ಒಂದೆಡೆ ತಮ್ಮ ಆಸ್ತಿತ್ವವನ್ನು ಕಂಡುಕೊಂಡನು. ಹಾಗ ಜಲ ಮುಖ್ಯವಾಗಿ ಬೇಕಾಗಿತ್ತು. ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಸಿಕೊಂಡರು. ಸಹಜವಾಗಿ ಹರಿಯುವ ನೀರಿನ ಕೆರೆ ಕೊಳ ಕುಂಟೆಗಳಂತಹ ಕೃತಕ ಜಲಸಂಗ್ರಹಕಗಳನ್ನು ನಿರ್ಮಿಸಿಕೊಂಡರು, ಈಗಲೂ ಗ್ರಾಮಗಳ ನಿರ್ಮಾಣ ನೀರನ್ನು ಅವಲಂಬಿಸಿ ರಚನೆಯಾಗುತ್ತವೆ. ಹೀಗೆ ಜಲಮೂಲ ಸಂಸ್ಕೃತಿಯೇ ಕೆಲವು ಗ್ರಾಮಗಳಿಗೆ ಹೆಸರು ಕರೆದು ಕೊಳ್ಳುವ ರೂಢಿ ಆರಂಭವಾಗಿರಬೇಕು. ಅಂತಹ ಭೂಸ್ಥಿತಿಯನ್ನು ಹೇಳುವ ಸ್ಥಳನಾಮಗಳು ಈ ಪರಿಸರದಲ್ಲಿ ಕಂಡುಬರುತ್ತವೆ. ಅವು ತುಂಬಿಗೆರೆ, ಐಗೂರು, ಗಾಂಧೀನಗರ ಆಲೂರು, ಆಲೂರುಹಟ್ಟಿ, ಗುಡಾಳು, ಹೇಮ್ಮನಬೇತೂರು, ಕಿತ್ತೂರು. ಅಣಜಿ, ಇಂತಹ ಗ್ರಾಮಗಳು ಹಟ್ಟಿವಾಚಕ ಮುಂತಾದ ಹೆಸರುಗಳಿಂದ ಅಣಜಿ ಪರಿಸರದಲ್ಲಿ ಕಾಣುತ್ತೇವೆ.

**ಅಣಜಿ**

ಅಣಜಿಯ ಸ್ಥಳನಾಮ ಅಧ್ಯಯದನ ಹಿನ್ನೆಲೆಯಲ್ಲಿ ಶೋಧಿಸಿದಾಗ ಅಣಜಿಯಲ್ಲಿ ಈ ರೀತಿಯ ವಿವರಣೆಯಿದೆ. ಹಿಂದೆ ಈ ಸ್ಥಳದಲ್ಲಿ ಹೊನ್ನಿನ ಮಳೆಯು ಸುರಿದಿತ್ತು ಆದ ಕಾರಣ ಹಿಂದೆ ಈ ಸ್ಥಳಕ್ಕೆ ಹೊನ್ನಣಜಿ ಎಂದು ಕರೆಯುತ್ತಿದ್ದರು. ಇದೇ ಹೆಸರು ಕಾಲ ನಂತರದಲ್ಲಿ ಅಣಜಿಯ ರೂಪ ಪಡೆದುಕೊಂಡಿತು ಎಂದು ಹೇಳುತ್ತಾರೆ. ಮತ್ತು ಈಸ್ಥಳದಲ್ಲಿ ಅತೀ ಹೆಚ್ಚಿನದಾಗಿ ಚುಕ್ಕೆ ಬಾಳೆ ಹಣ್ಣನ್ನು ಬೆಳೆಯುತ್ತಿದ್ದರು. ಆದ್ದರಿಂದ ಕರ್ನಾಟಕದಾದ್ಯಂತ ಪ್ರಸಿದ್ದಿಯನ್ನು ಪಡೆದು ಕೊಂಡಿರುವಂತಹ ಗ್ರಾಮವಾಗಿದೆ. ಹಾಗೂ ಅಣಜಿ ಎಂಬ ಹೆಸರು ಬಂದಿರಬಹುದು ಎಂದು ಶಾಸನದಲ್ಲಿನ ಉಲ್ಲೇಖಗೊಂಡಿದೆ.

ಆಗ್ನೇಯ ದಿಕ್ಕಿನ ಕೆರೆಯ ಏರಿಯ ಇನ್ನೊಂದು ಬದಿಯ ತಗ್ಗಿನಲ್ಲಿ ಪಾತಾಳಗುಂಡಿಯಂತೆ ನೆಲ ಮಟ್ಟಕ್ಕೆ ಚಾವಣಿ ಇರುವ ಗುಡಿಯು (ಕೆರೆ ಹೊನ್ನಮ್ಮನ ಗುಡಿ ಎಂದು ಕರೆಯುತ್ತಾರೆ.) ಒಂದು ಮೂಲೆಯಲ್ಲಿ ಶಾಸನವಿದೆ ಕ್ರಿ.ಶ. ೧೧೮೨ ರಲ್ಲಿ ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವನ್ನಾಗಿ ದಾನ ನೀಡಿದ ವಿಚಾರ ಇರುವುದು ತಿಳಿದುಬಂದಿದೆ ಆದ್ದರಿಂದ ಈ ದೇವಾಲಯ ಸೋಮೇಶ್ವರ ದೇವಾಲಯಾಗಿದೆ. ಮತ್ತೊಂದು ವಿವರಣೆಯಂತೆ ಕೊಮ್ಮನಾಯಕನ ಮಗ ಚಿಕ್ಕಪ್ಪ ನಾಯಕನು ತನ್ನ ತಂದೆ–ತಾಯಿಗಳಿಗೆ ಪುಣ್ಯವಾಗಲೆಂದು ಕ್ರಿ.ಶ.೧೫೭೮ರಲ್ಲಿ ಅಣಜಿಯ ಮಾಚಪ್ಪದೇವರ ಮಠಕ್ಕೆ ದತ್ತಿ ಬಿಟ್ಟನೆಂದು ತಿಳಿಯುತ್ತದೆ. ಈ ಶಾಸನದಲ್ಲಿ ಮಾಚಪ್ಪ ದೇವರ ಮಠ ಉಲ್ಲೇಖವಿದ್ದರೂ ಈಗ ಇಲ್ಲಿ ಈ ಹೆಸರಿನ ಮಠವಿಲ್ಲ ಆದರೆ ಕೆರೆಯ ಬಳಿಯು ದಿಗಂಬರ ಸ್ವಾಮಿಗಳ ಮಠಯಿದೆ.[೧೧] ಆದರೆ ಒಂದು ಕಾಲದಲ್ಲಿ ಈ ಸ್ಥಳ ಜೈನ ಸನ್ಯಾಸಿಗಳು

ಧರ್ಮ ಪ್ರಚಾರದ ಸುಲವಾಗಿ ಆಯ್ಕೆ ಮಾಡಿಕೊಂಡಂತಹ ಸ್ಥಳವು ಕೂಡ ಇದು ಬಾಗಿತ್ತು.ಎಂಬ ಅಂಶಗಳು ಕಂಡುಬರುತ್ತವೆ. ಆದರೆ ಈ ಸ್ಥಳದಲ್ಲಿ ಹಲವು ರಾಜ ಮನೆತನಗಳು ಆಳ್ವಿಕೆ ನಡೆಸಿದ್ದಾರೆ ಅದರಲ್ಲಿ ಕದಂಬರು, ನೊಳಂಬರು ಪಾಳೆಯಗಾರರು ಇವರ ಕಾಲದ ಶಾಸನಗಳು ಕೂಡ ಅಣಜಿಯಲ್ಲಿ ದೊರೆತಿವೆ. ಅಣಜಿ ಎಂದರೆ ಹೆಜ್ಜೆ ಎಂದು ಅರ್ಥ ಎಂದು ೧೨ನೇ ಶತಮಾನದಲ್ಲಿ ಬಸವಣ್ಣನ ವಚನದಲ್ಲಿ ಉಲ್ಲೇಖಗೊಂಡಿದೆ.

**ತುಂಬಿಗೆರೆ**

ಮಾನವ ಸಂಸ್ಕೃತಿಯ ವಿಕಸದ ಹಂತದಲ್ಲಿ ಜಲಕ್ಕೆ ಅತಿ ಮುಖ್ಯಸ್ಥಾನವಿದೆ. ಬಹುತೇಕ ಸಂಸ್ಕೃತಿಗಳೆಲ್ಲವೂ ನೀರಿನ ಮೂಲವಿರುವ ಪ್ರದೇಶಗಳ ಬಳಿ ಜನ್ಮ ತಾಳಿವೆ ಎಂಬುದು ತಿಳಿಯುತ್ತದೆ. ಸದಾ ಅಲೆಮಾರಿ ಜೀವನವನ್ನು ನಡೆಸುತ್ತಿದ್ದ ಆದಿಮಾನವರು ಒಂದೆಡೆ ತಮ್ಮ ಆಸ್ತಿತ್ವವನ್ನು ನಡೆಸುತ್ತಿದ್ದರು. ಆಗ ಜಲ ಮುಖ್ಯವಾಗಿ ಬೇಕಿತ್ತು ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಕೊಂಡಿರುವುದಕ್ಕೆ ಜಲವಾಚಕ ಗ್ರಾಮವೆಂದು ಕರೆಯಲಾಗಿದೆ.

ಪ್ರಸ್ತುತ ಈ ಸ್ಥಳದಲ್ಲಿನ ಎರಡು ಕಡೆ ತೂಬುಗಳಿಂದ ಕೂಡಿದ ಕೆರೆಗೆ ತುಂಬಿದಕೆರೆ ತುಂಬಿಗೆರೆಯಾಗಿರಬೇಕು ಎಂದು ಸ್ಥಳೀಯರು ಹೇಳುತ್ತಾರೆ. ಮತ್ತು ತುಂಬಿ ಬೆಳೆಯನ್ನು ಅತೀ ಹೆಚ್ಚಾಗಿ ಈ ಗ್ರಾಮದಲ್ಲಿ ಬೆಳೆಯುವುದರಿಂದ ತುಂಬಿನಕೆರೆಯಾಗಿರಬೇಕು ಜನರ ವಾಡಿಕೆಯಾಗಿದೆ ಆದರೆ ಕ್ರಿ.ಶ.೧೧೨೧ರಲ್ಲಿ ದಾವಣಗೆರೆ ಶಾಸನ (ದಾ.ಶಾ.ಸಂ.೩ನೇ) ದಲ್ಲಿ ಕನ್ನುಂ ಗೌಡಗೆರೆಯ ಏಡುವಗೋಡಿಯ ತುಂಬಿನಹಳ್ಳಿಯ ಹೊಲದೊಳಗೆ ದಾವಣಗೆರ್ಯೆ ಸೀಮೆಯು ಎಂದು ಉಲ್ಲೇಖಗೊಂಡಿದೆ. ಹಾಗ ತುಂಬಿನ ಹಳ್ಳಿಯೇ ತುಂಬಿಗೆರೆ ಯಾಗಿರಬೇಕು (ಹರಪನಹಳ್ಳಿ ತಾಲ್ಲೂಕಿನಲ್ಲಿ ಕಾಗೆ ತುಂಬಿಗೆರೆ, ಜಂಗಮ ತುಂಬಿಗೆರೆ ಎನ್ನುವ ಊರುಗಳಿವೆ) ಪ್ರಸ್ತುತ ತುಂಬಿಗೆರೆ ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ಗ್ರಾಮವಾಗಿದೆ.

**ಆಲೂರು**

ಈ ಸ್ಥಳದಲ್ಲಿ ಹಿಂದೆ ಆಲದ ಮರಗಳ ತೋಪು ಇತ್ತು ಅಲ್ಲದೇ ಈ ಸ್ಥಳದಲ್ಲಿ ಅಧಿಕ ಸಂಖ್ಯೆಯಲ್ಲಿ ಆಲದ ಮರಗಳು ಬೆಳೆದಿದ್ದವು. ಈ ಗ್ರಾಮದಲ್ಲಿ ಆಲದ ಮರ ಇದ್ದ ಕಾರಣ ಆಲೂರು ಎಂಬ ಹೆಸರು ಬಂದಿತು ಎನ್ನುವ ಐತಿಹ್ಯವಿದೆ. ಈ ಊರು ಭರಮಣ್ಣನಾಯಕನ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಸಿಕ್ಕಿರುವ ಶಾಸನಗಳಲ್ಲಿ ಈ ಊರಿನ ಹೆಸರು ಎಲ್ಲೂ ಉಲ್ಲೇಖಗೊಂಡಿಲ್ಲ.

ಆಲ್+ಊರು=ಆಲೂರು

ಆಲ+ಹಾಲು ಮರ, ನೈಗ್ರೋದ ಒಬ್ಬತನ ಹೆಸರು ಹಡಿ ಆಲನೆಂಬುವವನ ನೆಲೆ ಆಲದ ಮರವಿರುವ ನೆಲೆ ಎಂಬ ಅರ್ಥದಲ್ಲಿ ಸ್ಥಳನಾಮ ಮತ್ತು ಊರು= ವಾಸ್ತವ್ಯ ಸೂಚಕ ವಾರ್ಶೀಕ (Generic) ಪದ ಮಾನವನ ವಾಸಸ್ಥಳ

ಆಲೂರು ಹೆಸರಿನ ಊರುಗಳು ಕರ್ನಾಟಕದ ಬಹುತೇಕ ತಾಲ್ಲೂಕುಗಳಲ್ಲಿ ಕಂಡುಬರುತ್ತವೆ. ಈ ಗ್ರಾಮವು ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ಪಾಳೇಗಾರರ ನೆಲೆಯಾಗಿದ್ದು ಒಂದು ಗ್ರಾಮವಾಗಿದೆ.

**ಕಂದಗಲ್ಲು**

ಈ ಊರಿನ ಸುತ್ತಲೂ ಹಳ್ಳದ ದಡದ ಮೇಲೆ ಕಂದಗಲ್ಲು ಇದ್ದವು. ಆದ ಕಾರಣ ಈ ಸ್ಥಳಕ್ಕೆ ಕಂದಗಲ್ಲು ಎಂಬ ನಾಮ ಬಂದಿತು. ಬ್ರಿಟೀಷರ ಆಡಳಿತ ಅವಧಿಯಲ್ಲಿ ಈ ಊರಿಗೆ ಕರಿಕಲ್ಲಿನ ಊರು ಎಂದು ಕರೆಯುತ್ತಿದ್ದರು. ವಿಶೇಷವೆಂದರೆ ಕರಿಕಲ್ಲು ಕಂದುಕಲ್ಲುಗಳು ಇಂದಿಗೂ ಕಂಡುಬರುತ್ತವೆ.

ಶಾಸನದ ವಿವರದಂತೆ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿ ಇದ್ದ (೧೪೩ನೇ ಶಾಸನ) ಶಾಸನದಿಂದ ಶ್ರೀ ವಿಜಯಾಧಿತ್ಯರಾಜನು ನೊಳಂಬವಾಡಿಯನ್ನು ಆಳುತ್ತಿರುವಾಗ (ಕ್ರಿ.ಶ.೧೦೦೩) ನೇ ಶೋಭಕೃತು ಸಂವತ್ಸರದ ಚೈತ್ರಶುದ್ಧ ತ್ರಯೋದಶಿ ಆಧಿತ್ಯವಾರದಂದು ಶ್ರೀ ಮದರಸರ ಸಮಸ್ತ ಪ್ರಧಾನರ ಕೋಗಳಿನಾಡ ಗೌಡಗಳು ಶ್ರೀ ಮಹಾಮಂಡಳಿಯವರು ನಗರದ ಪ್ರಭಾಚಂದ್ರ ಜಿನಾಲಯ ಸಮುದ್ಧರಣಕ್ಕಾಗಿ ಶ್ರೀಮತ್‌ನಂದಿ ಪಂಡಿತದೇವರ ದೇವ ಸೋಮಭಟ್ಟಾಚಾರ್ಯರು ಹಿರಿಯ ಗೇತಯ್ಯನು ಪೆರ್ಗಡೆ (ಹೆಗ್ಗಡೆ) ಕಣ್ಣಯ್ಯನು ಭರತ್‌ನಾಡನು ಹಂಬ ಶೆಟ್ಟಿಯ ಬರ್ಮಯ್ಯನು ಆಳಿಯಗೇತಯ್ಯನು ಮೊದಲಾಗಿ ಪಾದ ಮೂಲ ಪರಿವಾರ ನಾಗರ ಮಹಾಜನ ಪಂಚಮಠ ಸ್ಥಾನ ಗೌಡಗಳು ಮತ್ತು ತೊಂಬತ್ತಾರು ಸಾಸಿರ್ಬರುದಿದ್ದು (ಕಂದಬಳಗೆ ನಾಡ ಕಂಪಣ್ಣ) ಮುದುಣ್ಣ ಊರೂಪಿಯಂ ಮರಮಯ್ಯಂಗೆ ದಾನ ನೀಡಿದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.

ಈ ಶಾಸನದಲ್ಲಿ ಕಂದಗಲ್ಲಿನಲ್ಲಿ ಜಿನದೇವಾಲಯ ಬಗ್ಗೆ ವಿವರಯಿದೆ. ಈ ದೇವಾಲಯಕ್ಕೆ ನೀಡಿದ ದಾನವನ್ನು ತಪ್ಪದೆ ಪಾಲಿಸಿಕೊಂಡು ಬಂದರೆ ಕೋಟೆ ಚೈತ್ಯಾಲಯಗಳನ್ನು ಮಾಡಿದ ಪುಣ್ಯ ಲಭಿಸುತ್ತದೆ ಎಂದು ತಿಳಿಯುತ್ತದೆ. ಕಂದಗಲ್ಲು ಗ್ರಾಮ ಸಾವಿರ ವರ್ಷಗಳ ಹಿಂದಿನ ಗ್ರಾಮವೆಂದು ಶಾಸನದಲ್ಲಿ ನಗರ ಎಂದು ಉಪಯೋಗಿಸಿರುವುದರಿಂದ ಎಂದು ಅತ್ಯಂತ ಉಚ್ಚಾಯ ಸ್ಥಿತಿಯಲ್ಲಿದ್ದಿತೆಂದು ತಿಳಿಯಬಹುದಾಗಿದೆ.

ಕಂದನಗೋಳು>ಕಂದನ ಕಲ್ಲು>ಕಂದಕಲ್ಲು > ಕಂದಗಲ್ಲು

ಕಂದನ+ ಕಲ್ಲು> ಕಂದನಗಲ್ಲು> ಕಂದಗಲ್ಲು

ಕಂದಕಲ್ಲು >ಕಂದಗಲ್ಲು

'ಕ' ಕಾರದ ಸ್ಥಾನದಲ್ಲಿ 'ಗ' ಕಾರವು ಬಳಕೆಯಾಗಿದೆ. ಇದು ವ್ಯಂಜನ ಅಂತ್ಯ ಸ್ಥಳನಾಮವಾಗಿದೆ.

ಕಂದಗಲ್ಲಿನ ಸ್ಥಳನಾಮ ಆಯಾ ಶತಮಾನಗಳಲ್ಲಿ ರೂಪಾಂತರ ಪಡೆದುಕೊಳ್ಳುತ್ತಾ ಬಂದಿದೆ. ಇದು ಈ ಸ್ಥಳನಾಮ ವೈಶಿಷ್ಟವೇ ಎನ್ನಬಹುದು.[೨೨]

## ಐತಿಹ್ಯ:- ಅಣಜಿ ಹೊನ್ನಮ್ಮ

ನಮ್ಮ ಹಿಂದಿನ ನಾಡಿನವರ ಬಾಯಿಯಿಂದ ನಮ್ಮ ಪುರಾಣ ಕಥೆಗಳು ತಮ್ಮದೇ ಆದ ರೀತಿಯಲ್ಲಿ ತಮ್ಮ ಪರಿಸರಕ್ಕೆ ಹೊಂದುವ ರೀತಿಯಲ್ಲಿ ಸುತ್ತಮುತ್ತ ಸಮಾಜದ ಅಂಗ ರಚನೆಗೆ ಸೇರಿ ಹೋಲುವಂತೆ ಕಾವ್ಯಗಳ ಮುಖಾಂತರ ಕಥೆಗಳು ಪುನರ್ಜನ್ಮ ಹೊಂದಿದಂತೆ ಹೊರಬರತೊಡಗಿದವು.

ಈ ಪ್ರಸ್ತುತ ಕಥನ ಕಾವ್ಯ "ಅಣಜಿ ಹೊನ್ನಮ್ಮ" ಓದುತ್ತಿದ್ದಂತೆ ನಮ್ಮ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯತೊಡಗುತ್ತದೆ. ನಮ್ಮ ನಾಡಿನ ಹಲವಾರು ಹಳ್ಳಿಗಳಲ್ಲಿ ಪ್ರಚಲಿತವಾಗಿರುವ ಸ್ಥಳಪುರಾಣಗಳು-ಎಡೆಗಳು ಹೇಳುವ ಕಥೆಗಳಲ್ಲಿ ಇಂತಹ ತ್ಯಾಗಗಳ ವರ್ಣನೆಗಳು ಕಂಡುಬರುತ್ತವೆ. ಒಂದೊಂದು ಊರಿಗೂ ಆ ಊರಿಗೆ ಒಂದು ಹೆಸರಿಗೂ ಒಂದೊಂದು ಕಥೆ ಇರುವುದನ್ನು ನಾವು ಕಾಣುತ್ತೇವೆ. ಅದೇ ರೀತಿಯಾಗಿ ಅಲ್ಲಲ್ಲಿಯ ಕೆರೆಗಳಿಗೂ ಒಂದೊಂದು ಕಥೆ. ಎಂತಹ ಬೇಸಿಗೆ ಬಂದರೂ ಬತ್ತದ ಕೆರೆಗಳಿಗಂತೂ ಇಂತಹ ಕಥೆಗಳು ನಾಡಿನುದ್ದಗಲಕ್ಕೂ ಕಾಣಬಹುದು.

ಒಂದು ಕೆರೆಯನ್ನು ಕಟ್ಟಿಸಿದಾಗ ಆ ಕೆರೆಗೆ ನೀರಿನ ಸೆಲೆಯೇ ಸಿಗದಂತಾದಾಗ ಯಾವುದೋ ಕೋಟೆಯ ಗೋಡೆಗಳನ್ನು ಕಟ್ಟುವಾಗ ಅದರ ಅಡಿಪಾಯಕ್ಕೆ ಗೊರಸಲುಗಟ್ಟಿ ನೆಲೆ ಸಿಗದಂತಾದಾಗ ನರಬಲಿಯನ್ನು ಕೊಡುವ ಪದ್ದತಿ ಭಾರತದಲ್ಲಿ ಇನ್ನುಳಿದ ಭಾಗಗಳಲ್ಲಿದ್ದಂತೆ ಕನ್ನಡ ನಾಡಿನಲ್ಲಿಯೂ ಇದ್ದುದು ಸೂಜಿಗವೆನಲ್ಲಿ ಬೌದ್ಧ ಧರ್ಮ ಪ್ರಸಾರದಲ್ಲಿ ಬರುವ ಮುಂಚಿನಿಂದಲೂ ಇಂತಹ ಬಲಿ ಪ್ರಸಂಗಗಳ ಉದಾಹರಣೆಗಳು ಧಾರಾಳವಾಗಿ ಸಿಗುತ್ತವೆ. ಶಂಕರಾಚಾರ್ಯರು ಬೌದ್ದ ಧರ್ಮದಲ್ಲಿ ಹೆಚ್ಚಿನ ದೇನಿದೆ? ಎಂದು ಪ್ರಶ್ನಿಸಿ, ಗೌತಮ ಬುದ್ಧನು ಉಪದೇಶಿಸಿದ "ಅಹಿಂಸಾ ತತ್ವವನ್ನು ಹಿಂದೂ ಧರ್ಮಕ್ಕೆ ಅಳವಡಿಸಿಕೊಂಡು ಯಜ್ಞಯಾಗಾದಿಗಳಲ್ಲಿ ನರಬಲಿ, ಪಶುಬಲಿಯನ್ನು ನಿಷೇಧಿಸುವಂತೆ ಮಾಡಿದರು.

ಈ ಕೃತಿಯ ಫಲವಾಗಿ ನಮ್ಮ ನಾಡಿನಲ್ಲಿ "ಶಾಖಾಹಾರಿ ಜಾಯಮಾನ್ ನಮ್ಮನ್ನು ಅವರಿಸಿರಬೇಕು ಆದಾಗ್ಯೂ ನಮ್ಮ ಗ್ರಾಮೀಣ ಭಾಗದಲ್ಲಿ ನೆಲೆಸಿರುವ ಜನಕ್ಕೆ ಬಹಳ ಹಿಂದಿನಿಂದ ನಡೆದು ಬಂದ ಸಂಪ್ರದಾಯಗಳನ್ನು ತೊಡೆದು ಹಾಕುವ ಧೈರ್ಯವಾಗಲಿಲ್ಲವೇನೂ" ಅವರು ತಮ್ಮ ಹಳೆಯ ಕಂದಚಾರಗಳಿಗೆ ತಿಲಾಂಜಲಿಯನ್ನು ನೀಡಲಿಲ್ಲ ಅದರಿಂದಾಗಿ 'ಕೆರೆಗೆ ಹಾರ' ಸಂಪ್ರದಾಯ ಅನೂಚಾನವಾಗಿ ಮುಂದುವರೆದುಕೊಂಡು ಬಂದಿರಬೇಕು ಸಹಗಮನ ಪದ್ದತಿ ಎಂದರೆ ನರಬಲಿಯ ಇನ್ನೊಂದು ಪದ್ದತಿ ಎಂದು ಹೇಳಿದರೂ ತಪ್ಪಾಗಲಾರದು. ಇಂತಹ ಮೂಢನಂಬಿಕೆ ಇಲ್ಲವೇ ಅಂಧ ನಂಬಿಕೆಗಳು ನಮ್ಮ ಹಳ್ಳಿಗರನ್ನು ಮುತ್ತಿಕೊಂಡಿವೆ. ಅವುಗಳನ್ನು ತೊಡೆದುಹಾಕುವುದು ಸುಲಭ ಸಾಧ್ಯವಾದ ಮಾತಿಲ್ಲ ರಾಜಾರಾಮ್ ಮೋಹನ್‌ರಾಯ್ ರಂತವರು ಸತಿ ಸಹಗಮನ ದುಷ್ಟ ಪದ್ದತಿಯನ್ನು ನಿಲ್ಲಿಸಲು ದೀರ್ಘಕಾಲ ಶ್ರಮಿಸಿದರು. ಅವರಿಗೆ ಯಶಸ್ಸು ಸಿಗಬೇಕಾದರೆ ಅವರು ಪಟ್ಟ ಪಾಡು-ಉಪ ಅನುಭವ ಊಹಿಸಿಯೇ ತಿಳಿದು ಕೊಳ್ಳಬೇಕು.[೨೩]

ಒಂದು ಸಂಸ್ಕೃತಿ ಬೆಳಯಬೇಕಾದರೆ ಅದು ಯಾವಾಗಲೂ ನದೀ ದಂಡೆಯ ಮೇಲೆಯೇ ಬೆಳೆದು ಬಂದುದನ್ನು ನಾವು ಇತಿಹಾಸದಿಂದ ತಿಳಿದಕೊಂಡಿದ್ದೇವೆ "ಸಿಂಧೂ ಸಂಸ್ಕೃತಿ" "ನೈಲ್ ಸಂಸ್ಕೃತಿ" ಇತ್ಯಾದಿಗಳನ್ನು ಉದಾಹರಿಸಬಹುದು. ಅಂದರೆ ನಮ್ಮ ಜನ ಜೀವನಕ್ಕೂ ಜಲಕ್ಕೂ ಅತ್ಯಂತ ನಿಕಟ ಸಂಪರ್ಕವಿದ್ದುದು ಅರ್ಥವಾಗುತ್ತದೆ ಹೊಳೆ-ತೊರೆಗಳು ನಿಸರ್ಗನಿರ್ಮಿತವಾದವುಗಳು ಅವುಗಳಲ್ಲಿ ನಿರಂತರ ಹರಿಯುವ ಜಲ ಇವುಗಳ ಇಬ್ಬದಿಯಲ್ಲಿ ವಾಸಿಸಿರುವ ಜನಕ್ಕೆ ಮಾತ್ರ ದೊರಕಬಲ್ಲುದು ನಮ್ಮ ರಾಜ್ಯದ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುವ ಎಲ್ಲ ಜನಕ್ಕೆ ಈ ಸೌಲಭ್ಯ ಸಿಗುವುದು ಸಾಧ್ಯವಿಲ್ಲ ಅದಕ್ಕಾಗಿ ತಮ್ಮ ಹೊಲ ಗದ್ದೆಗಳಿಗಾಗಿ ಕುಡಿಯುವ ನೀರಿಗಾಗಿ ಪರ್ಯಾಯ ವ್ಯವಸ್ಥೆಯನ್ನು ಮಾಡಿಕೊಳ್ಳಲೇಬೇಕು. ಇಂತಹ ಪರ್ಯಾಯ ವ್ಯವಸ್ಥೆ ಎಂದರೆ ಹಳ್ಳಗಳ ಏರಿಯ ಮೇಲೆ ವಿಶಾಲವಾದ ಕೆರೆಗಳನ್ನು ಕಟ್ಟಿಸುವುದು ಅನಿವಾರ್ಯ ಇಂತಹ ಕೆರೆಗಳನ್ನು ಕಟ್ಟಿಸುವಾಗ ಅಲ್ಲಿ ಬೇಗನೆ ನೀರಿನ ಸೆಲೆ ಸಿಕ್ಕೇ ಸಿಗುತ್ತದೆ ಎಂದು ಖಂಡಿತವಾಗಿ ಹೇಳಲು ಬರುವುದಿಲ್ಲ. ಕೇವಲ ಮಳೆಗಾಲದ ಮಳೆಯನ್ನೇ ಅವಲಂಬಿಸಿದಲ್ಲಿ ಅದು ಶೇಖರಿಸಿಟ್ಟು ನೀರಿನಂತೆ ಸರ್ವಋತು ಜಲಾಶಯವಾಗಲಾರದು. ಮಳೆಯ ನೀರಿನ ಜತೆಯಲ್ಲಿಯೇ ಆ ಸ್ಥಳದಲ್ಲಿಯೇ ನೀರಿನ ನೆಲೆಗಳು ಇರಬೇಕಾದುದು ಅತ್ಯವಶ್ಯವೆನಿಸುತ್ತದೆ.

ಇಂತಹ ನೆಲೆಗಳು ಬೇಗನೇ ಸಿಕ್ಕದಿದ್ದಾಗ ಊರಿನ ಜನರೆಲ್ಲ ತಮ್ಮ ಮುಂದಾಳುವೆನಿಸಿದ ಊರಿನ ಗೌಡನಿಗೆ ಶರಣು ಹೋಗುತ್ತಾರೆ ತನ್ನ ಊರಿನ ಜನತೆಯ ಸಂರಕ್ಷಣೆಯ ಭಾರದ ಹೊಣೆ ತನ್ನದು ಎಂದು ಊರಿನ ಗೌಡ ಪ್ರಮಾಣಿಕವಾಗಿ ನಂಬುತ್ತಾನೆ. (ಇಂತಹ ಪರಿಸ್ಥಿತಿ ಇಂದೂ ಇದೆ ಎಂದು ನಾನು ಹೇಳವುದಿಲ್ಲ) ಅಂದಿನ ಜನರ ಸಂಸ್ಕೃತಿಯೇ ಹಾಗೆ ತನ್ನಿಂದ ತನ್ನ ನಾಡುವರಿಗೆ ಏನಾದರು ಉಪಯೋಗವಾಗಲೇಬೇಕೆಂಬುದು ಹಳ್ಳಿಯ ಮುಂದಾಳುಗಳ ಮನೋಭಾವ ಈ ಮನೋಭಾವನೆಯ ಮಾತಿನಲ್ಲಿಯೇ ಸಮರ್ಪಣಭಾವ ಒಡಮೂಡಿ ಬರುತ್ತದೆ. ೨೪

ಇಂತಹ ಭಾವನೆಗಳ ಸುಳಿಯಲ್ಲಿ ಸಿಕ್ಕ ಗೌಡ ತನ್ನ ಊರ ಏರಿಯ ಮೇಲೆ ಕಟ್ಟಿಸಿದ ಕೆರೆಗೆ ನೀರಿನ ಸೆಲೆಗಳೇಸಿಕ್ಕುವುದಿಲ್ಲ ಎನ್ನುವ ಸುದ್ದಿಯನ್ನು ಕೇಳಿಬಂತು ಗೌಡನಿಗೆ ನಂತರ ಊರಿನ ಜೋಯಿಸರನ್ನು ಕರೆಯಿಸಿ ಕೊಂಡು ಗೌಡನು ಈ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಾನೆ. ಅನಾದಿ ಕಾಲದಿಂದ ನಡೆದು ಬಂದ ಸಂಪ್ರದಾಯವನ್ನೇ ಅವಲಂಬಿಸಿದ ಜೋಯಿಸರು ಸಹಜವಾಗಿಯೇ ನರಬಲಿಯ ಮಾತನಾಡುತ್ತಾರೆ ಅಣಜಿ ಗೌಡರ ಕನಸಿನಲ್ಲಿ ಎಲ್ಲಮ್ಮನೇ ಕಾಣಿಸಿಕೊಳ್ಳುತ್ತಾಳೆ. (ಬಹುಶಃ ನರಬಲಿಯ ವಿಚಾರ ಗೌಡರ ಮನಸ್ಸನ್ನು ಆವರಿಸಿದಾಗ ಇಂತಹ ಕನಸುಗಳು ಕಾಣಿಸಿಕೊಳ್ಳುವುದು ಸ್ವಾಭಾವಿಕ) ಎಲ್ಲಮ್ಮ ಅಂದರೆ ಎಲ್ಲರ ಅಮ್ಮ ಜಗದಂಬೆ ಆಕೆಯೇ ನಮ್ಮ ಗ್ರಾಮವನ್ನು ಸಂರಕ್ಷಿಸುವ ಹೊಣೆಯನ್ನು ಹೊತ್ತ ಗ್ರಾಮದೇವಿ. ಆಕೆಯ ಕನಸಿನಲ್ಲಿ ತನ್ನ ಆಧ್ಯ ಕರ್ತವ್ಯವೆಂದು ಗೌಡ ಬಗೆಯುವುದು ಉಚಿತವೂ ಸೂಕ್ತವೂ ಆಗಿದೆ ಎಂದೇ ಹೇಳಬೇಕು ( ಇಂತಹ ಭಾವನೆಗಳತ್ತ ಅಂದಿನ ಪರಿಸ್ಥಿತಿಯನ್ನು ಗಮನದಲ್ಲಿರಿಸಿಕೊಳ್ಳಬೇಕೇ

ದಿನಃ ಅವುಗಳತ್ತ ಇಂದಿನ ವೈಜ್ಞಾನಿಕ ದೃಷ್ಟಿಯಿಂದ ನೋಡಬಾರದು ಎನ್ನುವದು ನನ್ನ ಅಭಿಪ್ರಾಯ) ಸರಿ ಕೆರೆಗೆ ಹಾರ ನೀಡಲೇಬೇಕು ಎನ್ನವುದಂತೂ ನಿರ್ಧರಿತವಾಗುತ್ತದೆ. ಆದರೆ ಯಾರನ್ನು ಕೆರೆಗೆ ಬಲಿಕೊಡಬೇಕು ತನ್ನ ಹೆಂಡತಿಯನ್ನು ಕೊಟ್ಟರೆ ತಾನು ವಿಧುರನಾಗುತ್ತಾನೆ. ಮಗನನ್ನು ಬಲಿ ಕೊಟ್ಟರೆ ಒಬ್ಬನೇಮಗ ಇದ್ದುದ್ದರಿಂದ ವಂಶಬೆಳೆಯಬೇಕು ಇನ್ನೂ ಮಗನ ಹೆಂಡತಿ ಸೊಸೆ ಹೊನ್ನಮ್ಮನನ್ನು ಬಲಿಕೊಟ್ಟರೆ ಮಗನಿಗೆ ಬೇರೆ ಮದುವೆ ಮಾಡಿಸಬಹುದು ಎಂದು ಗೌಡ ತನ್ನ ವಿಚಾರಗಳನ್ನು ಒಂದು ಹಂತಕ್ಕೆ ತಂದು ನಿಲ್ಲಿಸುತ್ತಾನೆ. ಆದರೆ ತನ್ನ ನಿರ್ಧಾರವನ್ನು ಯಾರಿಗೂ ತಿಳಿಸುವದಿಲ್ಲ ಆದರೆ ಬಹಿರಂಗಗೊಳಿಸಬಾರದಂತಹ ಸಂಗತಿಗಳಿಗೆ ಬಹುಬೇಗ ಕಾಲ ಮಾಡುತ್ತವೆ. ಆ ಕಾಲ ಬಲದಿಂದ ಅವು ಸುತ್ತು ಕಡೆ ಓಡಾಡುತ್ತಾನೆ ಇದರಿಂದಾಗಿ ಹೊನ್ನಮ್ಮಳೊಬ್ಬಳನ್ನು ಬಿಟ್ಟು ಉಳಿದವರಿಗೆಲ್ಲ ಈ ಸಂಗತಿ ಗೊತ್ತಾಗಿರುತ್ತದೆ. ಹೊನ್ನಮ್ಮ ತನ್ನ ಗಂಡನ ತಂಗಿಯ ಜತೆ ಊರ ಹೊರಗಿನ ಗುಡ್ಡದಡಿಯಲ್ಲಿ ಕೆಮ್ಮಣ್ಣು ತರಲು ಹೋದಾಗ ಆಯಾಸವಾಗಿ ಮಲಗುತ್ತಾಳೆ. ಹಾಗೆ ಮಲಗಿದಾಗ ಒಂದು ಕನಸು ಕಂಡು ಬೆಚ್ಚನೆ ಬೆರಗಾಗಿ ಏಳುತ್ತಾಳೆ. ಆಕೆ ಗಂಡನ ತಂಗಿ "ಅತ್ತಿಗೆ ಏನಾಯಿತು" ಎಂದು ಕೇಳಿದಾಗ ಹೊನ್ನಮ್ಮ ಹೇಳುತ್ತಾಳೆ ನಿನ್ನ ಅಣ್ಣನಿಗೆ ಎರಡನೇಯ ಮದುವೆ ಆದಂತೆ ಕನಸು ಬಿತ್ತು ಎಂದು ಹೇಳುತ್ತಾಳೆ ಮುಂಬರುವ ಸಂಕಟದ ಚಿತ್ರ ಕನಸಿನ ರೂಪ ತಾಳಿ ಆಕೆಯನ್ನು ಎಚ್ಚರಿಸುವ ಸನ್ನಿವೇಶವನ್ನು ನಮ್ಮ ಜಾನಪದ ವಿರಕ್ಷರಕುಕಿಗಳು ತಮ್ಮ ಕವನಗಳಲ್ಲಿ ವ್ಯಕ್ತಪಡಿಸಿರುತ್ತಾರೆ. ಎಷ್ಟು ಹೊಗಳಿದರು ಸಾಲದು ಮುಂದೆ ಮನೆಯತ್ತ ಹೊನ್ನಮ್ಮ ನಡೆದಾಗ ಕುರುಬರ ಹುಡುಗ ಕಾವ್ಯ ರೂಪದಲ್ಲಿ ಈ ಸಂಗತಿಯನ್ನು "ಇನ್ನಗೌಡರ ಹೊನ್ನಮ್ಮ ನಿನ್ನ ಕೆರೆಗೆ ಹಾರ ಇಡವರಂತೆ" ಎಂದು ಹೇಳಿ ಬಹಿರಂಗ ಪಡಿಸುತ್ತಾನೆ.

ತಾನು ಈ ಮೊದಲು ಕನಸಲ್ಲಿ ಕಂಡ ಸಂಗತಿಯನ್ನು ಹೊನ್ನಮ್ಮ ಹೋಲವ್ವನ ಮುಂದೆ ಕಾವ್ಯ ಪಂಕ್ತಿಗಳಲ್ಲಿಯೇ

" ಕರಿಯ ಕಂಬಳಿ ಹಾಸಿತ್ತು
ನೆಲ್ಲಿಕ್ಕೆ ಹಸೆ ಬರೆದಿತ್ತು
ಮುತ್ತಿನ ಕಳಸ ತುಂಬಿತ್ತು
ನಿಮ್ಮಣ್ಣಗೆ ಮತ್ತು ಲಗ್ನವಾದ್ದಂಗಿತ್ತು" ನೂರಕ್ಕೆ ನೂರು ಸತ್ಯವೆಂದು ತಿಳಿದು ಹೋಗುತ್ತದೆ.[೨೫]

ಹೊನ್ನಮ್ಮನ ತವರು ಮನೆಯ ಬಳಗ ದೊಡ್ಡದು. ಆರೇಳು ಅಣ್ಣ ತಮ್ಮಂದಿರು ತಾಯಿ ತಂದೆ ತಂಗಿಯರುನ್ನು ನೋಡುವ ಆಸೆ. ತನ್ನ ಬದುಕಿನ ಕೊನೆ ಕಣ್ಣೆದುರೇ ಕಾಣತೊಡಗಿದಾಗ ಆಕೆಯ ಸ್ಥಿತಿ ಯಾವ ರೀತಿಯಾಗಿರಬಹುದು ಎಂಬುದನ್ನು ಊಹಿಸಿಯೇ ತಿಳಿದು ಕೇಳಬೇಕು. ಮಾವನ ಅನುಮತಿಯೊಂದಿಗೆ ತವರಿಗೆ ಹೋಗಿ ಎಲ್ಲರನ್ನು ಕಣ್ತುಂಬ ನೋಡಿ ತನ್ನ ಗಂಡನಿಗೆ

ಯಾವುದೇ ಬಗೆಯ ತೊಂದರೆ ಕೊಡಬಾರದೆಂದು ಭಾಷೆಪಡೆದು ಅತ್ತೆ ಮನೆಗೆ ಬರುತ್ತಾಳೆ. ತನ್ನ ಗಂಡ ಮಲೆನಾಡಿಗೆ ಯಾತ್ರೆ ತೆರಳುವಾಗ ಆತನಿಗೆ ಅನೇಕ ಅಪಶಕುನಗಳಾಗುತ್ತದೆ. ಆದರೂ ಕರ್ತವ್ಯದ ಅರಿವು ಆತನನ್ನು ವಿಚಲಿತನನ್ನಾಗಿ ಮಾಡುವುದಿಲ್ಲ. ಮಲೆನಾಡಿಗೆ ಹೊರಟೇ ಬಿಡುತ್ತಾನೆ.[೨೬]

ಬಲಿಕೊಡುವ ದಿನ ದೃಶ್ಯವಂತು ಅತ್ಯಂತ ಹೃದಯ ವಿದ್ರಕ ಹೊನ್ನಮ್ಮನಿಗೆ ಮಗು ಇದೆ. ಆತನ ಹೆಸರು ದೇವೇಂದ್ರ ಬಲಿ ಹೋಗುವ ದಿನದಂದು ಮಗುವನ್ನು ಅತ್ಯಂತ ಪ್ರೀತಿಯಿಂದ ತಬ್ಬಿಕೊಂಡು ಎದೆ ಹಾಲು ಕೊಡುತ್ತಾ.

"ಬಾರಪ್ಪ ನನ್ನ ಮಗನೆ

ನೀನು ಕಡಿದ ಮೋಲೆ

ನಾಳೆ ಇಲ್ಲವಲ್ಲೋ" ಎಂದು ಗೋಗರೆದು ಭೋರೆಂದು ಅತ್ತುಬಿಡುತ್ತಾಳೆ. ಇಂತಹ ದೃಶ್ಯ ಕಲ್ಲುಮನಸ್ಸಿನ ಮನುಷ್ಯನ ಹೃದಯವನ್ನು ಕಲುಕಿ ಬಿಡುತ್ತದೆ. ಮುಂದು ಯಥಾ ಪ್ರಕಾರ ಕೆರೆಗೆ ಮಾವನ ಜರೆಯಲ್ಲಿ ಮುತ್ತೈದೆಯರ ಜತೆಯಲ್ಲಿ ಬಂದು ಕೆರೆಯ ಮಧ್ಯಭಾಗದಲ್ಲಿ ಒಂದು ವರತೆಯನ್ನು ತೋಡಿ ಪೂಜೆ ಸಲ್ಲಿಸಿ ಎಲ್ಲರೂ ದಂಡೆಗೆ ಬರುತ್ತಾರೆ. ಆದರೆ ಮಾವ ಇಲ್ಲೊಂದು ಯೋಚನೆಯನ್ನು ಹಾಕಿರುತ್ತಾನೆ. ಪೂಜೆ ಮಾಡುವಾಗ ಬೆಳ್ಳಿಯ ಬಟ್ಟಲನ್ನು ವರತೆಯಲ್ಲಿಯೇ ಮುಚ್ಚಿಟ್ಟುಬಂದಿರುತ್ತಾನೆ ಪೂಜೆ ಮುಗಿದಾಗಲೇ ಸೆಲೆಯಿಂದ ನೀರು ಉಕ್ಕತೊಡಗಿರುತ್ತದೆ.[೨೭]

ದಂಡೆಗೆ ಬಂದ ಉಳಿದೆಲ್ಲ ಹೆಣ್ಣು ಮಕ್ಕಳು ಊರಿನತ್ತ ನಡೆಯುತ್ತಾರೆ ದಂಡೆಯ ಮೇಲೆ ಇದ್ದವರು ಮಾವ ಸೊಸೆ ಇಬ್ಬರೇ ಸೂರ್ಯ ಪಶ್ಚಿಮದ ದಿಕ್ಕಿಗೆ ದತ್ತ ಧಾವಿಸುತ್ತಿದ್ದಾರೆ ಸಂಜೆಗತ್ತಲು ಆವರಿಸುವದರಲ್ಲಿದೆ ಆಗ ಮಾವ ತನ್ನ ಸೊಸೆಗೆ ಹೇಳುತ್ತಾನೆ 'ಬೆಳ್ಳಿಯ ಬಟ್ಟಲು ವರತೆಯ ಹತ್ತಿರ ಬಿಟ್ಟು ಬಂದಿದ್ದೀಯಾ ಅದನ್ನು ಬೇಗ ಹೋಗಿ ತೆಗೆದುಕೊಂಡ ಬಾ ಎಂದನು. ಮಾವನ ಆಣತಿಯಂತೆ ಹೊನ್ನಮ್ಮ ಕೆರೆಗಿಳಿಯುತ್ತಾಳೆ ಸೆಲೆಯೊಡೆದು ನೀರು ಪಸರಿಸಿರುತ್ತದೆ. ಪಾದದಡಿಯಲ್ಲಿ ತಂಪು ತನ ಆಕೆಗೆ ಗೊತ್ತಾಗುತ್ತದೆ. ನೀರು ಭರದಿಂದ ಹರಿದು ಬರುತ್ತಿದೆ ಆಗೊಮ್ಮೆ ಒಂದು ಕ್ಷಣ ಆಕೆ ವಿಚಲಿತಳಾಗಿ ದಂಡೆಯ ಮೇಲಿದ್ದ ಮಾವನನ್ನು ಕೇಳುತ್ತಾಳೆ "ಹೆಂಗೆ ಹೋಗಲಿ ಮಾವ ನನ್ನ ಕತ್ತಿಗೆ ಬಂದವು ನೀರು ಆಗ ಮಾವ ಹೇಳುತ್ತಾನೆ. ಬಂದಾರೂ ಬರಲವ್ವ ನೀ ಗಾಢ ಹೋಗಿ ತಾರವ್ವ" ಈ ಮಾತನ್ನು ಹೇಳುವಾಗ ಆತನೀಗೂ ಸಂಕಟ ಕಸಿವಿಸಿ ಕಳವಳಗಳು ಆವರಿಸಿರುತ್ತಾವೆ. ಆದರೆ ತನ್ನ ನಿರ್ಣಯ ಕಾರ್ಯಗತಗೊಳಿಸುವುದಕ್ಕಾಗಿ ಮನಸ್ಸನ್ನು ಗಟ್ಟಿಮಾಡಿಕೊಂಡಿರುತ್ತಾನೆ.[೨೮] ಉದ್ದೇಶ ಒಂದೇ ತನ್ನ ಊರಿನ ಜನಕ್ಕೆ ಹಿತವಾಗಬೇಕು.

ಈಗಾಗಲೇ ಹೊನ್ನಮ್ಮನಿಗೆ ಜ್ಞಾನೋದಯವಾಗುತ್ತದೆ. ತನ್ನನ್ನು ಕೆರೆಗೆ ಬಲಿಕೊಡುತ್ತಾರೆ ಎಂಬ ಮಾತು ನೆನಿಸಿಕೊಳ್ಳುತ್ತಾಳೆ. ಆಗ ಆಕೆಗೆ ಎಲ್ಲಿಲ್ಲದ ಧೈರ್ಯ ಬರುತ್ತದೆ. ಆದಾಗ್ಯೂ ಮಾನವೀಯತೆ

ಅವಳಲ್ಲಿ ಎದ್ದು ನಿಲ್ಲುತ್ತದೆ. ತನ್ನ ಮಾವ ದಂಡೆಯ ಮೇಲೆ ಎಷ್ಟೋಂದು ವೇಳೆ ಕುಳಿತು ರೋದಿಸುತ್ತಾನೋ? ಎನ್ನುವ ದುಃಖ ಅವಳನ್ನು ಆವರಿಸುತ್ತದೆ. ತಾನು ನೀರಿನಲ್ಲಿ ಮುಳುಗುವ ಹಂತದಲ್ಲಿದ್ದಾಗ ಮಾವನಿಗೆ ಹೇಳುತ್ತಾಳೇ[೨೯]

"ನಾನು ಹೋಗುತ್ತೀನಿ

ನೀವು ಹೋಗಿ ಮಾವಯ್ಯ"

ಮಾವ ಮರಳುತ್ತಾನೆ. ಹೊನ್ನಮ್ಮ ನೀರಿನ ದಂಡೆಯಲ್ಲಿ ಮಾಯವಾಗುತ್ತಾಳೆ. ಈ ಶರೀರ ಅಶಾಶ್ವತ ಇನ್ನೊಬ್ಬರ ಬಳತಿಗಾಗಿ ಅದನ್ನು ಮೊದಲೇ ಕೊನೆಹೊಳಿಸಿದಲ್ಲಿ ತಪ್ಪೇನು ಎನ್ನುವ ತ್ಯಾಗದ ಮನೋಭಾವ ನಮ್ಮ ಹಳ್ಳಿಗರಲ್ಲಿ ಇರುತ್ತದೆ ಎಂಬುದು ಈ ಕಥನ ಕವನದಿಂದ ಗೊಚರಿಸುತ್ತದೆ.

ಹೀಗೆ ಬಲಿ ಹೋದ "ಅಣಜಿ ಹೊನ್ನಮ್ಮ" ನನ್ನು ಊರವರು ಮರೆಯುವುದಿಲ್ಲ ಆಕೆಯ ಗುಡಿ ಕಟ್ಟುತ್ತಾರೆ ಆಕೆಯ ಪೂಜೆ ದಿನ ನಿತ್ಯ ನಡೆಯುತ್ತ ಬರುತ್ತದೆ. ಹೀಗೆ ಬಲಿ ಹೋದ ಹೊನ್ನಮ್ಮ ಆ ಹಳ್ಳಿಯ ಇತಿಹಾಸದಲ್ಲಿ ಅಮರಾಳಾಗಿ ಉಳಿದುಬಿಡುತ್ತಾಳೆ.[೩೦] ಅಣಜಿ ಹೊನ್ನಮ್ಮನ ಕತೆಗೆ ಸಂಪೂರ್ಣ ಸಾಧಮ್ಯವನ್ನು ಹೊಂದಿದ ಅನೇಕ ಕತೆಗಳು ನಮ್ಮ ಜಾನಪದ ಕಾವ್ಯಗಳಲ್ಲಿ ಹಲವಾರು ಕೆರೆಗಳ ಹಾಡೆಯ ಮೇಲೆ ನಿಲ್ಲಿಸಿದ ಕಲ್ಲು ಬರಹಗಳಿಂದ ತಿಳಿದು ಬರುತ್ತವೆ. ಒಂದೇ ಬಗೆಯ ಕತೆಗಳು ಹಲವು ಕಡೆ ಕೇಳ ಬಂದಾಗ ಒಂದು ಮಾತು ವೇದ್ಯವಾಗುತ್ತದೆ. ಕೆರೆಗೆ ನರಬಲಿಯನ್ನು ಕೊಡುವ ಒಂದು ಸಂಪ್ರದಾಯ ನಮ್ಮ ಜನಪದ ನಡೆಸಿಕೊಂಡು ಬಂದಿರುವದು ವ್ಯಕ್ತವಾಗುತ್ತದೆ. ಕುಣಿಗಲುಕೆರೆ, ಒಡ್ಡರನೋಯಿಕತೆ, ಕಲ್ಲಿನಕೇರಿ, ಭಾಗೀರಥಿಕಥೆ ಇವುಗಳಲ್ಲದೇ ಉತ್ತರ ಕರ್ನಾಟಕದ ಹಲವು ನೂರಾರು ಹಳ್ಳಿಗಳಲ್ಲಿ ಇದೇ ಬಗೆಯ ಕಥೆಗಳು ಬಳಕೆಯಲ್ಲಿವೆ. "ಬದಾಮಿ ಬಳಿಯ ನೀಲಗುಂದದ ದಿವಗಂತ ಲೇಖಕರಾದ ಬಿಂದುಮಾಧವರು "ಕೆರೆಗೆ ಹಾರ" ಎನ್ನುವ ಕಾದಂಬರಿಯನ್ನೇ ಇಂತಹ ಬರಿದಾಗದ ಕಥೆಯನ್ನೇ ಆಧರಿಸಿ ಬರೆದಿದ್ದಾರೆ.[೩೧]

## ಅಡಿ ಟಿಪ್ಪಣಿಗಳು

೧. ಗಿರಿಜ. ಟಿ ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೯೧ ಪುಟ – ೪೮೩

೨. ಗಿರಿಜ. ಟಿ ಪೂರ್ವೋಕ್ತ. ಪುಟ – ೫೨೪–೫೨೫

೩. ಶ್ರೀನಿವಾಸ ಎಂ.ವಿ, ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರ ಆಳ್ವಿಕೆ ಚಂದ್ರವಳ್ಳಿ – ೧೯೭೬, ಪುಟ–೨

೪. ಶ್ರೀನಿವಾಸ.ಎಂ.ವಿ, ಪೂರ್ವೋಕ್ತ, ಪುಟ–೪

೫. ಉಷಾ.ಎಂ.ಎಚ್, ಚಿತ್ರದುರ್ಗ ಜಿಲ್ಲೆಯಲ್ಲಿ ಕದಂಬರ ಆಳ್ವಿಕೆ ಶ್ರೀನಿವಾಸ ಮತ್ತು ಲಕ್ಷ್ಮಣ್ ತೆಲಗಾವಿ ಚಂದ್ರವಳ್ಳಿ – ೧೯೭೬, ಪುಟ–೧೫

೬. ರಘುನಾಥಭಟ್ ಎಚ್.ಆರ್., ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ ಚಂದ್ರವಳ್ಳಿ – ೧೯೭೬ ಪುಟ – ೧೦

೭. ಸತ್ಯನ್ ಬಿ ಎನ್., (ಸಂ), ಚಿತ್ರದುರ್ಗ ಡಿಸ್ಟ್ರಿಕ್ ಗ್ಯಾಜಿಟಿಯರ್ –೧೯೭೫ ಪುಟ– ೨೨

೮. ಗಿರಿಜ. ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ ೨೦೦೧, ಪುಟ – ೧೯೫

೯. ಗಿರಿಜ.ಟಿ., ಪೂರ್ವೋಕ್ತ – ೧೯೯೧ ಪುಟ – ೩೧೯

೧೦. ಕರ್ನಾಟಕ ರಾಜ್ಯ ಗೆಸೆಟೀಯರ್ ಭಾಗ–೩, ಪುಟ – ೫೧೦

೧೧. ಶ್ಯಾಮಲ ಸಿ.ಆರ್, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ – ೨೦೦೮ ಪುಟ – ೬೬

೧೨. ನಂಜುಂಡಸ್ವಾಮಿ ಎ.ಎಸ್. ಪಾಳೇಯಗಾರು ಮತ್ತು ಒಡೆಯರ ಇತಿಹಾಸ, ೨೦೧೨ ಪುಟ – ೪೩

೧೩. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ೨೦೦೬ ಪುಟ – ೫೦

೧೪. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪುಟ – ೫೩, – ೫೪

೧೫. ಶ್ಯಾಮಲ ಸಿ.ಆರ್., ಪೂರ್ವೋಕ್ತ – ೨೦೦೮, ಪುಟ – ೭೨

೧೬. ಪುಟ್ಟಣ್ಣ. ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ೧೯೯೭, ಪುಟ – ೨

೧೭. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ – ೧೯೯೭ ಪುಟ – ೩೮–೪೦

೧೮. ಬಸವಲಿಂಗಪ್ಪ ಸಿ.ಎಸ್., ಚಿತ್ರದುರ್ಗ ಜಿಲ್ಲೆಯಲ್ಲಿ ನೊಳಂಬರ ಆಳ್ವಿಕೆ, ಚಂದ್ರವಳ್ಳಿ – ೧೯೭೬– ಪುಟ–೨೯

೧೯. ನಾಗರಾಜರಾವ್.ಎಚ್.ಎಂ., ಚಿತ್ರದುರ್ಗ ಜಿಲ್ಲೆಯಲ್ಲಿ ಸೇವುಣರ ಆಳ್ವಿಕೆ ಚಂದ್ರವಳ್ಳಿ – ೧೯೭೬, ಪುಟ – ೪೦

೨೦. ಗೋಪಾಲ.ಬಾ.ರಾ., ಬನವಾಸಿ ಕದಂಬರು ಪುಟ –೫೭

೨೧. ಶ್ರೀ. ಕ.ರಾ ಕೃಷ್ಣಸ್ವಾಮಿ, ಕೆರೆಹೊನ್ನಮ್ಮ –೧೯೬೪ ಪುಟ – ೨೦–೨೫

೨೨. ಗುರುಪ್ರಸಾದ್ ಸಿ.ಟಿ., ಕೆರೆಹೊನ್ನಮ್ಮ ಕಾವ್ಯ – ೨೦೦೩, ಪುಟ – ೧೫

೨೩. ಗುರುಪ್ರಸಾದ್ ಸಿ.ಟಿ, ಪೂರ್ವೋಕ್ತ, ೨೦೦೩, ಪುಟ – ೧೬–೨೦

೨೪. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ೨೦೦೬, ಪುಟ – ೫೫–೫೬

೨೫. ಕರ್ನಾಟಕ ರಾಜ್ಯ ಗೆಸೆಟೀಯರ್ ಭಾಗ – ೨ ಪುಟ – ೫೧೬

೨೬. ಎಪಿಗ್ರಾಪಿಯ ಕರ್ನಾಟಕ, ಸಂ ಪುಟ – ೧೧ ಪುಟ – ೨೨೫

೨೭. ಎಫಿಗ್ರಾಫಿಯ ಕರ್ನಾಟಕ, ಸಂ ಪುಟ – ೧೧ – ೨೨೬ –೨೨೭

೨೮. ಪುಟ್ಟಣ್ಣ ಎಂ.ಎಸ್, ಪೂರ್ವೋಕ್ತ, ಪುಟ – ೩೮

೨೯. ಅದೇ, – ೫೦–೫೧

೩೦. ರಾಜಶೇಖರಪ್ಪ. ಬಿ., ಇತಿಹಾಸ ಕಥನ, ಪುಟ – ೧೨೬

೩೧. ರಾಜಪ್ಪ ಟಿ.ಎಸ್., ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು ಪುಟ–೪

# ಅಧ್ಯಾಯ – ೩

## "ಸಾಮಾಜಿಕ ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳು"

ಇತಿಹಾಸವು ಮುಖ್ಯವಾಗಿ ಪ್ರಾಚೀನ ಸಮಾಜದ ಉಗಮ, ಬೆಳವಣಿಗೆ, ವೈಭವ ಮತ್ತು ಅವನತಿಗಳನ್ನು ತಿಳಿಸುತ್ತದೆ. ಗತಕಾಲದ ಘಟನೆಗಳನ್ನು ಸರಿಯಾದ ಆಧಾರಗಳ ಮೇಲೆ ನಿರೂಪಿಸುವುದು ಇತಿಹಾಸದ ಮುಖ್ಯ ಕಾರ್ಯವಾಗಿದೆ. ಇತಿಹಾಸವು ಆರಂಭದಲ್ಲಿ ದೇಶದ ರಾಜಕೀಯ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟ ರಾಜ್ಯಗಳ ವಿಷಯಗಳನ್ನು ಕಾಲಾನುಕ್ರಮಣಿಕೆಯಲ್ಲಿ ವರ್ಣಿಸುತ್ತದೆ. ಚರಿತ್ರೆಕಾರ ಕಾರ್ಲೈಲನ ಅಭಿಪ್ರಾಯದಂತೆ ಇತಿಹಾಸ ಕೇವಲ ಮಹಾಪುರುಷರ ಜೀವನ ಚರಿತ್ರೆಯ ರಚನೆಯಲ್ಲಿ ಮಹಾಪುರುಷರ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ನಾವು ಅಲ್ಲಗೆಳಯುವಂತಿಲ್ಲ. ಆದರೆ ಜನ ಸಾಮಾನ್ಯರ ಜೀವನದ ರೀತಿ ನೀತಿಗಳ ಮೇಲೆ ಚರಿತ್ರೆ ಬರವಣಿಗೆಕಾರರು ಸಾಕಷ್ಟು ಆಸಕ್ತಿಯನ್ನು ತೋರಿಸಬೇಕೆಂಬ ಅಭಿಪ್ರಾಯವು ಅಂದಿನ ಚರಿತ್ರೆಕಾರರ ದೃಷ್ಠಿಯಾಗಿದೆ. ಆದುದರಿಂದ ಈ ಹಿಂದೆ ಇತಿಹಾಸಕಾರರ ದೃಷ್ಠಿಯು ಕೇವಲ ರಾಜಕೀಯ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟ ರಾಜಕೀಯ ಜೀನವದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ ರಾಜ, ಮಹಾರಾಜರು ಅಮಾತ್ಯರೇ ಮೊದಲಾದವರು ವಿಷಯದಲ್ಲಿ ಹೆಚ್ಚು ವಿವರಣೆಯನ್ನು ಕೊಡುತ್ತಿತ್ತು.

ಆದರೆ ಜೊತೆಗೆ ಜನರ ಸಮುದಾಯ ಜೀವನ ರೀತಿ ನೀತಿಗಳು, ಅವರ ಆಚರಣೆಗಳು, ನಂಬಿಕೆಗಳು ಜನರ ಸಮಾಜ ಜೀವನದ ನಾನ ಮುಖಗಳನ್ನು ಮತ್ತು ಸಮಾಜದ ವಿವಿಧ ಸ್ಥಿತಿಗತಿಗಳನ್ನು ಸರಿಯಾಗಿ ಅರಿತರೆ ಮಾತ್ರ ಚಾರಿತ್ರಿಕ ವಿಷಯಗಳನ್ನು ತೃಪ್ತಿಕರವಾಗಿ ನಿರೂಪಿಸಬಹುದು. ಉದಾ: ಫ್ರಾನ್ಸ್‌ನ ಮಹಾಕ್ರಾಂತಿಯ ಚರಿತ್ರೆಯನ್ನು ನಿರೂಪಿಸುವಾಗ ರಾಜಕೀಯ ಅಂಶಗಳ ಜೊತೆಗೆ ಅಂದಿನ ಸಾಮಾಜಿಕ ಶಕ್ತಿಗಳ ಚಿತ್ರಣ ಅತ್ಯಗತ್ಯವಾಗಿವೆ. ಅಂತೆಯೇ ಚರಿತ್ರೆಯ ನಿರ್ಮಾಣವು ಕೇವಲ ಬಂದ ಅಂಶವನ್ನು ಅವಲಂಬಿಸಿಲ್ಲ. ಆದ್ದರಿಂದ ಚರಿತ್ರೆಯ ಅಧ್ಯಯನದಲ್ಲಿ ಆರ್ಥಿಕ, ಧಾರ್ಮಿಕ, ರಾಜಕೀಯಮತ್ತು ಸಾಂಸ್ಕೃತಿಕ ಅಧ್ಯಯನಗಳಿಗೆ ಪ್ರಾಮುಖ್ಯತೆಯಿದೆ.

ಅದರಲ್ಲಿ ಸಾಮಾಜಿಕ ಜೀವನದ ಕ್ಷೇತ್ರಗಳಿಂದ ಹೆಚ್ಚಿನ ಮಾಹಿತಿ ಸಿಗುತ್ತದೆ. ಅನೇಕ ಜನರು ಕೂಡಿದ್ದು ಒಂದು ಸಮಾಜವಾಗುತ್ತದೆ. ಸಮಾನ ಸ್ವಭಾವಗಳುಳ್ಳ ಪ್ರಾಣಿಗಳು ಸಾಂಘಿಕವಾಗಿ

ಸಂಬಂಧವನ್ನು ಹೊಂದಿರುವ ವ್ಯವಸ್ಥೆಯನ್ನು ಸಮಾಜವೆನ್ನಬಹುದು. ಪರಸ್ಪರ ಪ್ರಜ್ಞೆ ಅಥವಾ ಅರಿವು ಸಮಾಜಕ್ಕೆ ಅತ್ಯಗತ್ಯ. ಸಮಾಜವೆಂದರೆ ಸಾಮಾಜಿಕ ಸಂಬಂದಗಳ ಬಲೆ. ಸಾಮಾಜಿಕ ಸಂಬಂಧಗಳು ನಿರ್ಬಂದಿಸುವುದು ಸಮಾಜದ ಕಟ್ಟಲೆಗಳಿಗೆ ಮತ್ತು ನೀತಿ ನಿಯಮಗಳಿಗೆ ಸೀಮಿತವಾದ ಕೆಲಸ. ಸಮಾಜ ಜೀವಿಗಳ ಕಾರ್ಯಕಲಾಪಗಳು ಪರಸ್ಪರ ಅವಲಂಬನೆ ಮತ್ತು ಸ್ವಾತಂತ್ರ್ಯದಿಂದ ಕೂಡಿದೆ.

ಸಮಾಜ ನಿರಂತರ ಬದಲಾವಣೆಗಳಿಂದ ಒಂದುಗೂಡಿದ್ದು ಹಾಗೂ ಸಂಕೀರ್ಣ ಸ್ವಭಾವದ ಸಮುದಾಯದ ಮಾನವನ ಜೀವನದ ಸಫಲತೆಗೆ ಅನಿವಾರ್ಯವಾದದ್ದು. ಮನುಷ್ಯನು ಸಮಾಜ ಜೀವಿ ಸಮಾಜಕ್ಕೂ ವ್ಯಕ್ತಿಗೂ ನಿಕಟವಾದ ಸಂಬಂಧವಿದೆ. ಈ ಸಂಬಂದದ ಸ್ವರೂಪವನ್ನು ತಿಳಿಯುವುದು ಅವಶ್ಯಕ ಮನುಷ್ಯನು ಏಕಾಂಗಿಯಾಗಿ ಜೀವಿಸುವುದು ಸಾಧ್ಯವಿಲ್ಲ. ಮತ್ತು ಸಮಾಜ ಜೀವನವು ಮನುಷ್ಯನ ನೈಸರ್ಗಿಕ ಸ್ವಭಾವವೆಂದು ಹೇಳಲಾಗಿದೆ. ಮನುಷ್ಯನು ಇತರರ ಸಂಗಡ ಗುಂಪಿನಲ್ಲಿ ಜೀವಿಸುತ್ತಾನೆ. ಒಂದು ಗುಂಪಿನಲ್ಲಿ ಅನೇಕ ಸಣ್ಣಪುಟ್ಟ ಸಂಘಗಳು ಕೇಲವು ಸೀಮಿತ ಉದ್ದೇಶಗಳಿಗೆ ಸಾಧನೆಗಳಿಗೆ ಸೃಷ್ಠಿಯಾಗುತ್ತವೆ. ಮನುಷ್ಯನು ತನ್ನ ವಿವಿಧ ಬಯಕೆಗಳು ಮತ್ತು ಗುಂಪುಗಳ ಮೂಲಕ ಪೂರೈಸಿಕೊಳ್ಳುತ್ತಾನೆ. ಹೀಗೆ ಜೀವಿಸುವಾಗ ಪ್ರತಿಯೊಬ್ಬರ ಕ್ರಿಯೆಯ ಇನ್ನೊಬ್ಬರ ಕ್ರಿಯೆಯ ಮೇಲೆ ಪರಿಣಾಮವನ್ನು ಬೀರುತ್ತದೆ. ಮನುಷ್ಯನ ಪರಸ್ಪರ ಕ್ರಿಯೆಯು ಸಾಮಾಜಿಕ ಜೀವನದ ಅತಿಮುಖ್ಯ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ಒಂದು ಪ್ರದೇಶದ ವಾಸ್ತವಿಕ ಚಿತ್ರಣ ಅರ್ಥಮಾಡಿಕೊಂಡಾಗ ಮಾತ್ರ ಆ ಪ್ರದೇಶದ ಇತಿಹಾಸ ಕಟ್ಟಲು ಸಾದ್ಯವಾಗುತ್ತದೆ.[೧]

**ಸಾಮಾಜಿಕ ಸ್ಥಿತಿಗಳಿಗಳು**

ಭಾರತೀಯ ಸಮಾಜದಲ್ಲಿ ವರ್ಣ ವ್ಯವಸ್ಥೆ. ಜಾತಿಪದ್ದತಿಗಳು ಮಹತ್ತರವಾದ ಪಾತ್ರವನ್ನು ನಿರ್ವಹಿಸಿದೆ. ಕನ್ನಡ ನಾಡಿನ ಸಾಮಾಜಿಕ ಸ್ಥಿತಿಗತಿಗಳು ತಲೆಮಾರಿನಿಂದ ತಲೆಮಾರಿಗೆ ಶತಮಾನದಿಂದ ಶತಮಾನಕ್ಕೆ ಮುಂದುವರೆಕೆಯು ಅಂಶವನ್ನು ಹೊಂದಿರುವಂತಹ ಅಂಶವನ್ನು ಕಾಣುತ್ತೆವೆ.

ಪ್ರಸ್ತುತ ಅಣಜಿ ಪ್ರದೇಶವು ಸಹ ಪುರಾತನ ಕಾಲದಲ್ಲಿ ತನ್ನದೆ ಆದ ಸಂಸ್ಕೃತಿಯನ್ನು ಹೊಂದಿದ್ದು ಸಾಮಾಜಿಕವಾಗಿ ಶಾಂತಿ ಸಮೃದ್ದಿಯನ್ನು ಸಾಧಿಸಿತ್ತು ಎನ್ನುವುದಕ್ಕೆ ಸಾಹಿತ್ಯ ಹಾಗೂ ಶಾಸನಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಸಾಮಾಜಿಕ ವಿಷಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಭಾರತದ ಇತರ ಭಾಗಗಳಲ್ಲಿ ವರ್ಣವ್ಯವಸ್ಥೆಯಿದ್ದಂತೆ ಈ ಭಾಗದಲ್ಲಿ ಸಹ ವರ್ಣ ವ್ಯವಸ್ಥೆ ಜಾರಿಯಲ್ಲಿತ್ತು.

ಸಮಸ್ತ ಮಾನವ ಸಮೂಹದ ಸಮಾಜವನ್ನು ೪ ವರ್ಗಗಳಾಗಿ ವಿಂಗಡಿಸಲಾಗಿದೆ. ಇದು ವ್ಯಕ್ತಿಗಳ ಸಾಮಾಜಿಕ ಅಂತಸ್ತು ಮತ್ತು ಅವರು ನಿರ್ವಹಿಸಿದ ಪಾತ್ರಗಳಿಗೆ ಅನುಗುಣವಾಗಿ ನಿರ್ಧರಿಸಲ್ಪಟ್ಟಿದೆ. ಇಂತಹ ವರ್ಗಗಳನ್ನು ವರ್ಣಗಳು ಎಂದು ಕರೆಯುತ್ತಾರೆ. ಪ್ರಾಚೀನ ೪ ವೇಧಗಳಲ್ಲಿ ಋಗ್ವೇದದ ಹತ್ತನೇ ಮಂಡಲವಾದ ಪುರುಷ ಸೂಕ್ತದಲ್ಲಿ ವರ್ಣಗಳ ಉಗಮಕ್ಕೆ

ಸಂಬಂಧಿಸಿದ ಮಾಹಿತಿ ಇದೆ. ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದ ಬ್ರಾಹ್ಮಣರು, ಭುಜಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನು ಮತ್ತು ಪಾದಗಳಿಂದ ಶೂದ್ರನು ಜನಿಸಿದವರೆಂದು ತಿಳಿಯಲಾಗಿದೆ. ಧರ್ಮ ಶಾಸ್ತ್ರಗಳ ಪ್ರಕಾರ ೪ ವರ್ಣಗಳು ೧ ಬ್ರಾಹ್ಮಣ, ೨ ಕ್ಷತ್ರೀಯ, ೩ ವೈಶ್ಯ, ೪ ಶೂದ್ರ, ಎಂದು ವಿಂಗಡಿಸಿದ್ದಾರೆ.

**ಬ್ರಾಹ್ಮಣರು**

ಅಣಜಿ ಪರಿಸರದ ಸುತ್ತಮುತ್ತಲ್ಲಿನ ಪ್ರದೇಶದಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಇತರ ವರ್ಗಗಳಿಗಿಂತಲ್ಲೂ ಉನ್ನತವಾದ ಸ್ಥಾನಮಾನವನ್ನು ಪಡೆದು ಕೊಂಡಿದ್ದರು. ಬ್ರಾಹ್ಮಣರು ಸಮಾಜದಲ್ಲಿ ಗೌರವ ಮತ್ತು ಪೂಜನೀಯ ಸ್ಥಾನವನ್ನು ಹೊಂದಿದ್ದರು. ಇವರು ಷಟ್ಕರ್ಮ ನಿರಂತರಾಗಿದ್ದು, ಅಧ್ಯಯನದಲ್ಲಿ ಅಧ್ಯಾಪನ, ದಾನ ಮತ್ತು ಪರಿಗ್ರಹ ಇವೇ ಷಟ್ಕರ್ಮಗಳಾಗಿದ್ದವು. ಇವುಗಳನ್ನು ಕಟ್ಟುನಿಟ್ಟಿನಿಂದ ಅನುಸರಿಸುತ್ತಿದ್ದರು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಕಾಲದಲ್ಲಿ ರಾಜರು ಅಧಿಕಾರಿಗಳು ಶ್ರೀಮಂತರು ಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿರುವುದರ ಬಗ್ಗೆ ಶಾಸನ ತಿಳಿಸುತ್ತದೆ. ಇಲ್ಲೊಂದು ಶಾಸನದಲ್ಲಿ ಹೆಮ್ಮಡಿ ದೇವರಸರ ಕುಮಾರ ವಿಠ್ಠಲ ದೇವರಸರು ಕ್ರಿ.ಶ. ೧೧೮೨ರಲ್ಲಿ ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವನ್ನಾಗಿ ದಾನ ನೀಡಿದ್ದಾರೆ. ಸೋಮೇಶ್ವರ ದೇವಾಲಯ ಶಾಸನದಲ್ಲಿ ಉಲ್ಲೇಖವಿದೆ.

ಬ್ರಾಹ್ಮಣರನ್ನು ತಮ್ಮ ಕೌಶಲ್ಯ ಹಾಗೂ ನೈಪುಣ್ಯತೆಗಳಿಂದ (ಪಾಂಡಿತ್ಯ) ಹಿಂದಿನಿಂದಲೂ ಗುರುಗಳಂತೆ ಪುರೋಹಿತರಂತೆ ಕಾಣಿಸಿಕೊಳ್ಳುತ್ತಿದ್ದರು. ಇವರು ಸಮಾಜ ಮತ್ತು ದೇವಾಲಯಗಳಿಗೆ ತಮ್ಮ ಸೇವೆಯನ್ನು ಮೀಸಲಿರಿಸಿಕೊಂಡು ಜನರಿಂದ ರಾಜನಿಂದ ಸಾಮಂತರಿಂದ ಪಡೆದ ಧಾನಗಳು ಕಾಣಿಕೆಗಳಿಂದಲೇ ಜೀವನ ಸಾಗಿಸುತ್ತದ್ದರು. ಇವರು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಎಷ್ಟು ಪ್ರಬಲವರ್ಗದವರಾಗಿದ್ದರೆಂದು ಇವರಿಗೆ ನೀಡಿರುವ ಅಗ್ರಹಾರಗಳ ದಾನಗಳಿಂದಲೇ ತಿಳಿಯಬಹುದಾಗಿದೆ. ಇವರು ನಿರ್ವಾಹಕರ ಭಾವನೆಯಿಂದ ನಿಷ್ಕಲ್ಮಶ ಮನೋಭಾವದಿಂದ ಲೌಕಿಕ ವಿದ್ಯೆಯಲ್ಲಿ ಸೇರಿರುವ ನ್ಯಾಯ ಸಾಹಿತ್ಯ ಖಗೋಳಶಾಸ್ತ್ರ ವೈಧ್ಯ ಶಾಸ್ತ್ರ ರಾಜನೀತಿ ಕುಶಲತೆ ಮೊದಲಾದವುಗಳನ್ನು ಅಭ್ಯಾಸ ಮಾಡುತ್ತಿದ್ದರು.

**ಕ್ಷತ್ರಿಯರು**

ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರು ನಂತರ ಸ್ಥಾನವನ್ನು ಕ್ಷತ್ರಿಯರು ಹೊಂದಿದ್ದರು. ಇವರು ಬ್ರಹ್ಮನ ಭುಜಗಳಿಂದ ಜನಿಸಿದವರೆಂದು ತಿಳಿಯಲಾಗಿದೆ. ಅಂದಿನ ಸಮಾಜದಲ್ಲಿ ಸರ್ವೋತ್ತಮರೆನಿಸಿದ ಬ್ರಾಹ್ಮಣರು, ಕ್ಷತ್ರಿಯರನ್ನು ಆರ್ಥಿಕವಾಗಿ ಅವಲಂಬಿಸಿದ್ದರೆ, ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣಗಳಿಗಾಗಿ ಬ್ರಾಹ್ಮಣರುನ್ನು ಅವಲಂಬಿಸಿದ್ದರು. ಇವರು ಧೈರ್ಯ ಸಾಹಸ ತೇಜಸ್ಸು ಗುಣಗಳಿಗೆ ಪ್ರಸಿದ್ದಿಯಾಗಿದ್ದರು. ಭುಜ ಬಲದ ಪರಾಕ್ರಮಗಳಿಗೆ ಸುಪ್ರಸಿದ್ದರಾದವರು. ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಮಾಜವನ್ನು ರಕ್ಷಿಸಿ ಎಲ್ಲೆನ್ನು ವಿಸ್ತರಿಸಿಕೊಳ್ಳುತ್ತಾ ತಮ್ಮ

ಪ್ರಾಣವನ್ನು ಪಣಕ್ಕಿಟ್ಟು ಹೋರಾಟ ಮಾಡುವುದು 'ಸತ್ತರೆ ಸ್ವರ್ಗ ಗೆದ್ದರೆ ರಾಜ್ಯ' ಎಂಬ ವೀರ ಉಕ್ತಿಯಂತೆ ನಡೆಯುವವರೇ ಕ್ಷತ್ರಿಯರಾಗಿದ್ದರು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದು. ಅಶಕ್ತರಿಗೆ ಆಶ್ರಯವನ್ನು ನೀಡುವುದು ಕಷ್ಟ ಸಹಿಷ್ಣತೆಗಳಲ್ಲಿ ಭಾಗಿಯಾಗಿರುವುದು. ಕ್ಷತ್ರಿಯರ ಮಾನವೀಯ ಅಂಶಗಳಾಗಿದ್ದವು. ಸಾಮ್ರಾಜ್ಯ ನಿರ್ಮಾಣ ಹಾಗೂ ಅದರ ರಕ್ಷಣಾ ವ್ಯವಸ್ಥೆಯ ಹೊಣೆ ಹೊತ್ತ ಈ ವರ್ಗ ಯುದ್ಧವನ್ನು ರಾಜ್ಯಾಡಳಿತದ ಒಂದು ಅವಿಭಾಜ್ಯ ಅಂಗವಾಗಿ ಮಾಡಿಕೊಂಡಿರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕ್ಷತ್ರೀಯ ಎಂಬುದು ಒಂದು ಆಳುವ ವರ್ಗವಾಗಿತ್ತು.[೨]

### ವೈಶ್ಯರು

ವೈಶ್ಯರು ಸಮಾಜದ ವರ್ಣ ವ್ಯವಸ್ಥೆಯಲ್ಲಿ ಮೂರನೇ ಸ್ಥಾನ ಪಡೆದಿದ್ದಾರೆ. ಇವರು ಬ್ರಹ್ಮನ ತೊಡೆಗಳಿಂದ ಜನಿಸಿದವರು ಎಂದು ಋಗ್ವೇದ ತಿಳಿಸುತ್ತದೆ. ವೈಶ್ಯರು ವರ್ತಕರು ಅಥವಾ ವ್ಯಾಪಾರಿಗಳಾಗಿದ್ದಕೊಂಡು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸಿದ್ದರು. ವ್ಯಾಪಾರವೇ ಇವರ ಪ್ರಮುಖ ವೃತ್ತಿಯಾಗಿದ್ದು ಇವರನ್ನು ಶೆಟ್ಟಿಗಳು ಎಂದು ಕರೆಯುತ್ತಾರೆ.

ಇವರು ವರ್ತಕ ವರ್ಗದವರಾಗಿದ್ದು ಕೂಡ ಮನುಸ್ಮೃತಿಯಲ್ಲಿ ವೈಶ್ಯರು ಕರ್ತವ್ಯಗಳು ಎಂದರೆ ಪಶುಪಾಲನೆ, ದಾನಕೊಡುವುದು ಮತ್ತು ಕೃಷಿಯಲ್ಲಿಯೂ ಸಹ ತೊಡಗುವುದು ವೈಶ್ಯರು ಬುದ್ಧಿವಂತಿಕೆಗೆ ಹೆಸರು ವಾಸಿಯಾಗಿದ್ದು ವೈಜ್ಞಾನಿಕತೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ. ಆಡಳಿತದಲ್ಲಿ ಗೌಡ ಪಟೇಲ ಶಾನುಭೋಗ ಎಂಬ ಹೆಸರಿನಲ್ಲಿ ಸೇವೆ ಸಲ್ಲಿಸುತ್ತಿದ್ದರು. ಎಂಬುದರ ಬಗ್ಗೆ ಕೆಲವೊಂದು ನಿದರ್ಶನಗಳಿವೆ ಆದರೆ ಪ್ರಸ್ತುತ ಪರಿಸರದಲ್ಲಿ ವ್ಯಾಪಾರಿಗಳು ತಮ್ಮನ್ನು ವೈಶ್ಯರೆಂದು ಹೇಳಿಕೊಂಡಿದ್ದಾರೆ.

ಉದಾಹರಣೆಗೆ ಮಲ್ಲಶೆಟ್ಟಿಹಳ್ಳಿ ಎಂಬ ಗ್ರಾಮದಲ್ಲಿ ಶೆಟ್ಟಿಗಳು ಹೆಚ್ಚಿನದ್ದಾಗಿ ಕಾಣಬಹುದು ಆನುಗೋಡು ಹೋಬಳಿಗೆ ಸೇರಿದ ಗ್ರಾಮ ಪಾಳೆಗಾರರ ಕಾಲದಲ್ಲಿ ಆಲೂರು ಮಜಿರೆಗೆ ಸೇರಿದ್ದು ಬಿಳಿಚೋಡು ಸೀಮೆಯ ಪಾರುಪತ್ಯೆಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಚಿತ್ರದುರ್ಗದ ಚಿಕ್ಕಣನಾಯಕರ ಕಾಲದಲ್ಲಿ ಮಲ್ಲಶೆಟ್ಟಿ ಎನ್ನುವನು ಬಿಳಿಚೋಡು ಸೀಮೆಯ ಪಾರುಪತ್ಯೆಗಾರನಾಗಿದ್ದ ಈತನ ಸ್ತುತ್ಯಕಾರ್ಯಗಳಿಗಾಗಿ ನಾಯಕರು ಗ್ರಾಮದ ತೆರಿಗೆಯನ್ನು ಮನ್ನಾ ಮಾಡಿದ್ದರು. ಮಲ್ಲಿಶೆಟ್ಟಿಯ ಹೆಸರಿನಲ್ಲಿಯೇ ಇರುವ ಊರಿನ ಬಸವೇಶ್ವರ ದೇವಾಲಯದ ಬಳಿ ಶಾಸನವಿದೆ. ಈ ಶಾಸನದ ಕಾಲ . ಕ್ರಿ.ಶ.೧೫೨೮ ಈ ಗ್ರಾಮದ ಹನುಮಂತರ ದೇವರ ಗುಡಿಯ ಪೂರ್ವದಿಕ್ಕಿನಲ್ಲಿಯೂ ಹಾಳಾಗಿರುವ ಶಾಸನವಿದೆ. ಇದೊಂದು ದಾನ ಶಾಸನವಿರಬೇಕು ಎಂದು ಹೇಳಬಹುದು ಇಂತಹ ಅಣಜಿ ಪರಿಸರದ ಸುತ್ತಮುತ್ತಿನಲ್ಲಿ ವೈಶ್ಯರು ವಾಸಿಸುತ್ತಿರುವುದನ್ನು ಗ್ರಾಮದಲ್ಲಿ ವಿವರಿಸಲಾಗಿದೆ.[೩]

### ಶೂದ್ರರು

ಸಮಾಜದಲ್ಲಿ ಕಂಡು ಬರುವ ನಾಲ್ಕನೇ ವರ್ಗವೇ ಶೂದ್ರರು ಇದು ಬಹುದೊಡ್ಡದಾದ

ಗುಂಪಾಗಿತ್ತು. ವರ್ಣಗಳಲ್ಲೇ ಶ್ರೇಷ್ಠರೆಂದು ಗುರುತಿಸಿಕೊಂಡಿದ ಬ್ರಾಹ್ಮಣವರ್ಗ ಸಮಾಜದ ಆಳ್ವಿಕೆಯ ಸೂತ್ರವನ್ನೆ ಕೈಯಲ್ಲಿ ಹಿಡಿದ ಕ್ಷತ್ರಿಯರೆಂದು ಕರೆದುಕೊಳ್ಳುತ್ತಿದ್ದಂತಹ ಮತ್ತು ವೈಶ್ಯರೆಂದು ಕರೆದುಕೊಳ್ಳುತ್ತಿದ್ದ ವ್ಯಾಪಾರ ವರ್ಗಗಳನ್ನು ಬಿಟ್ಟರೆ ಉಳಿದ ಎಲ್ಲಾ ಜಾತಿಗಳನ್ನು ಶೂದ್ರರು ಎಂದು ಕರೆಯುತ್ತಾರೆ. ಉದಾಹರಣೆಗೆ ಅಕ್ಕಸಾಲಿಗರು ಮಡಿವಾಳರು ಕುಂಬಾರರು ಕಮ್ಮಾರರು, ಬಡಿಗಿಗಳು, ಭಜಂತ್ರಿ, ನೇಕಾರ ಮುಂತಾದವರನ್ನು ಶೂದ್ರರು ಎನ್ನುತ್ತಿದ್ದರು. ಶೂದ್ರರು ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದು ಉಳಿದ ವರ್ಣದವರು ಪಡೆಯುತ್ತಿದ್ದ ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದರಲ್ಲದೆ ಮೇಲಿನ ಮೂರು ವರ್ಗದವರು ಮಾಡದೇ ಬಿಟ್ಟು ಕೆಲಸಗಳನ್ನು ಶೂದ್ರರು ನಿರ್ವಹಿಸುತ್ತಿದ್ದರು.

ಇವರು ಇನ್ನೊಬ್ಬರ ಆಶ್ರಯದಲ್ಲೇ ಇದ್ದುದರಿಂದ ಸ್ವತಂತ್ರವಾದ ಆಸ್ತಿ ಅಂತಸ್ತು ಇಲ್ಲದೆ ಬಡವರಾಗಿದ್ದರು. ಆದರೂ ಕೂಡ ತಮ್ಮ ಕೆಲಸವನ್ನು ಕೀಳೆಂದು ಪರಿಗಣಿಸಿರಲಿಲ್ಲ. ಇವರಿಗೆ ವೇದಗಳನ್ನು ಓದುವುದಕ್ಕಾಗಲೀ ಯಜ್ಞಯಾಗಗಳಲ್ಲಿ ಪಾಲ್ಗೊಳ್ಳುವುದಕ್ಕಾಗಲೀ ಅನುಮತಿ ಇರಲಿಲ್ಲ. ಹೀಗೆ ಮೂರು ವರ್ಗದವರ ಅಂದರೆ ಹೆಚ್ಚ ವರ್ಗದವರ ಸೇವೆಯನ್ನು ಮಾಡಿ ತಮ್ಮ ಮುಕ್ತಿ ಸಾಧಿಸಿ ಅಂತರಂಗ ಬಹಿರಂಗಗಳ ಶುದ್ಧಿ ಶೂದ್ರನನ್ನು ದೇವರಿಗೂ ಬ್ರಾಹ್ಮಣರಿಗೂ ಸಲ್ಲಿಸಬೇಕಾದ ಕರ್ತವ್ಯಗಳನ್ನು ನೆರವೇರಿಸಿ ತಮ್ಮ ತಪಶ್ಚರ್ಯ ಜೀವನವನ್ನು ಮಾಡಿ ಅಥವಾ ನಡೆಸಲು ಅರ್ಹನನ್ನಾಗಿ ಮಾಡುತ್ತದೆಯೆಂದು ಜೈನ ಕೃತಿಕಾರನಾದ ಸೋಮದೇವ ತನ್ನ ನೀತಿವಾಕ್ಯದಲ್ಲಿ ತಿಳಿಸಿದ್ದಾನೆ.[೪]

ಈಗ ವರ್ಣವ್ಯವಸ್ಥೆಯಲ್ಲಿ ಶೂದ್ರರನ್ನು ಕೀಳಾಗಿ ಕಾಣುವ, ಕೀಳಾಗಿ ನಡೆಸಿಕೊಳ್ಳುವುದರಲ್ಲಿ ಹಿಂದಿನ ಕಠಿಣ್ಯತೆ ಇಲ್ಲದಿದ್ದರೂ ಕೂಡ ಸಂಪೂರ್ಣವಾಗಿ ನಾಶವಾಗಿ ಎಲ್ಲರೂ ಒಂದೇ ಎಂಬ ದೃಷ್ಠಿಯಲ್ಲಿ ಸಮಾಜವು ಬೆಳವಣಿಗೆಯಾಗಿದೆ ಎಂದೂ ಹೇಳಲು ಸಾಧ್ಯವಿಲ್ಲ ಏಕೆಂದರೆ ಕೆಲವರು ಕಡೆ ಶೂದ್ರರನ್ನು ಈಗಲೂ ಸಹ ಅಸ್ಪೃಶ್ಯರೆಂದೇ ಪರಿಗಣಿಸುವುದನ್ನು ಕಾಣುತ್ತೇವೆ. ಹೀಗೆ ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಸ್ಥಿತಿಗತಿಗಳನ್ನು ಕರ್ತವ್ಯಗಳನ್ನು ಕಾಣಬಹದು. ಈ ನಾಲ್ಕು ವರ್ಣಗಳ ಮೂಲ ಏನೇ ಇದ್ದರೂ ಅಂದಿನ ಸಮಾಜದಲ್ಲಿಯೂ ಕಂಡು ಬರುವ ಸಮಾನತೆಯನ್ನು ತಿಳಿಯಬಹುದಾಗಿದೆ.

**ಜಾತಿವ್ಯವಸ್ಥೆ**

ಪ್ರಾಚೀನ ಸಾಮಾಜಿಕ ವ್ಯವಸ್ಥೆಯ ಸಂದರ್ಭದಲ್ಲಿ ವ್ಯಕ್ತಿಗಳನ್ನು ಅವರು ಕೈಗೊಳ್ಳುವ ಉದ್ಯೋಗ ಅಥವಾ ವ್ಯಕ್ತಿಗಳ ಹಿನ್ನೆಲೆಯಲ್ಲಿ ಗುರುತಿಸಲಾಗುತ್ತಿತ್ತು. ಹಿಂದೆ ಹುಟ್ಟಿಕೊಂಡ ವರ್ಣವ್ಯವಸ್ಥೆ ಅಥವಾ ಜಾತಿ ವ್ಯವಸ್ಥೆ ಮೊದಲೇ ಎನ್ನುವುದಕ್ಕೆ ಅನೇಕ ಜಿಜ್ಞಾಸೆಗಳಿವೆ. ವೈದಿಕ ಸಾಹಿತ್ಯದಲ್ಲಿ ವರ್ಣ ವ್ಯವಸ್ಥೆಯು ಉಗಮದ ಬಗ್ಗೆ ವಿವರವಿದೆ. ಋಗ್ವೇದದ ಪುರುಷ ಸೂಕ್ತದಲ್ಲಿ ಹೇಳಿರುವಂತೆ ಪುರುಷನ ತಲೆಯಿಂದ ಬ್ರಾಹ್ಮಣ, ಭುಜಗಳಿಂದ ಕ್ಷತ್ರಿಯ ತೊಡೆಗಳಿಂದ, ವೈಶ್ಯ ಪಾದಗಳಿಂದ, ಶೂದ್ರರು ಜನಿಸಿದರೆಂದಿದೆ. ಇದು ಸಮಾಜದ ಏಳಿಗೆಗಾಗಿ ಆದಂತಹ ವಿಂಗಡಣೆಯಾಗಿದೆ.

ಹಿಂದೂ ಸಂಸ್ಕೃತಿಯಲ್ಲಿ ಅನೇಕ ಕಸುಬುಗಳನ್ನು ಮಾಡುತ್ತಿದ್ದ ಜನವರ್ಗಗಳಿದ್ದವು ಅವು ಜಾತಿ ಆಧಾರದ ಮೇಲೆ ನಿಂತಿದ್ದವೆಂಬುದಕ್ಕೆ ಯಾವುದೇ ಆಧಾರಗಳಿಲ್ಲ. ರಾಜಮನೆತನಗಳು ತಲೆಯೆತ್ತಿದಂತೆ ಅವುಗಳ ವಂಶ ಪರಂಪರೆಯ ಆಡಳಿತ ಆರಂಭವಾಗಯಿತು. ಅದರೊಂದಿಗೆ ವಿವಿಧ ವೃತ್ತಿಗಳು ಕುಲಕಸುಬುಗಳಿಗೆ ಮಾರ್ಪಾಡುಗೊಂಡವು. ಈ ಕುಲಗಳು ಉಪ ಪಂಗಡಗಳಾಗಿ ಮೇಲು-ಕೀಳು ಎಂಬ ಭಾವನೆಗೆ ಕಾರಣವಾಯಿತು. ಆಗ ವರ್ಣ ವ್ಯವಸ್ಥೆ ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತಿದೆ. ಈ ಪರಿಸರದ ಶಾಸನಗಳು ಇಲ್ಲಿಯ ಅನೇಕ ವರ್ಗ ವೃತ್ತಿಯ ಜನರನ್ನು ಮತ್ತು ಸ್ಥಾನಮಾನಗಳನ್ನು ಉಲ್ಲೇಖಿಸುತ್ತವೆ.[೫]

ಈ ಪರಿಸರದ ಸಾಮಾಜಿಕ ವ್ಯವಸ್ಥೆಯನ್ನು ಆಳುವ ವರ್ಗ ಮತ್ತು ಶ್ರಮಿಕ ವರ್ಗವೆಂದು ವಿಂಗಡಿಸಬಹುದು. ಪ್ರಭು ವರ್ಗದಲ್ಲಿ ಪುರೋಹಿತ ರಾಜ ಹಾಗೂ ವಿವಿಧ ಅಧಿಕಾರಿಗಳನ್ನೊಳಗೊಂಡ ರಾಜಕೀಯ ಸಮೂಹ ಶ್ರಮಿಕ ವರ್ಗ ಅನೇಕ ವೃತ್ತಿಗಳನ್ನೊಳಗೊಂಡ ಜನ ಸಾಮಾನ್ಯರನ್ನು ಪ್ರತಿನಿಧಿಸುತ್ತವೆ. ವ್ಯಾಪಾರವರ್ಗ ನಡುವೆ ಸಮತೋಲನವನ್ನು ಕಾಯ್ದುಕೊಂಡು ಬಂದಿದೆ. ಅಂದಿನ ಕಾಲದ ಸಾಮಾಜಿಕ ಈ ಸಂಘಟನೆಗಳಲ್ಲಿ ಮಹಾಜನರು ಸ್ಥಾನ ಚಾರ್ಯರು ರಾಜಗುರುಗಳು ಪ್ರಮುಖರಾಗಿದ್ದರು. ಸಮಾಜದಲ್ಲಿ ಬ್ರಾಹ್ಮಣರು ಉನ್ನತವಾದ ಗೌರವ ಸ್ಥಾನಮಾನವನ್ನು ಹೊಂದಿದ್ದರು.

ಅವರಿಗೆ ರಾಜ ಮಹಾರಾಜರು ಆಡಳಿತದಲ್ಲಿ ಉನ್ನತ ಅಧಿಕಾರ ಹಾಗೂ ದಾನ ದತ್ತಿಗಳನ್ನು ನೀಡುತ್ತಿದ್ದರು. ಇಂತಹ ವಿವರಗಳು ಅಂದಿನ ಕಾಲದ ಶಾಸನಗಳಿಂದ ನಮಗೆ ತಿಳಿದುಬುರತ್ತದೆ. ಆದರೆ ಹನ್ನೆರಡನೆಯ ಶತಮಾನದಲ್ಲಿ ಆರಂಭಗೊಂಡ ವೀರಶೈವ ಅಂದೋಲವು ವೈದಿಕ ಪ್ರಭುತ್ವವನ್ನು ಮತ್ತು ಜಾತಿ ವ್ಯವಸ್ಥೆಯು ಶ್ರೇಣಿ ವರ್ಗ ವಿರೋದಿಸಿತು. ಆದರೆ ಇವು ಯಾವವು ಜಾತಿ ಪದ್ದತಿಯನ್ನು ಶಾಶ್ವತವಾಗಿ ಹೋಗಲಾಡಿಸುವಲ್ಲಿ ಯಶಸ್ವಿಯಾಗಲಿಲ್ಲ. ವೃತ್ತಿ ಆಧಾರದ ಮೇಲೆ ರೂಪಗೊಂಡಿದ್ದ ಸಮಾಜ ಕ್ರಮೇಣ ವರ್ಣ ವ್ಯವಸ್ಥೆಗೆ ಪರಿವರ್ತನೆಗೊಂಡು ನಂತರ ಜಾತಿ ವ್ಯವಸ್ಥೆಗೆ ಪರಿವರ್ತನೆಗೊಂಡಿರುವುದು ಈಗಾಗಲೇ ಸಾಕಷ್ಟು ಚರ್ಚೆಗೆ ಒಳಪಟ್ಟಿರುವಂತದ್ದು. ವರ್ಣ ವ್ಯವಸ್ಥೆಗಿಂತ ಮೊದಲು ಜಾತಿಗಳು ಹುಟ್ಟಿಕೊಂಡಿದ್ದವು ಎನ್ನುವ ವಾದವು ಇದೆ. ವರ್ಣ ಮತ್ತು ಜಾತಿ ಎನ್ನುವ ಪದಗಳ ಬಗ್ಗೆ ಎಷ್ಟೇ ವ್ಯಾಖ್ಯಾನಗಳು ಬಂದರೂ ಅವುಗಳ ಸಂದರ್ಭದಲ್ಲಿನ ಗೊಂದಲವಂತೂ ನಿವಾರಣೆಯಾಗಿಲ್ಲ ಸಮಾನ ಧಾರ್ಮಿಕ ಆಚರಣೆಗಳು ಜಾತಿಗಳನ್ನು ಒಟ್ಟುಗೂಡಿಸಿ ಅನುಕ್ರಮವಾಗಿ ಶ್ರೇಣಿಕರಿಸುವುದು ವರ್ಣ ವ್ಯವಸ್ಥೆ ಆದರೆ ಇದು ವಾಸ್ತವ ಸಾಮಾಜಿಕ ಚಿತ್ರಣವನ್ನು ನೀಡುವುದಿಲ್ಲ. ಜಾತಿ ವ್ಯವಸ್ಥೆಯಲ್ಲಿ ಬರುವ ಅನೇಕ ಜಾತಿಗಳು ಇದರಲ್ಲಿ ತಮ್ಮ ನೆಲೆಯನ್ನು ಕಳೆದು ಕೊಂಡುಬಿಡುತ್ತದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬುಡಕಟ್ಟುಗಳು ಜಾತಿ ಪದವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥವನ್ನು ಕೊಡುತ್ತಿರುತ್ತವೆ. ಇದರಲ್ಲಿ ನೀತಿ ನಿಯಮಗಳು ಮೊದಲೇ ರೂಪಗೊಂಡಿರುತ್ತವೆ. ವ್ಯಕ್ತಿಯ ಜೀವನದ ಪ್ರತಿಯೊಂದು

ಹಂತವನ್ನು ಅದು ನಿರ್ಧರಿಸುತ್ತಿರುತ್ತದೆ. ಮತ್ತು ಮಾನವ ಬದುಕಿದ್ದಾಗ ಮಾತ್ರವಲ್ಲದೆ ಸತ್ತ ಮೇಲೂ ಅವನಿಗೆ ಇರಬೇಕಾದ ಜಾಗವನ್ನು ಕೂಡ ಜಾತಿಯು ನಿರ್ಧರಿಸುತ್ತದೆ. ಈ ವ್ಯವಸ್ಥೆಯಲ್ಲಿ ಆದಿವಾಸಿ ಬುಡಕಟ್ಟುಗಳು ಹಾಗೂ ಅಲೆಮಾರಿಗಳು ಮನುಷ್ಯ ವರ್ಗಕ್ಕೆ ಸೇರಿದವರೇ ಅಲ್ಲ ಎನ್ನುವ ತೀರ್ಮಾನವಿದೆ. ಅವರು ಸವಲತ್ತುಗಳನ್ನು ಪಡೆಯುವುದಾಗಲಿ ವೃತ್ತಿಗಳನ್ನು ಬದಲಾಯಿಸುವದಾಗಲಿ ಸಾಧ್ಯವಿರಲಿಲ್ಲ ಈ ವ್ಯವಸ್ಥೆಯಲ್ಲಿ ಮೇಲ್ವರ್ಗ ಮೇಲ್ವರ್ಗವಾಗಿಯೇ ಇತ್ತು ಹಾಗೂ ಕೆಳವರ್ಗ ಕೆಳವರ್ಗವಾಗಿಯೆ ಇತ್ತು ಸಾಮಾಜಿಕ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ವೇದಗಳ ಮೂಲಕ ಕಾನೂನಿನ ಚೌಕಟ್ಟನ್ನು ನಿರ್ಮಿಸಲಾಯಿತು. ಇದಕ್ಕೆ ಮೂಲಕಾರಣವೆಂದರೆ ಬ್ರಾಹ್ಮಣ ಮತ್ತು ಕ್ಷತ್ರಿಯರು ಅಲ್ಪಸಂಖ್ಯಾತರಾಗಿರುವುದೇ ಆಗಿತ್ತು. ಬಹುಸಂಖ್ಯಾತರಾಗಿದ್ದ ವೈಶ್ಯ ಹಾಗೂ ಶೂದ್ರರನ್ನು ಹತೋಟಿಯಲ್ಲಿಡಲು ಈ ಚೌಕಟ್ಟು ಅನಿವಾರ್ಯವಾಗಿತ್ತು.

ಜಾತಿಗಳಲ್ಲೆಲ್ಲ ಬ್ರಾಹ್ಮಣ ಶ್ರೇಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. ಅಂದಿನ ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಈ ಕುರಿತು ವಿವರವಾದ ಮಾಹಿತಿಗಳನ್ನು ನೀಡುತ್ತವೆ. ಅವುಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖಗಳಿದ್ದು ಮೊದಲನೆಯದು ಬ್ರಾಹ್ಮಣ ಕೊನೆಯ ಹೊಲೆಯ ಎನ್ನುವ ವಿವರಗಳಿವೆ. ಇದು ಅಂದಿನ ಶ್ರೇಣಿಕೃತ ಸಮಾಜ ವ್ಯವಸ್ಥೆಯ ಯಥಾವತ್ತಾದ ಚಿತ್ರಣವಾಗಿ ಕಂಡುಬರುತ್ತದೆ. ಜಾತಿಗಳು ಹದಿನೆಂಟು ಎಂಬುದು ಒಂದು ಅಂಗೀಕೃತವಾದ ಮತಾಗಿದ್ದಿರಬಹುದೆಂದು ತೋರುತ್ತದೆ. ಏಕೆಂದರೆ ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದವು ಎಂಬುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ಗೊತ್ತಗುತ್ತದೆ.[೬]

ಪ್ರಸ್ತುತ ವಚನಕಾರರು ಹದಿನೆಂಟು ಜಾತಿಗಳು ಪಟ್ಟಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನು ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಕೊಟ್ಟಿದ್ದಾರೆ. ಅವುಗಳೆಂದರೆ ಬ್ರಾಹ್ಮಣ (ಶಿಖ) ಕ್ಷತ್ರಿಯ (ನಯನ) ಬಣಜಿಗ (ನಾಸಿಕ) ಒಕ್ಕಲಿಗ (ತುಟಿ) ಗೊಲ್ಲ (ಕರ್ಣ) ಕುಂಬಾರ (ಕೊರಳು) ಪಂಚಾಳ (ಬಾಹು) ಉಪ್ಪಾರ (ಅಂಗೈ) ನಾಯಿಂದ (ಉಗುರು) ಡೊಂಬ (ಒಡಲು) ಅಗಸ (ಬೆನ್ನು) ಕಬ್ಬಿಲ (ಪೃಷ್ಠ) ಹೊಲೆಯ (ಒಳದೊಡೆ) ಈಡಿಗ (ಮಣಿಕಾಲು) ಸಮಗಾರ (ಕೆಣಗಾಲು) ಮಚ್ಚಿಗ (ಮೇಗಾಲು) ಮತ್ತು ಶುದ್ಧ ಮಾದಿಗ (ಅಂಗಾಲು), ಅಂಬಿಗರ ಚೌಡಯ್ಯನು ಇದೇ ರೀತಿ ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಹದಿನೆಂಟು ಜಾತಿಗಳ ಉಲ್ಲೇಖ ಮಾಡಿದ್ದಾನೆ. ಈ ಉಲ್ಲೇಖಗಳು ಮನುಷ್ಯನ ದೇಹವನ್ನು ಆಧಾರವಾನ್ನಾಗಿಟ್ಟುಕೊಂಡು ಸಮಾಜದ ವಿಭಿನ್ನ ಸ್ತರಗಳನ್ನು ವಿವರಿಸುವ ಪ್ರಯತ್ನವಾಗಿ ಕಂಡು ಬರುತ್ತದೆ.

ಶ್ರಮ ಜೀವಿಗಳು ತಮ್ಮ ವಂಶಪಾರಂಪರ್ಯವಾಗಿ ಬಂದ ವೃತ್ತಿ ವೈಶಿಷ್ಟವನ್ನು ಉಳಿಸಿಕೊಳ್ಳುವ ಭಿನ್ನತೆಯೂ ಜಾತಿ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿರಬಹುದು. ಈ ಶ್ರಮಿಕ ವರ್ಗದವರು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಿಗೆ ಕೊಟ್ಟ ಕೊಡುಗೆ ಅಪಾರವಾದುದು. ಉತ್ಪಾದನೆ ವಿತರಣೆ

ಮಾರಟದಲ್ಲಿ ಅವರು ತೊಡಗಿದ್ದರು. ಈ ಪ್ರದೇಶದ ಶಾಸನಗಳಲ್ಲಿ ಪರೋಕ್ಷವಾಗಿ ಶ್ರಮಿಕವರ್ಗ ಮತ್ತು ಒಕ್ಕಲಿಗಳನ್ನು ಹೆಸರಿಸುತ್ತದೆ. ಹಾಗೂ ಎಲ್ಲಾ ಜಾತಿಗಳಿಗಿಂತ ಕೆಳಗಿನ ಜಾತಿ ಹೊಲೆಯ ಮತ್ತು ಮಾದಿಗರು ಅವರು ವಾಸಿಸುತ್ತಿದ್ದ ಸ್ಥಳವನ್ನು ಹೊಲಗೇರಿ ಎಂದು ಕರೆಯುತ್ತಿದ್ದರು. ಈ ಪ್ರದೇಶದಲ್ಲಿ ಮಾದಿಗರನ್ನು ಕೆಳ ಸ್ಥಾನದವರು ತಮ್ಮ ಸಾಮಾರ್ಥ್ಯದಿಂದ ಉನ್ನತ ಸ್ಥಾನವನ್ನು ಪಡೆದಿದ್ದನ್ನೂ ಸಹ ನಾವು ಕಾಣಬಹುದು.

**ಕುಟುಂಬ ವ್ಯವಸ್ಥೆ**

ಯಾವುದೇ ಒಂದು ಪ್ರದೇಶದಲ್ಲಿನ ಸಮಾಜ ಸ್ಥಿತಿಗತಿ ವ್ಯವಸ್ಥೆಯನ್ನು ತಿಳಿಯಬೇಕಾದರೆ ಅಲ್ಲಿನ ಕುಟುಂಬ ವ್ಯವಸ್ಥೆಯನ್ನು ತಿಳಿಯಬೇಕಾಗುತ್ತದೆ. ಆದರೆ ಇಂತಹ ಕುಟುಂಬ ವ್ಯವಸ್ಥೆಯಲ್ಲಿ ತಂದೆ-ತಾಯಿ, ಸಹೋದರರು, ಅವರ ಪತ್ನಿಯರು ಮಕ್ಕಳು ಸೊಸೆಯರು ಮೊಮ್ಮಕ್ಕಳು ಅಜ್ಜ-ಅಜ್ಜಿ ಹೀಗೆ ಮೂರು ಇಲ್ಲವೆ ನಾಲ್ಕು ತಲೆಮಾರಿನ ಜನರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು ಮತ್ತು ಭಾರತ ದೇಶದಲ್ಲಿ ಅತೀ ಹೆಚ್ಚಿನಾದಾಗಿ ಅವಿಭಕ್ತ ಕುಟುಂಬಗಳು ಕಾಣಬಹುದು. ಪುರುಷರು ಕುಟುಂಬದ ಪ್ರಧಾನ ಪಾತ್ರವಹಿಸುತ್ತಿದ್ದನು ಕುಟುಂಬದ ಸರ್ವ ಸದಸ್ಯರನ್ನು ಸಾಕಿ-ಸಲುಗುವುದು ಯಾಜಮಾನನ ಕರ್ತವ್ಯವಾಗಿತ್ತು. ಅಂದಿನ ಕಾಲದಲ್ಲಿ ಸಮಾಜದಲ್ಲಿ ತಂದೆಯ ನಂತರ ಕುಟುಂಬದ ಜವಾಬ್ದಾರಿಯು ಹಿರಿಯ ಮಗನಿಗೆ ವರ್ಗಾಯಿಸಲ್ಪಡುತ್ತಿತ್ತು. ಕುಟುಂಬದಲ್ಲಿ ಹಿರಿಯ ಮಗನಾದವನು ಕುಟುಂಬದ ಜನರಯೋಗಕ್ಷೇಮ ನೋಡಿಕೊಳ್ಳುವುದರ ಜೊತೆಗೆ ಕುಟುಂಬದಲ್ಲಿ ನಿರ್ಣಯವನ್ನು ಅಥವಾ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಅವರಿಗೆ ಸೇರಿತ್ತು.[೭]

ಪ್ರಸ್ತುತ ಅಣಜಿ ಪರಿಸರದ ಸುತ್ತಮುತ್ತಿನಲ್ಲಿ ಅವಿಭಕ್ತ ಕುಟುಂಬಗಳು ಕಂಡು ಬಂದರೂ ಅವುಗಳು ಹೆಚ್ಚಿನ ಸಂಖ್ಯೆಯಲ್ಲಿಲ್ಲಾ ಯಾಕೇಂದರೆ ಇತ್ತೀಚಿನ ನಗರೀಕರಣದಿಂದ ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿದ್ದು. ಹೆಚ್ಚಾಗಿ ವಿಭಕ್ತ ಕುಟುಂಬಗಳೇ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಕಂಡುಬರುತ್ತವೆ. ಒಂದು ಮನೆಯಲ್ಲಿ ಗಂಡ-ಹೆಂಡತಿ ಮತ್ತು ಮಕ್ಕಳು ಸೇರಿ ೪-೫ಜನ ಸದಸ್ಯರು ಇರುತ್ತಾರೆ ಆದರೆ ಹಿಂದಿನ ಅವಿಭಕ್ತ ಕುಟುಂಬಗಳಲ್ಲಿ ೧೫-೨೦ ಕ್ಕೂ ಹೆಚ್ಚು ಜನ ಸದಸ್ಯರನ್ನು ಕುಟುಂಬದಲ್ಲಿ ತುಂಬಿ ತುಳುಕುತ್ತಿತ್ತು. ಆದರೆ ಇತ್ತೇಚೆಗೆ ಅವಿಭಕ್ತ ಕುಟುಂಬಗಳ ಕಣ್ಮರೆಯಾಗುತ್ತಿದ್ದವೆ.

**ವಿವಾಹ ವ್ಯವಸ್ಥೆ**

ವಿವಾಹವು ಎಲ್ಲಾ ಸಂಸ್ಕಾರಗಳಿಗೂ ಮೂಲವೆಂದು ಹೇಳುತ್ತವೆ. ಆಚಾರ ವಿಚಾರ ನಿಯಮಗಳು ಯಜ್ಞಯಾಗಾದಿಗಳು ಗೃಹಸ್ಥನ ತಳಹದಿಯಾಗಿ ವಿವಾಹವು ಸಾರ್ವತ್ರಿಕವಾಗಿದೆ. ಗಂಡು-ಹೆಣ್ಣು ಕೂಡಿ ಕುಟುಂಬವನ್ನು ಸ್ಥಾಪಿಸಿ ಮಕ್ಕಳನ್ನು ಪಡೆಯಲು ಅನುಮತಿ ಹೊಂದಿರುವ ಸಾಮಾಜಿಕ

ಸಂಸ್ಥೆಯಾಗಿದೆ. ವೈದಿಕ ಕಾಲದಲ್ಲಿ ಹುಡುಗಿ ತಾರುಣ್ಯವಸ್ಥೆಗೆ ಬಂದ ಮೇಲೆಯೇ ವಿವಾಹ ಮಾಡುವ ರೂಡಿಯಿತ್ತು. ಕಾಲ ಕ್ರಮೇಣ ಈ ವ್ಯವಸ್ಥೆಗೆ ವಿರುದ್ದವಾಗಿ ಗೃಹ ಸೂತ್ರಗಳು ಹುಟ್ಟಿಕೊಂಡವು.

ತಂದೆಯಾದವನು ತನ್ನ ಮಗಳ ಮದುವೆಯನ್ನು ಬಾಲ್ಯವಸ್ಥೆಯಲ್ಲಿರುವಾಗಲೇ ಮಾಡಬೇಕೆಂದು ಸೂಚಿಸುತ್ತಾನೆ. ಅಲ್ಬೆರೂನಿ ಪ್ರಕಾರ ಹಿಂದೂಗಳು ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿಕೊಳ್ಳುತ್ತಿದ್ದುದ್ದನ್ನು ಹೇಳಿದ್ದಾನೆ. ಈ ಪ್ರದೇಶದಲ್ಲಿ ಉನ್ನತಸ್ಥಾನ ಅಧಿಕಾರಿ ವರ್ಗದಲ್ಲಿ ಬಹುಪತ್ನಿತ್ವ ವ್ಯವಸ್ಥೆ ಇತ್ತು. ಅರಸ ಮಹಾಮಂಡಳೀಶ್ವರ ಮಂತ್ರಿ ದಂಡನಾಯಕರಿಂದ ಊರನ ಗೌಡನವರೆಗೂ ಬಹುಪತ್ನಿತ್ವ ವಿವಾಹವಾಗಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಚಿತ್ರದುರ್ಗದ ದೊರೆಯಾದ ಬಿಚ್ಚುಗತ್ತಿ ಭರಮಣ್ಣ ನಾಯಕನಿಗೂ ಕೂಡ ಇಬ್ಬರ ಪತ್ನಿಯರನ್ನು ವಿವಾಹವಾಗುತ್ತಾನೆ. ಬಂಗಾರಮ್ಮ ಮತ್ತು ಸಿದ್ದಮ್ಮ ಪತ್ನಿಯರ ಹೆಸರಿನಿಂದ ಸಿದ್ದಮ್ಮನಹಳ್ಳಿ ಗ್ರಾಮದಲ್ಲಿ ಶಿಲಾಶಾಸನ ಕ್ರಿ.ಶ. ೧೬೯೧ರಲ್ಲಿ ಸಿದ್ದನಹಳ್ಳಿ ಗ್ರಾಮ ಸ್ಥಳದಲ್ಲಿ ಉಲ್ಲೇಖವಿದೆ. ಮತ್ತು ಅಣಜಿ ಗ್ರಾಮದಲ್ಲಿ ಬರುವಂತಹ ಗೌಡನ ಮಗನಿಗು ಕೂಡ ಇಬ್ಬರು ಪತ್ನಿಯರನು ತಿಳಿಯಲಾಗಿದೆ. ಊರಿನಗೌಡರು ಕೆರೆಕಟ್ಟಿಸುವಾಗ ಎಷ್ಟೇ ಪ್ರಯತ್ನಪಟ್ಟರೂ ಕೆರೆಗೆ ನೀರು ಬರದಿದ್ದಾಗ ಹೊನ್ನವ್ವನನ್ನು ಕೆರೆಗೆ ಅಹುತಿಕೊಟ್ಟಾಗ ಕೆರೆಗೆ ನೀರು ಬಂದಿತು ಹಾಗ ಹೊನ್ನಮ್ಮಳು ಮರಣ ಹೊಂದಿದ ನಂತರ ಗೌಡನ ಮಗನಿಗೆ ಇನ್ನೊಂದು ವಿವಾಹ ಮಾಡಿದ್ದರು ಎಂದು ಐತಿಹ್ಯವಿದೆ. ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಪಾಳೆಯಗಾರರು ತಮ್ಮ ಪ್ರತಿಷ್ಠೆಯ ಸಲುವಾಗಿ ಹಲವಾರು ಸ್ತ್ರೀಯರನ್ನು ಪ್ರೀತಿಸುತ್ತಿದ್ದರು ಮತ್ತು ವಿವಾಹವಾಗಿರುವುದು ಸುತ್ತಮುತ್ತಲಿನ ಹಲವಾರು ಊರುಗಳಿಗೆ ಆ ಸ್ತ್ರೀಯರ ಹೆಸರುಗಳನ್ನು ಇಟ್ಟಿರುವುದು ಸಾಕ್ಷಿಯಾಗಿದೆ.[೮]

## ಸ್ತ್ರೀಯರ ಸ್ಥಾನಮಾನ

ಪ್ರಾಚೀನ ಕಾಲದಿಂದ ಹಿಡಿದು ಪುಸ್ತುಕದವರೆಗೂ ಅನೇಕ ಏಳು-ಬೀಳುಗಳನ್ನು ಅನುಭವಿಸುತ್ತಾ ಬಂದಿದೆ. ಅಂದರೆ ಭಾರತದಲ್ಲಿ ಮಹಿಳೆಯರ ಸ್ಥಾನಮಾನಕ್ಕೆ ನಡೆಯುತ್ತಿದ್ದ ಮಾತೃದೇವತಾ ಪೂಜೆ ಹಾಗೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದ ಸಿಂಧೂನದಿ ತೀರದ ಸಂಸ್ಕೃತಿಯಲ್ಲೂ ವೇದಗಳ ಕಾಲದಲ್ಲಿಯೂ ಮಹಿಳೆಯರ ಸ್ಥಾನಮಾನಗಳು ಊರ್ಜಿತವಾಗಿಯೇ ಜೀವಿಸುತ್ತಿದ್ದರು. ಸ್ತ್ರೀಯರು ವಿದ್ಯಾಭ್ಯಾಸಕ್ಕೆ ಅರ್ಹರಾಗಿದ್ದರು ಋಗ್ವೇದ ಮಂತ್ರದ ದೃಷ್ಠಾಂತ ಪಟ್ಟಿಯಲ್ಲಿ ಹಲವು ಮಂದಿ ಸ್ತ್ರೀ ದೃಷ್ಟಾರ ಪಟ್ಟಿಯಲ್ಲಿ ಕಂಡುಬರುತ್ತವೆ. (ದೃಷ್ಠ ಮಂತ್ರಗಳನ್ನು ರಚಿಸಿದ್ದರು) ಉದಾ-ಲೋಪಮುದ್ರ ವಿಶ್ವವರಾ, ನಿಗಾರ್ಗಿ ಮತ್ತು ಘೋಷ ಎಂಬುವವರು ಕ್ರಮವಾಗಿ ೧೭೯, ೨೮, ೯೧, ೮೧, ೧೦, ೨೦ ಮತ್ತು ೩೯-೪೦ ಈ ಮಂತ್ರಗಳನ್ನು ರಚಿಸಿದವರೆಂದು ಪ್ರತೀತಿ ಇದೆ. ಹೀಗೆ ಸ್ತ್ರೀಯು ಒಂದು ಬಲವಾದ ಕಾಲಕ್ಕೆ ಅನುಗುಣವಾಗಿ ಸಾಮಾಜಿಕ ವ್ಯವಸ್ಥೆಯ ಹಲವಾರು ಕಾರ್ಯಗಳಲ್ಲಿ ಭಾಗಿಯಾಗಿ ತನ್ನ ತನವನ್ನು ಮೆರೆದಿದ್ದಾಳೆ.

ರಾಜಕೀಯ ಸಾಮಾಜಿಕ ಕಾರ್ಯಗಳು ಮತ್ತು ಧಾರ್ಮಿಕ ವಿವಾಹ ದಾನ-ಧರ್ಮಗಳಲ್ಲಿ ಪುರುಷರು ಸರಿ ಸಮಾನವಾಗಿ ಸಾಮಾಜಿಕ ಕಾರ್ಯಗಳು ಮಾಡಿದ್ದಂತೆ ತಿಳಿದುಬರುತ್ತದೆ. ಇದಕ್ಕೆ ದೊರೆತಿರುವ ಶಾಸನಗಳೇ ಆಧಾರಗಳು ಎನಿಸಿವೆ. ಪ್ರಾಚೀನ ಕಾಲದಲ್ಲಿ ಭಾರತದ ಮಹಿಳೆಯರಿಗೆ ಅತ್ಯುತ್ತಮ ಸ್ಥಾನಮಾನಗಳು ದೊರೆತಿರುವುದನ್ನು ಕಾಣಬಹುದು. ಮಹಿಳೆಯರು ಮಮತಾಮಾಯಿ, ದಯಾಮಯಿಯಾದ ತಾಯಿ ನಿಸ್ವಾರ್ಥಳಾಗಿ ಕುಟುಂಬದ ಏಳಿಗೆಗಾಗಿ ದುಡಿಯುತ್ತಿದ್ದರಿಂದಲೇ ಆಕೆಯನ್ನು ದೇವತೆ ಎನ್ನಲಾಗಿದೆ.

ಇದರ ಹಿನ್ನೆಲೆಯಲ್ಲಿ ಈಕೆಯನ್ನು ಭೂಮಿ, ಜಲ, ಪ್ರಕೃತಿ ಶಕ್ತಿ ಮುಂತಾದವುಗಳಿಗೆ ಹೋಲಿಕೆ ಮಾಡಿದ್ದಾರೆ. ಹಾಗೆಯೇ ಭಾರತದಲ್ಲಿ ಪರಂಪರೆ ಪ್ರಪ್ರಥಮವಾಗಿ 'ಮಾತೃದೇವೋ ಭವ' ಎಂದು ಗೌರವಿಸುತ್ತದೆ. ಅಲ್ಲದೆ ಆಕೆ 'ಯತ್ರನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾಃ ಎಂಬ ಉಕ್ತಿಯನ್ನು ಒಳಗೊಂಡಿದೆ. ಹೀಗಿರುವಾಗ ಮಹಿಳೆಯರು ಸಾಮಾಜಿಕವಾಗಿ ವಿವಿಧ ಕ್ಷೇತ್ರಗಳಲ್ಲಿ ಭಾಗವಹಿಸಿ ತನ್ನ ಪ್ರತಿಭೆ ಸಾಮರ್ಥ್ಯಗಳನ್ನು ಎತ್ತಿ ಹಿಡಿಯುವಲ್ಲಿ ಸಮರ್ಥಳಾಗಿದ್ದಾಳೆ. ಇಂತಹ ಮಹಿಳೆಯರನ್ನು ಈ ಕೆಳಗಿನ ಉಕ್ತಿಯೊಂದಿಗೆ ಸ್ಮರಿಸಬಹುದು.

"ಕುಲಪುತ್ರನೋದಿ ತಿಳಿದು ನಡೆದಲ್ಲದೇ

ಕುಲವನುದ್ಧರಿಸಲರಿಯನು

ಕುಲಪುತ್ರಿಯಾಳ್ಗುವರನಿಗಿತ್ತ ಮಾತ್ರಕೆ

ಕುಲಕೋಟಿಯನ್ನುದ್ಧರಿಸುವಳು"

ಒಂದು ನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಿದ್ದರೂ ಅಲ್ಲಿಯ ಸಂಸ್ಕೃತಿ ವಿಕಾಸಗೊಳ್ಳಲು ಆ ಪರಿಸರದಲ್ಲಿ ನೆಲೆಸಿರುವ ಜನ-ಜೀವನವೇ ಕಾರಣವಾಗುತ್ತದೆ.

ಅಣಜಿಯ ವಿರೂಪಾಕ್ಷ ಜೋಯಿಸ ಎನ್ನುವವರು, ರಾಜಾವೀರ ಮದಕರಿನಾಯಕನ ಆಸ್ಥಾನದಲ್ಲಿದ್ದರು. ಮಕ್ಕಳಿಲ್ಲದ ಇವರಿಗೆ ಶ್ರೀ ಮುರಗೋಡು ಚಿದಂಬರರ ಕೃಪೆಯಿಂದ ವಂಶವೃದ್ಧಿಯಾಯಿತೆಂದು ತಿಳಿಯುತ್ತದೆ. ಮತ್ತು ಶಾಸನದಲ್ಲಿ ಕೊಮ್ಮನಾಯಕನ ಮಗ ಚಿಕ್ಕನಾಗಪ್ಪನಾಯಕನು ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ಕ್ರಿ.ಶ. ೧೫೭೮ರಲ್ಲಿ ಅಣಜಿಯ ಮಾಚಪ್ಪ ದೇವರ ಮಠಕ್ಕೆ ದತ್ತಿಬಿಟ್ಟ ವಿಚಾರವಿದ್ದರೂ ಈಗ ಅಣಜಿಯಲ್ಲಿ ಮಾಚಪ್ಪ ದೇವರ ಮಠಯಾವುದೆಂದು ತಿಳಿಯುವುದಿಲ್ಲ. ಸಾಮಾನ್ಯ ಮಹಿಳೆಯರ ಬಗ್ಗೆ ಈ ಪರಿಸರದಲ್ಲಿ ಶಾಸನಗಳಲ್ಲಿ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.[೮]

**ವಿದ್ಯಾಭ್ಯಾಸ**

ಭರತಖಂಡದ ಒಂದು ಅಂಗವಾಗಿ ಕರ್ನಾಟಕದ ಇತರ ಅಂಶಗಳಂತೆ ವಿದ್ಯಾಭ್ಯಾಸದ ವಿಚಾರದಲ್ಲಿಯೂ ಅದರ ಮಿತಿ ಮತ್ತು ವ್ಯಾಪ್ತಿಗಳನ್ನು ಅವಲಂಬಿಸಿ ಬೆಳೆದರೂ ತನ್ನದೇ ಅದ

ವೈಶಿಷ್ಟವನ್ನು ತೋರ್ಪಡಿಸಲು ಶಕ್ತವಾಯಿತು. ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದಲ್ಲಿ ಕಂಡು ಬರುವ ಪ್ರಮುಖ ಅಂಶವೆಂದರೆ ಊರುಗಳಲ್ಲಿ, ಹಳ್ಳಿಗಳಲ್ಲಿ, ಅಗ್ರಾಹಾರಗಳು, ಮಠಗಳು, ಘಟಿಕಸ್ಥಾನಗಳು ನಿರ್ಮಾಣವಾಗಿ ವಿದ್ಯೆಯನ್ನು ಸಾಧ್ಯವಾದಷ್ಟು ವ್ಯಾಪಕವನ್ನಾಗಿಸಿ ಮಾಡುವ ಪ್ರಯತ್ನ ಹೀಗಿರುವಾಗ ಹಿಂದೂ ಸಮಾಜವು ವಿದ್ಯೆಗೆ ಅತ್ಯಂತ ಉನ್ನತವಾದ ಸ್ಥಾನವನ್ನು ನೀಡಿದ್ದು ವಾಸ್ತವವಾಗಿ ಅಂದು ಸಮಾಜಕ್ಕೆ ಆಧಾರವಾಗಿದ್ದ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿತ್ತು. ಏಕೆಂದರೆ ವಿದ್ಯೆ ಸರ್ವಕಾಲಿಕವೂ ಶ್ರೇಷ್ಠತ್ವದ ಕೊಡುಗೆಯನ್ನನೇ ನೀಡುವ ಉದ್ದೇಶವನ್ನು ಹೊಂದಿರುತ್ತದೆ. ಹೀಗಾಗಿ ವಿದ್ಯೆ ಮಾನವನ ಸಂಸ್ಕೃತಿಯ ಪ್ರತ್ಯೀಕವಾಗಿದ್ದು ಒಂದು ದೇಶದ ಪದೋನ್ನತಿಗೆ ಆಧಾರವಾಗಿ ನಿಂತಿದೆ. ಆದ್ದರಿಂದ ಹಿಂದೂ ಸಮಾಜವೂ ಶಿಕ್ಷಣವನ್ನು ಒದಗಿಸುವುದು ತನ್ನ ಪ್ರಮುಖ ಕರ್ತವ್ಯಗಳಲ್ಲೊಂದು ಎಂದು ಪರಿಗಣಿಸಿತು.

ಸಂಸ್ಕೃತ ಪದವಾದ ವಿದ್ಯೆ ಎಂಬುದು ಜ್ಞಾನದ ಅರ್ಥವನ್ನು ಹೊಂದಿದ್ದು ವಿದ್ಯಾಭ್ಯಾಸ ಎಂದರೆ ವಿದ್ಯಾರ್ಜನೆ ಅಥವಾ ಜ್ಞಾನದ ಅಭ್ಯಾಸ "ನಹಿ ಜ್ಞಾನೇನ ಸದೃಶಃ ವಿದ್ಯೆ ವಿ ಹೀನಃ ಪಶುಭೀಃ ಸಮಾನಃ" ಎಂಬ ಮಾತುಗಳೂ ವಿದ್ಯೆಗೆ ಪ್ರಾಚೀನ ಕಾಲದಲ್ಲಿ ಹೆಚ್ಚಿನ ಮಹತ್ವವನ್ನು ನೀಡದಂತಿದೆ. ಇಂತಹ ವಿದ್ಯೆಯನ್ನು ಪಡೆಯಲು ಗುರುವಿನ ಪಾತ್ರ ಪ್ರಮುಖವಾಗಿತ್ತು. ಗುರುವಿಗೆ ಗುರು ಬ್ರಹ್ಮ ಗುರು ವಿಷ್ಣು ಮಹೇಶ್ವರರನ್ನು ಕಾಣಬಹುದು. ಶ್ರದ್ಧೆ ಭಕ್ತಿ ನಂಬಿಕೆಗಳನ್ನು ಕಾಣುವ ಪ್ರಾಚೀನ ಕಾಲದ ವಿದ್ಯಾಭ್ಯಾಸವನ್ನು ಆಧ್ಯಾತ್ಮಿಕ ಜ್ಞಾನದ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಕ್ರಿ.ಶ. ೧೫೭೮ರಲ್ಲಿ ಶಾಸನದಲ್ಲಿ ಅಣಜಿಯ ಮಾಚಪ್ಪ ದೇವರ ಮಠಕ್ಕೆ ದತ್ತಿಬಿಟ್ಟವಿಚಾರವಿದ್ದರೂ ಈಗ ಅಣಜಿಯಲ್ಲಿ ಮಾಚಪ್ಪದೇವರ ಮಠಯಾವುದೆಂದು ತಿಳಿಯುವುದಿಲ್ಲ ನಾಶವಾಗಿದೆ.

ಕ್ರಿ.ಶ೧೬೩೦ರಲ್ಲಿ ಚಿತ್ರದುರ್ಗದ ಪಾಳೇಯಗಾರನಾಗಿದ್ದ ಬಿಚ್ಚುಗತ್ತಿ ಭರಮಣ್ಣ ನಾಯಕರು ಅಣಜಿ ಸೀಮೆಗೆ ಸೇರಿದ ಕಲ್ಲೇನಹಳ್ಳಿಯನ್ನು ಅಗ್ರಹಾರವನ್ನಾಗಿ ಮೂಡಿಸಿ ತಮ್ಮ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ದಾನ ನೀಡಿದ್ದಾರೆಂದು ಈ ಗ್ರಾಮದಲ್ಲಿರುವ ಹನುಮಂತದೇವರ ದೇವಾಲಯದ ಒಳಭಾಗದ ಗೋಡೆ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ಪ್ರಾಚೀನ ವಿದ್ಯಾಕೇಂದ್ರಗಳಾಗಿ ಈ ಪ್ರದೇಶದ ಹಲವಾರು ಗ್ರಾಮಗಳು ಇದ್ದುದನ್ನು ಶಾಸನಗಳಿಂದ ತಿಳಿಯಬಹುದಾಗಿದೆ. ಈ ಪರಿಸರದ ಸಾಮಾಜಿಕ ವ್ಯವಸ್ಥೆಯು ವರ್ಗ ವರ್ಣಜಾತಿ ವ್ಯವಸ್ಥೆಯನ್ನು ಹೊಂದಿದ್ದು ವೃತ್ತಿ ಕಸಬುಗಳು ಕಾಲಾಂತರದಲ್ಲಿ ವಿವಿಧ ಉಪಪಂಗಡಗಳಾಗಿ ಜಾತಿ ವ್ಯವಸ್ಥೆಗೆ ನಾಂದಿಯಾಯಿತು ಎಂದು ಹೇಳಬಹುದಾಗಿದೆ.

**ಹಬ್ಬ ಹರಿದಿನಗಳು**

ಪ್ರಾಚೀನ ಕಾಲದಲ್ಲಿಯೂ ಸಹ ಹಲವಾರು ಹಬ್ಬ ಹರಿದಿನಗಳು ಹಾಗೂ ಜಾತ್ರೆ ಉತ್ಸವಗಳನ್ನು ಆಚರಿಸುತ್ತಿದ್ದರು ಎಂದು ಕೆಲವು ಶಾಸನಗಳಿಂದ ಮತ್ತು ಮೌಖಿಕ ಆಕರಗಳಿಂದ ತಿಳಿಯಬಹುದು. ಅಂದು ವಸಂತ ಪಾಲ್ಗುಣ ಮಾಸದ ಉತ್ಸವ. ವೈಶಾಖ ಮಾಸದ ಉತ್ಸವ, ನಿತ್ಯೋತ್ಸವ,

ಸಂವತ್ಸತೋತ್ಸವ ಮುಂತಾದ ಉತ್ಸಾವಗಳನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಜೊತೆಗೆ ಹಬ್ಬಗಳಾದ ಶಿವರಾತ್ರಿ, ಯುಗಾದಿ, ಗೌರಿಗಣೇಶ ನವರಾತ್ರಿ ದೀಪಾವಳಿ ನಾಗರಪಂಚಮಿ, ಮೊಹರಂ, ದಸಾರ, ಮುಂತಾದ ಹಬ್ಬಗಳನ್ನು ಆಚರಿಸುತ್ತಿದ್ದರು ಅಂದಿನ ಹಬ್ಬಗಳನ್ನು ಮಾನವನ ಮನಸ್ಸಿಗೆ ಆನಂದವನ್ನುಂಟುಮಾಡುವ ಸಾಧನೆಗಳಾಗಿವೆ. ಇವುಗಳ ಜೊತೆಗೆ ಪಾಳೆಯಗಾರರು ವೀರರಾಗಿದ್ದರಿಂದಾಗಿ ಶಕ್ತಿದೇವತೆಗಳನ್ನು ಸಹ ಆರಾಧನೆಯನ್ನು ಸಹ ಆಚರಿಸುತ್ತಿದ್ದರು. ಈ ಪ್ರಸ್ತುತ ಪ್ರದೇಶದಲ್ಲಿ ದೇವರುಗಳ ವಿಶೇಷ ಪೂಜೆಯನ್ನು ಸಹ ನಿರ್ವಹಿಸುತ್ತಿದ್ದರು.

**ಜಾತ್ರೆಗಳು**

ಜನರು ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿರುವ ದೇವ ದೇವತೆಗಳನ್ನು ಸಾಮಾಜಿಕವಾಗಿ ಪೂಜಿಸುವುದು ರೂಡಿಯಲ್ಲಿದೆ. ಎಲ್ಲಾ ನಿಯಮಗಳ ಮೂಲಕ ಎಲ್ಲಾಜಾತಿ ವರ್ಗಗಳು ಸುತ್ತಮುತ್ತಲಿನ ಗ್ರಾಮಗಳ ಜನರು ಪುರುಷರು ಸ್ತ್ರೀಯರು ಮಕ್ಕಳು ಒಂದೆಡೇ ಸೇರಿ ಆಚರಿಸುವ ಹಬ್ಬಗಳ ಜೊತೆಗೆ ನಡೆಯುವ ಸಂಭ್ರಮವೇ ಜಾತ್ರೆ ಎನ್ನಲಾಗಿದೆ. ಈ ಜಾತ್ರೆಗಳು ಜನರ ಸಂಸ್ಕೃತಿಯ ವಿಶಿಷ್ಟ ನೆಲೆಗಳಾಗಿ ರೂಪುಗೋಳ್ಳುತ್ತಾ ಬಂದಿವೆ. ಜಾತ್ರೆಯು ಜನಪದರ ಸಂಸ್ಕೃತಿಯ ಒಂದು ಸಂಕೀರ್ಣವೇದಿಕೆ ಎಂದು ಹೇಳಬಹುದು.

ಜಾತ್ರೆಗಳು ನಡೆಯದೇ ಇರುವಂತಹ ಯಾವುದೇ ಗ್ರಾಮಗಳು ಇರುವುದಿಲ್ಲ. ಪ್ರತಿಯೊಂದು ಜಾತ್ರೆ ನಡೆಯಬೇಕಾದರೆ ಆ ಜಾತ್ರೆಗೆ ಒಂದೊಂದು ಆದಿದೇವತೆ ಗ್ರಾಮದೇವತೆ ಪ್ರದೇಶ ದೇವತೆ ಇತ್ಯಾದಿಗಳು ಇದ್ದು ಅವುಗಳದೇ ಆದ ಸ್ಥಳ ಪುರಾಣ ಐತಿಹ್ಯ ಇದ್ದು ಇವುಗಳ ಹಿನ್ನೆಲೆಯಲ್ಲಿ ವರ್ಷದ ನಿರ್ದಿಷ್ಟ ಕಾಲದಲ್ಲಿ ಜಾತ್ರೆಗಳು ಉತ್ಸವಗಳು ಜರುಗುತ್ತವೆ. ಜಾತ್ರೆ ಆಚರಿಸುವಾಗ ಜಾತ್ರೆಗೆ ಒಂದು ತೇರು ಆ ತೇರಿನಲ್ಲಿ ಆಯಾ ದೇವತೆಗಳ ಶಿಲ್ಪಗಳನ್ನು ಪ್ರತಿಷ್ಠಾಪಿಸಿ ತೇರಿನಲ್ಲಿ ಇಡುವುದರ ಮೂಲಕ ಮೊದಲು ಮಡಿತೇರುನ್ನು ಎಳೆದು ಅಂದಿನ ಪೂಜಾಕಾರ್ಯಗಳನ್ನು ನೆರವೇರಿಸಿ ತದನಂತರವಾಗಿ ತೇರನ್ನು ಪಾದಗಟ್ಟಿಯಾವರೆಗೆ ಎಳೆದು ಮತ್ತೆ ಮರಳಿ ದೇವತೆಯ ಗುಡಿಯ ಬಳಿಗೆ ತಂದು ನಿಲ್ಲಿಸುವುದು ಇದು ಜಾತ್ರೆಯ ಒಂದು ಪ್ರಾಥಮಿಕ ಮತ್ತು ಸಾಧನ ಕ್ರಿಯೆ ಎಂದು ಹೇಳಬಹುದಾಗಿದೆ.

ಜಾತ್ರೆಗಳು ಉತ್ಸವಗಳು ಹಲವು ಜಾತಿಗಳ ಮಧ್ಯ ಬೇದಬಾವಗಳಿಲ್ಲದೆ ಪ್ರತಿಯೊಬ್ಬ ವ್ಯಕ್ತಿಯೂ ಸಹ ಭಕ್ತಿ ಭಾವದಿಂದ ಭಾಗವಹಿಸುತ್ತ ಆಚರಿಸುತ್ತಿದ್ದರು. ಪಾಳೆಯಗಾರರು ಕಾಲಾವಧಿಯಲ್ಲಿ ಕುಸ್ತಿ ಖಡ್ಗವರಸೆ ಮುಂತಾದ ಶೌರ್ಯ ಪ್ರದರ್ಶನ ನಡೆಯುತ್ತಿತ್ತು. ಹಾಗೆಯೇ ಇಂದಿಗೂ ಸಹ ಅವುಗಳನ್ನು ಮುಂದುವರೆಸಿಕೊಂಡು ಬಂದಿದ್ದು ಗೆದ್ದವರಿಗೆ ರಾಜರು ಮತ್ತು ಊರಿನ ಹಿರಿಯರು ಗೌಡರು ಬಹುಮಾನ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಈ ಸಂದರ್ಭದಲ್ಲಿ ಅನೇಕ ಮನೋರಂಜನಾ ಕಾರ್ಯಕ್ರಮಗಳು ಜರುಗತ್ತವೆ. ಈ ಪರಿಸರದಲ್ಲಿ ಅಣಜಿ ಹೊನ್ನಮ್ಮನ ಜಾತ್ರೆ ಬೇತೂರು, ಮತ್ತು ಗೊಲ್ಲರಹಳ್ಳಿಯ ಜಾತ್ರೆಗಳು, ಗುಡಾಳು ಮಾರಮ್ಮನ ಜಾತ್ರೆಗಳು ಜರುಗುತ್ತವೆ. ಸುತ್ತಮುತ್ತಲಿನ

ಗ್ರಾಮಗಳ ಜನರು ಸೇರುವುದರ ಮೂಲಕ ವಿಜೃಂಭಣೆಯಿಂದ ಪ್ರತಿವರ್ಷ ಅಥವಾ ಐದು ಆರು ವರ್ಷಕ್ಕೊಮ್ಮೆ ಫೆಬ್ರವರಿ ಮತ್ತು ಮಾರ್ಚ್ ತಿಂಗಳಿನಲ್ಲಿ ಆಚರಿಸುತ್ತಾ ಬಂದಿರುತ್ತಾರೆ. ಅಣಜಿ ಪರಿಸರದ ಸುತ್ತಮುತ್ತಲಿನ ಗ್ರಾಮಗಳ ಜನರು ಜಾತ್ರೆಗಳನ್ನು ಆಚರಿಸುತ್ತ ಬಂದಿದ್ದಾರೆ.[೧೦]

**ಧಾರ್ಮಿಕ ಸ್ಥಿತಿಗತಿ**

ಮಾನವನು ಸಾಂಸ್ಕೃತಿಕ ಬದುಕಿನ ಜೀವನಾಡಿ ಧರ್ಮ, ಮುಖ್ಯವಾಗಿ ಧರ್ಮವೇ ಭಾರತೀಯರ ಸಂಸ್ಕೃತಿಯ ಬದುಕಿಗೆ ಮಾರ್ಗದರ್ಶಿ ಹೀಗಿರುವಾಗ ಭಾರತದಲ್ಲಿ ಕ್ರಿ.ಪೂದಿಂದಲೇ ಅಸ್ಥಿತ್ವದಲ್ಲಿದ್ದ ಸನಾತನ ಧರ್ಮವು ನಂತರದಲ್ಲಿ ತನ್ನ ಸ್ವರೂಪದಲ್ಲಿ ಹಲವಾರು ಬದಲಾವಣೆಗಳನ್ನು ಹೊಂದಿತ್ತು. ಅಂದರೆ ಆಚಾರ ವಿಚಾರಗಳು ಪರಿವರ್ತನೆಗೊಂಡು ಅನೇಕ ಧರ್ಮಗಳಾಗಿ ಪರಿಣಿಮಿಸಿದವು. ಕರ್ನಾಟಕ ತನ್ನ ಜೀವನದ ಎಲ್ಲಾ ಮುಖಗಳಲ್ಲಿಯೂ ಧರ್ಮವನ್ನು ಅಳವಡಿಸಿಕೊಂಡಿತು. ವೇದ ಉಪನಿಷತ್ತುಗಳು. ಆಗಮ ಸ್ಮೃತಿಗಳು ಇತಿಹಾಸ ಪುರಾಣಗಳು ನಿರೂಪಿಸಿದ ಮತ್ತು ರೂಪಿಸಿದ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಇದು ಬೆಳೆದುದ್ದಲ್ಲದೆ ಆ ಪರಂಪರೆಯನ್ನು ಬೆಳೆಸುವುದಕ್ಕೆ ತನ್ನ ಕೊಡುಗೆಯನ್ನು ನೀಡಿತು.

ಹೀಗಾಗಿ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮಗಳು ಬೆಳೆದು ಬಂದು ಜನತೆಯ ಧಾರ್ಮಿಕ ಶ್ರದ್ಧೆ. ಧಾರ್ಮಿಕ ಸಮನ್ವಯತೆ ಔದಾರ್ಯಗಳನ್ನು ಕಾಣುತ್ತೇವೆ. ಇಲ್ಲಿನ ನೆಲ, ಜನ, ವಾಯು ಹಾಗೂ ಸೂಕ್ತ ವಾತವರಣ ಪ್ರಾಚೀನ ಕಾಲದಿಂದಲೂ ವಿವಿಧ ಧಾರ್ಮಿಕ ನಂಬಿಕೆಗಳನ್ನು ಹಾಗೂ ಧರ್ಮಗಳನ್ನು ಆಕರ್ಷಿಸುತ್ತಿತ್ತು. ಕರ್ನಾಟಕದಲ್ಲಿ ಕ್ರಿ.ಪೂ.ದಿಂದಲೂ ಜನಜೀವನ ಉತ್ತಮಗುಣಮಟ್ಟವನ್ನು ಹೊಂದಿತ್ತು. ಎಂಬುದು ಇಲ್ಲಿನ ಅಣಜಿ ಪರಿಸರದ ಸಾಂಸ್ಕೃತಿಕ ನೆಲೆಗಳಿಂದ ಅಧ್ಯಯನ ಮಾಡಬಹುದಾಗಿದೆ ಆದರೆ ವೈದಿಕ ನಂಬಿಕೆಗಳು ಈ ಕಾಲದಲ್ಲಿ ಕರ್ನಾಟದಲ್ಲಿ ಇದ್ದವು ಎಂದು ಹೇಳುವುದು ಕಷ್ಟಸಾಧ್ಯ. ಹೀಗಿರುವಾಗ ಕ್ರಿ.ಪೂ.೩–೪ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಪರಿಚಯಿಸಲ್ಪಟ್ಟವು. ಉದಾಹರಣಗೆ ಆ ಕಾಲದಲ್ಲಿಯೇ ಚಂದ್ರಗುಪ್ತಮೌರ್ಯ ಹಾಗೂ ಭದ್ರಬಾಹು ಬಂದು ನೆಲೆಸಿದ್ದರು ಎನ್ನುವುದು ಜೈನ ಪರಂಪರೆಯಿಂದ ತಿಳಿದು ಬರುತ್ತದೆ.

ಕರ್ನಾಟಕದ ಅರಸು ಮನೆತನಗಳು ಧರ್ಮ ಸಹಿಷ್ಣುತೆಯನ್ನು ಅನುಸರಿಸದ ಧರ್ಮಗಳ ಅನುಯಾಯಿಗಳಿಗೆ ಧಾರ್ಮಿಕ ಸ್ವತಂತ್ರವನ್ನು ನೀಡಿ ಆ ಕಾಲದ ರಾಜ್ಯ ಆಡಳಿತದ ಮುಖ್ಯ ಲಕ್ಷಣವಾಗಿ ಧರ್ಮಸಮನ್ವಯತೆ ಪ್ರಭಾವ ಬೀರಿತು. ಸ್ವಧರ್ಮದ ರಕ್ಷಣೆ ಮತ್ತು ಪರಧರ್ಮ ಸಹಿಷ್ಣುತೆ ಎನ್ನುವುದು ಅಂದಿನ ಕಾಲದ ಅರಸರ ಧ್ಯೇಯವಾಗಿತ್ತು. ಕೆಲವು ಧರ್ಮಗಳ ಪ್ರಭಾವ ಕಡಿಮೆಯಾದರೆ ಇನ್ನೂ ಕೆಲವು ಧರ್ಮಗಳು ತಮ್ಮ ತಮ್ಮ ತತ್ವಾ ಆದರ್ಶಗಳನ್ನು ಉಳಿಸಿಕೊಂಡು ಜೀವಂತವಾಗಿ ಮುನ್ನಡೆದಿವೆ ಎಂದು ಅಣಜಿ ಪರಿಸರದ ವ್ಯಾಪ್ತಿ ಪ್ರದೇಶಗಳಲ್ಲೂ ಕಾಣಬಹುದು. ಈ ಪ್ರದೇಶದಲ್ಲಿ ಶೈವಧರ್ಮ ಮತ್ತು ವೈಷ್ಣವ ಧರ್ಮವಿದ್ದರೂ ಶೈವಧರ್ಮದ ಪ್ರಾಬಲ್ಯತೆ ಹೆಚ್ಚು

ಎಂಬುದನ್ನು ಇಲ್ಲಿ ಕಟ್ಟಲಾಗಿರುವ ದೇವಾಲಯಗಳಿಂದಲೇ ತಿಳಿದುಕೊಳ್ಳಬಹುದು. ಅಲ್ಲದೇ ಧಾರ್ಮಿಕ ತಿಕ್ಕಾಟಗಳು, ವಿರಸಗಳು ನಡೆದಿದ್ದವು ಎನ್ನುವುದಕ್ಕೆ ಈ ಪ್ರದೇಶದಲ್ಲಿ ಕಣ್ಮರೆಯಾಗಿರುವ ಬೇತೂರುನಲ್ಲಿ ಬಹಳ ಹಿಂದಿನಿಂದಲೂ ಜೈನಮತ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ಮತ್ತು ರೇವಣಸಿದ್ದೇಶ್ವರ ಮತ್ತು ಸಮಗದ್ದುಗೆ ಸಂಗಮೇಶ್ವರನ ದೇವಾಲಯದ ಹಿಂಭಾಗದಲ್ಲಿ ನೆಲೆ ಆಗಿದಾಗ ಮೂರು ಮೂರುವರೆ ಅಡಿ ಎತ್ತರದ ಮೂರು ತೀರ್ಥಂಕರರ ವಿಗ್ರಹಗಳು ದೊರೆತಿವೆ. ಬಹಳ ಸುಂದರವಾದ ವಿಗ್ರಹಗಳು (ಇಲ್ಲಿಯ ಒಂದು ದೇವಸ್ಥಾನಕ್ಕೆ ಜೈನ ಬಸದಿ ಎಂದು ಅಭಿಪ್ರಾಯಪಡುತ್ತಾರೆ.) ಈ ಮೂರು ವಿಗ್ರಹಗಳನ್ನು ಬಯಲಿನ ಒಂದು ಜಗುಲಿಯ ಮೇಲಿರಿಸಿದ್ದಾರೆ. ಈ ಸಾಕ್ಷಿಯಾಗಿಟ್ಟುಕೊಂಡು ಹೇಳಬಹುದು. ಧಾರ್ಮಿಕ ಸಮನ್ವಯತೆಯು ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬಂದಿಲ್ಲವೆಂದು ಹೇಳಬಹುದು. ಆದಾಗ್ಯೂ ಒಂದು ಹಂತದ ನಂತರ ಸಹಬಾಳ್ವೆಯನ್ನು ನಡೆಸುತಿರುವುದನ್ನು ಕಾಣುತ್ತೇವೆ.

**ಶೈವಧರ್ಮ**



ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ- ಮೆಹೆಂಜೋದಾರೋಗಳ ಸಂಸ್ಕೃತಿಯಲ್ಲಿ (ಸು.ಕ್ರಿ.ಪೂ.೩೨೫೦-೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ದೇವತೆಗೆ ಮೂರು ಮುಖಗಳಿವೆ. ಅವನು ಯೋಗ ಸಮಾಧಿಯಾ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ ಎಮ್ಮೆ, ಜಿಂಕೆಗಳು ಸುತ್ತುವರಿದಿವೆ. ಇದನ್ನು ಪರಿಶೀಲಿಸಿ ಈ ವಿಗ್ರಹವು ಹಿಂದೂ ಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಯೆಂದು ಸರ್.ಜಾನ್.ಮಾರ್ಷಲ್ಲರವರು ಅಭಿಪ್ರಾಯ ಪಡುತ್ತಾರೆ. ಮೊಹೆಂಜೋದಾರೋ ಮತ್ತು ಹರಪ್ಪ ಅವಶೇಷಗಳಿಂದ ಶೈವಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಜೀವಂತ ಧರ್ಮವೆಂದು ಭಾವಿಸಬೇಕಾಗುತ್ತದೆಯೆಂದು ಅವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ ಮತ್ತು ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದಲೂ ಶೈವಧರ್ಮ ಆಚರಣೆಯಲ್ಲಿತ್ತು. ಶಿವನನ್ನು ಸ್ಥಿರವಾಗಿ ಪೂಜಿಸುವುದು ಮುಖ್ಯವಾಗಿ ಕಂಡು ಬರುತ್ತಿತ್ತು.[೧೧]

ಋಗ್ವೇದಗಳಲ್ಲಿ ಪಶುಪತಿಯು ರುದ್ರನೆಂದು ಪೂಜೆಗೊಳ್ಳುತ್ತಾನೆ ಯಜುರ್ವೇದ ಕಾಲಕ್ಕೆ ರುದ್ರನೇ ಶಿವನರೂಪವನ್ನು ಪಡೆದು ಶೈವಧರ್ಮದವರ ಆದಿದೇವತೆಯಾಗಿದ್ದನೆಂದು ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ಶಿವನಿಗೆ ಶಂಕರ ಮಹದೇವ ಇತ್ಯಾದಿ ಹೆಸರುಗಳು ಬಂದಿವೆ. ಕರ್ನಾಟಕದಲ್ಲಿ ಈ ಧರ್ಮ ಕದಂಬರ ಕಾಲದಿಂದಲೇ ಪ್ರಚಾರಗೊಂಡಿದ್ದು ಈ ರೀತಿಯಲ್ಲಿ ಶಿವನನ್ನು ಪೂಜಿಸುವ ಆರಾಧಿಸುವ ಪ್ರಕ್ರಿಯೆ ಆಧಾರದ ಮೇಲೆ ಶೈವಮತಗಳಲ್ಲಿ ಅನೇಕ ಗುಂಪುಗಳನ್ನಾಗಿ ಮಾಡಲಾಗಿದೆ.

ಪ್ರಸ್ತುತ ಅಧ್ಯಯನ ಶೈವ ಧರ್ಮಕ್ಕೆ ಸಂಬಂಧಿಸಿದ್ದಂತೆ ಅಣಜಿ ಪರಿಸರಕ್ಕೆ ಮಾತ್ರ ಸೀಮಿತವಾಗಿದೆ. ಸುತ್ತಮುತ್ತಲಿನ ಪರಿಸರದಲ್ಲಿ ಹಲವಾರು ಶೈವ ದೇವಾಲಯಗಳು ಕಂಡು ಬಂದಿದ್ದು ಶೈವ ಧರ್ಮದ ಒಂದು ಪ್ರಚಾರ ಈ ಪ್ರದೇಶದಲ್ಲಿ ಎಂದರೆ ಹಿಂದೆ ನೊಳಂಬ ಪಲ್ಲವರ ಆಡಳಿತದಲ್ಲಿ ಕಾಲಾವದಿಯಲ್ಲಿ ಈ ಪ್ರದೇಶದಲ್ಲಿ ಶೈವಧರ್ಮ ಪ್ರಚಾರದಲ್ಲಿದ್ದು ಮತ್ತು ನೋಳಂಬ ಪಲ್ಲವರು ಶೈವಧರ್ಮಿಯರಾಗಿದ್ದರಿಂದ ಅಣಜಿ ಪರಿಸರದ ಸುತ್ತಮುತ್ತಲಿನಲ್ಲಿ ಶೈವ ದೇವಾಲಯಗಳು ಪ್ರಮುಖವಾಗಿ ಕಾಣಬಹುದಾಗಿದೆ.

ಶೈವ ದೇವಾಲಯಗಳು ಪ್ರಮುಖವಾಗಿ ಎಲೆಬೇತೂರು ಕಲ್ಲೇಶ್ವರ ದೇವಾಲಯ ಇದು ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ಗ್ರಾಮ ಕ್ರಿ.ಶ. ೧೧೯೦ ರಲ್ಲಿ ದೇವಾಲಯದ ಉಳಿದ ವಾಸ್ತು ಲಕ್ಷಣಗಳ ಆಧಾರದ ಮೇಲೆ ಉಚ್ಚಂಗಿ ಪಾಂಡ್ಯರ ಕಾಲಾವಧಿಯಲ್ಲಿ ಕಲ್ಯಾಣಿ ಚಾಲುಕ್ಯರ ಶೈಲಿಯಲ್ಲಿ ಈ ದೇವಾಲಯ ನಿರ್ಮಿತವಾಗಿದೆ ಎಂದು ಹೇಳಬಹುದು.

ಚೌಕಾಕಾರದ ಗರ್ಭಗುಡಿಯಲ್ಲಿ ಲಿಂಗವಿದೆ. ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗುಡಿದ್ವಾರವು ಸರಳವಾಗಿದೆ ತೆರೆದ ಅಂತರಾಳವಿದ್ದು ಅದು ಆಯತಾಕಾರವಾಗಿದೆ. ಇದರ ದ್ವಾರವು ಸಾಧರಣವಾಗಿದೆ ಅಂತರಾಳದ ಮುಂದಿನ ನವರಂಗದಲ್ಲಿ ನಾಲ್ಕು ಕಣ್ಣಿನ ಸಳೆಯುವ ಕಂಬಗಳಿವೆ. ಇವು ಆಯತ ಇಲ್ಲವೇ ಅಷ್ಟಕೋನ ಹಾಗೂ ಚೌಕಾಕಾರದಲ್ಲಿವೆ. ಈ ಕಂಬಗಳು ಪುಷ್ಪ ಬೋಧಿಗೆಗಳನ್ನು ಹೊಂದಿವೆ. ತೊಲೆಗೆ ಆಧಾರವನ್ನೊದಗಿಸಿವೆ. ಅಷ್ಟದಿಕ್ಪಾಲಕರಾದ ಕುಬೇರ, ಈಶ್ಯಾನ, ಇಂದ್ರ, ಆಗ್ನಿ, ಯಮ, ನಿಋತಿ, ವರುಣ, ವಾಯುಗಳನ್ನು ಪತ್ನಿ ಹಾಗೂ ವಾಹನ ಸಮೇತರಾಗಿ ನವರಂಗದ ಮುಚ್ಚಿಗೆಯಲ್ಲಿ ಸುಂದರವಾಗಿ ಕೆತ್ತಲಾಗಿದೆ. ಈ ದಿಕ್ಪಾಲಕರ ಮಧ್ಯದಲ್ಲಿ ನಾಟ್ಯಶಿವ (ನಟರಾಜ) ನನ್ನು ಸಹ ಬಿಡಿಸಲಾಗಿದೆ. ನವರಂಗದ ಅಲ್ಲಲ್ಲಿ ಸರಸ್ವತಿ ತಾರ್ಕಿಕೇಯ, ವಿಷ್ಣು, ನಾಗ–ನಾಗಿಣಿ ಮೂರ್ತಿಗಳನ್ನು ಹೊರಗಿನಿಂದ ತಂದು ಇರಿಸಲಾಗಿದೆ. ಇದರ ದ್ವಾರದ ವೇದ್ಯಾಭಾಗದಲ್ಲಿ ಗಂಗೆ–ಯಮುನೆಯರು ಹಾಗೂ ಶೈವ ದ್ವಾರಪಾಲಕ ಹಾಗೂ ಚಾಮರಧಾರಿಣಿ ಶಿಲ್ಪಗಳಿವೆ ಶಿಲ್ಪಗಳನ್ನು ಶೈವ ದೇವಾಲಯಗಳಲ್ಲಿ ಕಾಣಬಹುದು.

ಹಿಂದೂ ಪರಂಪರೆಯ ಆರಾಧನ ಪದ್ದತಿಯಲ್ಲಿ ಶಿವನ ಪ್ರತಿರೂಪಗಳಾದ ಲಿಂಗ ನಂದಿಯನ್ನು ಹೆಚ್ಚಾಗಿ ಪೂಜಿಸಲಾಗುತ್ತದೆ. ಹಾಗೂ ಲಿಂಗೋದ್ಭವ ಮೂರ್ತಿ, ಕೇವಲ ಮೂರ್ತಿ, ಭಿಕ್ಷಾಟನಾಮೂರ್ತಿ, ಕಂಕಾಲಮೂರ್ತಿ, ಕ್ಷೇತ್ರಪಾಲ, ದಕ್ಷಿಣಾಮೂರ್ತಿ, ಗಜಸಂಹಾರ ಮೂರ್ತಿ, ಆಲಿಂಗನಮೂರ್ತಿ, ವೃಷಭಮೂರ್ತಿ, ಭೈರವ, ವೀರಭದ್ರ, ಗಣೇಶ, ಸ್ಕಂದ; ಆರ್ಧಾನಾರಿಶ್ವರ, ಉಮಾಮಹೇಶ್ವರ ಮೂರ್ತಿ ಶೈವ ಪಂಥದ ಮೂರ್ತಿಗಳೆಂದು ಪರಿಗಣಿಸಲಾಗಿದೆ.

ಅಣಜಿ ಪರಿಸರದ ಸುತ್ತಮುತ್ತಲಿನಲ್ಲಿ ಕಂಡು ಬರುವಂತಹ ಶೈವ ದೇವಾಲಯಗಳು ಅಣಜಿಯ ಸೋಮೇಶ್ವರ ಉಗ್ರನರಸಿಂಹ ದೇವಾಲಯ, ಎಲೆಬೇತೂರಿನ ಸಿದ್ದೇಶ್ವರ, ಅನಗೋಡು ಸಿದ್ದೇಶ್ವರ ದೇವಾಲಯ, ಆನೆಕೊಂಡದ ಕಲ್ಲೇಶ್ವರ, ಹೆಮ್ಮನಬೇತೂರಿನ ಸಿದ್ದೇಶ್ವರ, ಮಠದ ದ್ಯಾಮೇನಹಳ್ಳಿ

ಆಂಜನೇಯ ಮುಂತಾದ ದೇವಾಲಯಗಳು ಧಾರ್ಮಿಕ ಪ್ರವೃತ್ತಿಯನ್ನು ವೈವಿಧ್ಯತೆಯನ್ನು ಸಾಮರಸ್ಯವನ್ನು ಪ್ರತಿಬಿಂಬಿಸುತ್ತಿವೆ. ಮತ್ತು ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಲ್ಲಿ ಶೈವ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಇದ್ದು, ಸಾಮಾನ್ಯವಾಗಿ ಮೊದಲು ಕಂಡು ಬರುವ ಶ್ಲೋಕವೆಂದರೆ "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ" ಎಂಬ ಶ್ಲೋಕಗಳಿಂದ ಪ್ರಾರಂಭವಾಗಿದೆ. ಚಾಮರದಂತಹ ಬಾಲಚಂದ್ರನಿಂದ ಚುಂಬಿತನಾದ ಉತ್ತುಂಗ ಜಟಾಜೂಟವುಳ್ಳವನು, ಮೂರು ಲೋಕಗಳ ರಚನೆಗೆ ಮೂಲಸ್ತಂಭ ರೂಪನು ಆದ ಶಂಭುವಿಗೆ ನಮಸ್ಕಾರವು ಎಂಬ ಅರ್ಥಕೊಡುತ್ತದೆ. ಇದರಿಂದ ಅಣಜಿ ಪರಿಸರದ ವ್ಯಾಪ್ತಿಯಲ್ಲಿ ಶೈವಧರ್ಮವು ಅಧಿಕಾರಿವರ್ಗದವರಿಂದ ಮತ್ತು ಸಾಮಾನ್ಯ ವರ್ಗದವರಿಂದಲೂ ಪ್ರೋತ್ಸಾಹ ಪಡೆದುಕೊಂಡಿತ್ತು. ಪ್ರಸ್ತುತವಾಗಿ ಈಗಲೂ ಅಣಜಿ ವ್ಯಾಪ್ತಿಯಲ್ಲಿ ಶೈವ ಧರ್ಮದ ಆಸ್ಥಿತ್ವವನ್ನು ಉಳಿಸಿಕೊಂಡು ಬಂದಿದೆ. ಆಚಾರ – ವಿಚಾರಗಳನ್ನು ಮುಂದುವರೆಸಿಕೊಂಡು ಬರುತ್ತಿದೆ. ಇದಕ್ಕೆ ಸಾಕ್ಷಿಗಳೆಂಬಂತೆ ಈಗಲೂ ಇಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳು ಗದ್ದಿಗೆಗಳು ಕಂಡುಬರುತ್ತವೆ.[೨]

## ವೈಷ್ಣವ ಧರ್ಮ

ವೈಷ್ಣವ ಧರ್ಮವು ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ಅನವಷ್ಟೆ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸವುಂಟು ವೇದಗಳಲ್ಲಿ ವಿಷ್ಣುವು ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನು ಅಲ್ಲ ಅವನು ತನ್ನ ಮೂರು ಹೆಜ್ಜೆಗಳಿಂದ ಲೋಕ ಸಮಸ್ತವನ್ನೇ ಅಳೆಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ಬಣ್ಣಿಸಲಾಗಿದೆ. ಅವನ ಎರಡು ಹೆಜ್ಜೆಗಳಿಂದ ಲೋಕ ಸಮಸ್ತವನ್ನೇ ಅಳೆಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ಬಣ್ಣಿಸಲಾಗಿದೆ. ಅವನ ಎರಡು ಹೆಜ್ಜೆಗಳನ್ನು ಮರ್ತ್ಯರು ಕಾಣಬಹುದು. ಮೂರನೆಯದನ್ನು ಮಾತ್ರ ಯಾರೂ ಕಾಣಲಾರರು. ವೈಷ್ಣವ ಧರ್ಮ ದಕ್ಷಿಣ ಭಾರತದಲ್ಲಿ ಕ್ರಿ.ಪೂ. ದಲ್ಲೆ ಇದ್ದಿತ್ತು ಎಂಬುದರ ಬಗ್ಗೆ ನಾನಾಘಾಟ್ ಶಾಸನ ಉತ್ತಮ ನಿದರ್ಶನವಾಗಿದೆ. ಉಪನಿಷತ್ತು, ಮಹಾಭಾರತ, ಭಗವದ್ಗೀತೆ, ಪಾಣಿನಿಯ, ಅಷ್ಟಾಧ್ಯಾಯಿ, ಕಾಳಿದಾಸನ ಶಾಕುಂತಲ ಮೊದಲಾದ ಗ್ರಂಥಗಳಲ್ಲಿ ಹಾಗೂ ಸಮಕಾಲೀನ ಶಾಸನಗಳಲ್ಲಿ ವಿಷ್ಣುವಿನ ವಿವಿಧ ಹೆಸರುಗಳು ರೂಪಗಳು ಅವತಾರಗಳು ಈ ಧರ್ಮಕ್ಕೆ ಭಾಗವತ ವೈಷ್ಣವ ಎಂಬ ಶಬ್ದಗಳು ದೊರೆತಿವೆ. ಇವುಗಳಲ್ಲದೆ ದೇವತೆಗಳೊಂದಿಗೆ ಮಾಡಿದ ಸಮೀಕರಣ ಸಿದ್ಧಾಂತ ಆಚಾರ – ವಿಚಾರ ಮೊದಲಾದ ವಸ್ತು ವಿಚಾರಗಳು ಪ್ರಸ್ತಾಪವಾಗಿವೆ.

ಜ್ಞಾನಿಗಳು ವಿಷ್ಣುವಿನ ಅತ್ಯುನ್ನತ ಲೋಕವನ್ನು (ಪರಮಂಪದಂ) ಕಾಣಬಲ್ಲರು. ವಿಷ್ಣುವಿನ ಈ ಅತ್ಯುನ್ನತ ಲೋಕದಲ್ಲಿ ಒಂದು ಜೇನಿನ ಬಾವಿಯಿದೆ. ಅಲ್ಲಿ ದೇವತೆಗಳೆಲ್ಲರೂ ರಮಿಸುವರು. ಇವೇ ಮೊದಲಾದ ಉಕ್ತಿಗಳನ್ನು ನೋಡಿದರೆ ವಿಷ್ಣುವಿಗೆ ಋಗ್ವೇದದಲ್ಲಿ ಗೌರವದ ಸ್ಥಾನವಿದೆಯೆಂದು ಭಾವಿಸಬೇಕಾಗುತ್ತದೆ.

ಬ್ರಾಹ್ಮಣಗಳ ಕಾಲದಲ್ಲಿ ಅವನ ಪ್ರಾಧಾನ್ಯವು ಹೆಚ್ಚಾಗುತ್ತಾ ಹೋಯಿತು. ದೇವತೆಗಳಲ್ಲೆಲ್ಲಾ ವಿಷ್ಣುವೇ ವರಿಷ್ಠದೇವತೆಯೆಂದು ಅಗ್ನಿಯೇ ಕನಿಷ್ಠ ದೇವತೆಯೆಂದು ಐತ್ತರೇಯ ಬ್ರಾಹ್ಮಣವು ಬಣ್ಣಿಸಿದೆ. ಅದೇ ಬ್ರಾಹ್ಮಣದಲ್ಲಿ ಅರಸರು ವಿರುದ್ದ ಹೋರಾಡಲು ದೇವತೆಗಳಿಗೆ ಸಹಾಯ ಮಾಡುವವನು ವಿಷ್ಣು ಎಂದು ಹೇಳಿದೆ.

ಇತಿಹಾಸ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮದೇವತೆಯಾಗಿ ಪರಿಣಮಿಸಿದನು, ವಿಷ್ಣುವನ್ನೇ ಆರಾಧ್ಯದೈವವಾಗುಳ್ಳ ಈ ವೈಷ್ಣವ ಧರ್ಮದ ಸ್ವರೂಪವನ್ನು ಸಂಗ್ರಹವಾಗಿ ಹೀಗೆ ಹೇಳಬಹುದು. "ಭಗವಂತನು ಸುಗುಣನೆಂದು ಭಾವಿಸಿ ಅವನ ಪ್ರತಿಕೋಪಾಸನೆಯನ್ನು ಮಾಡುವುದು ಇದರ ಮುಖ್ಯ ಲಕ್ಷಣ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕ ದೇವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಈ ಇಷ್ಟದೈವದ ಪ್ರಸಾದ ಅಥವಾ ಕರುಣೆಗಾಗಿ ತನ್ನನ್ನು ತಾನು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು ವಿಷ್ಣುವಿಗಿಂತ ಕೆಳಮಟ್ಟದಲ್ಲಿದ್ದರೂ ಬೇರೆ ಬೇರೆ ಸಾಮಾರ್ಥ್ಯಗಳನ್ನು ಪಡೆದು ಭಿನ್ನ ಭಿನ್ನ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಭಗವಂತನು ಈ ಲೋಕವನ್ನು ಸೃಷ್ಟಿಸಿರುವಂತೆಯೇ ಅದರ ಉದ್ಧಾರಕ್ಕಾಗಿ ಆಗಾಗ ಅವತಾರಿಸುತ್ತಾನೆಂದು ಅದು ನಂಬುತ್ತದೆ. ಮೋಕ್ಷದಲ್ಲಿ ಬೇರೆ ಬೇರೆ ಹಂತಗಳುಂಟೆಂದು ಭೌಧ್ಧಿಕವಾದ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವಧರ್ಮವು ಒತ್ತಿ ಹೇಳುತ್ತದೆ.[೧೩]

ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು ವೈಷ್ಣವಧರ್ಮದ ಪ್ರಪ್ರಥಮ ಆಕಾರವಾಗಿದೆ. ಈ ನಾಡನ್ನಾಳಿದಂತಹ ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ಮೊದಲಾದ ರಾಜ ಮನೆತನಗಳು ವೈಷ್ಣವ ಧರ್ಮದ ಬೆಳವಣಿಗೆಗೆ ಶ್ರಮಿಸಿದಂತಹ ವಿಚಾರ ಶಾಸನ ಆಧಾರಗಳಿಂದ ತಿಳಿದು ಬರುತ್ತದೆ. ಈ ನಾಡಿನಲ್ಲಿ ಭಾಗವತ ಪಂಥದ ಶ್ರೀ ವೈಷ್ಣವ ಧರ್ಮ ಕ್ರಿ.ಶ.೧೧ನೇ ಶತಮಾನದಿಂದೀಚೆಗೆ ರಾಮಾನುಜಾಚಾರ್ಯರು ಪ್ರಸಾರ ಕೈಗೊಂಡರು ತದನಂತರವಾಗಿ ಹರಿದಾಸರ ಪರಂಪರೆಯ ಮೂಲಕ ಮುಂದುರೆಸಿದರು. ಕ್ರಿ.ಶ. ಪ್ರಾರಂಭದಿಂದ ೧೨ನೇ ಶತಮಾನದವರೆವಿಗೂ ಶೈವ ಮತ್ತು ವೈಷ್ಣವ ಧರ್ಮಗಳು ಪರಸ್ಪರ ಸಾಮರಸ್ಯದಿಂದ ಬೆಳೆದು ಬಂದಿವೆ. ಧರ್ಮದ ಪ್ರಚಾರ ಮತ್ತು ಬೆಳವಣಿಗೆಯ ಪ್ರಸ್ತುತ ಅಧ್ಯಯನವಾದ ಅಣಜಿ ಸುತ್ತಮುತ್ತಲಿನ ಪರಿಸರಕ್ಕೆ ಸೀಮಿತ ಪಡಿಸಿಕೊಂಡು ಪ್ರಸ್ತಾಪಿಸಲಾಗಿದೆ.

ಪ್ರಸ್ತುತ ಅಣಜಿ ಪರಿಸರದಲ್ಲಿಯೂ ವೈಷ್ಣವ ಧರ್ಮ ಪ್ರಚಾರವಿದ್ದೂ ಹಲವಾರು ದೇವಾಲಯಗಳು ಶಾಸನಗಳು, ವೈಷ್ಣವ ಧರ್ಮಕ್ಕೆ ಸಂಬಂದಿಸಿದಂತೆ ಪೂರಕವಾದ ಮಾಹಿತಿಗಳನ್ನು ನೀಡುತ್ತವೆ. ಈ ಪ್ರದೇಶದಲ್ಲಿ ಹಲವಾರು ರಾಜಮನೆತನಗಳು ಆಳ್ವಿಕೆ ಮಾಡಿದ್ದು ಇವರು ವೈಷ್ಣವ ಧರ್ಮದ ಏಳಿಗೆಗೆ ಶ್ರಮಿಸಿದ್ದರು. ದಾನ ದತ್ತಿಗಳು ನೀಡಿದ ಬಗ್ಗೆ ಮಾಹಿತಿಯನ್ನು ತಿಳಿಯಬಹುದಾಗಿದೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಹಲವು ದೇವಾಲಯಗಳು ಇವೆ.

ಅಣಜಿಯು ಕದಂಬರ ತರುವಾಯ ಗಂಗರು ಬಾದಾಮಿ ಚಾಲುಕ್ಯರ ಆಳ್ವಿಕೆಗೊಳಪಟ್ಟಿದೆ ಎಂದು ಗುರುತಿಸಿಕೊಂಡಿತು. ಹದಡಿ ಶಾಸನದ ಪ್ರಕಾರ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ದಾವಣಗೆರೆ ಪ್ರದೇಶ ಸೇರಿತ್ತು. ಕಳಚೂರಿ ಬಿಜ್ಜಳನಿಗೂ ಅಣಜಿ ಸೇರಿ ಹೋಗಿತ್ತು ಕ್ರಿ.ಶ.೧೧೭೩ರಲ್ಲಿ ಚೋಳರಿಗೂ ಮತ್ತು ಹೊಯ್ಸಳ ಇಮ್ಮಡಿ ಬಲ್ಲಾಳರಾಯನಿಗೆ ಉಚ್ಚಂಗಿಯಲ್ಲಿ ಯುದ್ಧ ನಡೆದು ಬಲ್ಲಾಳ ಜಯಗಳಿಸಿದ ಕ್ರಿ.ಶ.೧೧೮೨ರ ಶಾಸನವು ಅಣಜಿಯ ಅಗ್ನೆಯಕ್ಕಿರುವ ಕೆರೆ ಹೊನ್ನಮ್ಮನ ದೇವಾಲಯದಲ್ಲಿದೆ. ಇದರಲ್ಲಿ ಹಿಮ್ಮಡಿ ದೇವರಸರ ಕಾಲದ ಕುಮಾರ ವಿಠ್ಠಲ ದೇವರಸನು ಸೋಮನಾಥ ದೇವರಿಗೆ ಅಣಜಿಯೆಂಬ ಅಗ್ರಹಾರವನ್ನೂ ದಾನವಾಗಿ ನೀಡಿದ ಉಲ್ಲೇಖವಿದೆ. ಮಧ್ಯಕಾಲದಲ್ಲಿ ಅಣಜಿ ಅಗ್ರಹಾರವಾಗಿತ್ತೆಂಬುದು ನಿಜ.[೧೪]

ಉದಾಹರಣೆಯಾಗಿ ಕಾಡಜ್ಜಿ ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ರಾಂಪುರ ಕ್ರಾಸಿನಿಂದ ೩ ಮೈಲಿ ದೂರದಲ್ಲಿರುವ ಶಾಸನಸ್ತ್ರ ಗ್ರಾಮವಾಗಿದೆ. ಇದು ಅಣಜಿ ೨೦-೨೫ ಕೀ.ಮೀ ದೂರ ದಲ್ಲಿರುವಂತಹದಾಗಿದೆ.

ಕಾಡಜ್ಜಿಯ ಆಂಜನೇಯ ದೇವಸ್ಥಾನದ ಶಾಸನದಿಂದ ಸಮಸ್ತ ಭುವನಾಧೀಶ್ವರನಾದ, ದೇವಾಧೀದೇವ ಪರಮೇಶ್ವರನಾದ. ಶೈವ-ವೈಷ್ಣವ ಭೇದವನ್ನು ತೊಡೆದುಹಾಕಿದ ಸ್ವರ್ಗ, ಮರ್ತ್ಯ ಪಾತಳ-ತ್ರಿಭುವನ ಪೂಜಿತನಾದ ಭಕ್ತಜನರ ಅಭಿಷ್ಟವನ್ನು ನೆರವೇರಿಸುವಂಥಗುಹಾರಣ್ಯವೆಂಬ ಪುಣ್ಯಕ್ಷೇತ್ರದ ಅಭಯ ನೀಡುವವನಾದ ಹರಿಹರದೇವರಿಗೆ ವಿಜಯನಗರದ ಸದಾಶಿವರಾಯನಿಗೆ ಸಾಮಂತನಾದ ಹಡಪದ ಸಿಂಧುಗೋವಿಂದ ಶಿತಕಾರಗಂಡದವಳಂಕ ಭೀಮಮಣಿ ಶ್ರೀ ಕೃಷ್ಣಪ್ಪನಾಯಕರು ಕ್ರಿ.ಶ ೧೫೬೧ (ಕ್ರಿ.ಶ.೧೪೮೩) ದುರ್ಮಿತಿ ಸಂವತ್ಸರದ ಮಾರ್ಗರಶಿದ್ವಾದಶಿ ಪುಣ್ಯಕಾಲದಲ್ಲಿ ತಮ್ಮ ತಂದೆ ತಾಯಿ ಬೈಯಚಪ್ಪನಾಯಕರಿಗೂ ಕೊಂಡಮ್ಮನಿಗೂೊಳಿತಾಗಲೆಂದು ಬಿಳಿಚೋಡುಸೀಮೆಗೆ ಸೇರಿದ ಕಾಡಜ್ಜಿ ಗ್ರಾಮವನ್ನು ಹರಿಹರದೇವರ ನೈವೇದ್ಯಾ ತುಪ್ಪ ಮುಂತಾದವುಗಳಿಗೆ ಉಂಬಳಿ ಹಾಕಿ ಕೊಟ್ಟರೆಂದು ಉಲ್ಲೇಖವಿದೆ.

ಕಾಡಜ್ಜಿ ಗ್ರಾಮದ ಕೆರೆ ಏರಿಯಮೇಲಿದ್ದ ಒಂದು ಶಾಸನವನ್ನು ತಿಪ್ಪಯ್ಯ ಎನ್ನುವವರಿಂದ ಬರೆಸಲಾಗಿದೆ. ಈ ಶಾಸನ

" ಶ್ರೀ ಕನ್ನರದೇವ ರಾಜ್ಯ ಮುತ್ತರೋತ್ತರಂ
ಸಲ್ಲುತ್ತಿರೆ ಮಯ್ದಮರಸರ ಸೊಳೆ ಕಾಡಜ್ಜಿ
ಕಾಡಚ್ಚಿಯ ಮಗಳ್ ಕಾಡಬ್ಬೆ ಕಾಡಬ್ಬೆ ಮಗಳ್
ಆಯ್ಯಬ್ಬೆ ಆಯ್ಯಬ್ಬೆಯ ಮಗಳ್ ಕಳಿಂಗಬ್ಬೆ ಕಳಿಂ
ಗಬ್ಬೆಗಳಯ್ಯ ಪಲ್ಲಹಾರಡಿ ಪರಕೀಯ ಮಗಳ್
ಕಳಿಂಗಬ್ಬೆ ಕಳಿಂಗಬ್ಬೆಯ ಮಗಾಪರಕಯ್ಯಂ

ನಿಮ್ತು (ಇಂತು) ಪಾರಂಪರ್ಯ, ಮುಟ್ಟಮಯ್ಯಗೆ

ಪಾಕಯ್ಯಂ ಕೊಟ್ಟ ಭೂಮಿ – ಪನ್ನೀರ್ವರ ಅರಸಿನ ಸಾನಿಷ್ಟಿತದೊಳ್

ಕಾಲಂಕರ್ಬೇ ಕೊಟ್ಟಭೂಮಿ – ಎರಡು ಖಂಡುಗ ಬೆಳೆವ ಗೆದ್ದ ಐಯ್ನೂರು ಎಲೆಬಳ್ಳಿಯ ತೋಟ

ಈ ದಾನ ನೀಡಿದ ಕಾಲ ಕ್ರಿ.ಶ. ೮೯ನೇ ಕೀಲಕನಾಮ ಸಂವತ್ಸರ ಮಾಘ ಶುದ್ಧ ಸೋಮವಾರದ ದಿನ ಈ ಶಾಸನದಿಂದ ಕಾಡಚ್ಚಿಯಿಂದಲೇ ಈ ಗ್ರಾಮಕ್ಕೆ ಕಾಡಜ್ಜಿ ಎಂದೇ ಹೆಸರಾಗಿದೆ ಮತ್ತು ಆಗಿನ ಕಾಲದಲ್ಲಿ ವೇಶಾವೃತ್ತಿಯೂ ಶ್ರೇಷ್ಠವೆಂದು ಪರಿಗಣಿಸಲಾಗಿದು ವಂಶಪಾರಂಪರ್ಯವಾಗಿ ವೇಶಾವೃತ್ತಿಯನ್ನು ನಡೆಸುತ್ತಿದ್ದರೂ ಅವರು ಸಾಮಾಜಿಕ ಜೀವನದಲ್ಲಿ ದಾನ – ಧರ್ಮ ಮಾಡಿ ಒಳ್ಳೆಯ ಕೆಲಸ ಮಾಡಬಹುದಿತ್ತು ಎನ್ನುವುದನ್ನು ತಿಳಿಯಬಹುದಾಗಿದೆ.೧೪

**ಜೈನಧರ್ಮ**

ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕ ಜೈನಧರ್ಮ ಇತಿಹಾಸವೇ ಆಗಿದೆ. ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲ ಧರ್ಮವಾಗಿತ್ತು. ಕ್ರಿ.ಪೂ. ಕರ್ನಾಟಕವು ಪ್ರಾಚೀನ ಕಾಲದಿಂದ ಜೈನಧರ್ಮದ ವಾಸಸ್ಥಾನವಾಗಿದ್ದು ಕರ್ನಾಟಕ ಪ್ರಸಿದ್ದ ಅರಸು ಮನೆತನಗಳಾದ ಕದಂಬರು ಗಂಗರು ಬಾದಾಮಿ ಚಾಲುಕ್ಯ ಹಾಗೂ ರಾಷ್ಟಕೂಟ ಆಡಳಿತ ಅವಧಿಯಲ್ಲಿ ಜೈನಧರ್ಮ ಮೇಲುಗೈ ಸಾಧಿಸಿತು. ನಂತರ ಬಂದ ಕಲ್ಯಾಣಿ ಚಾಲುಕ್ಯ ಹಾಗೂ ಹೊಯ್ಸಳರು ಜೈನಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದರು.

ಕ್ರಿ.ಪೂ.೩ನೇ ಶತಮಾನದಲ್ಲಿಯೇ ಜೈನಧರ್ಮವು ದಕ್ಷಿಣ ಭಾರತದಲ್ಲಿ ಪ್ರವೇಶ ಮಾಡಿದರು. ಕರ್ನಾಟಕದಲ್ಲಿ ವರ್ಧಮಾನ ಮಹಾವೀರ ಕ್ರಿ.ಶ. ೫೪೦ರ ಅವಧಿಯ ಸುಮಾರಿಗೆ ಈ ಧರ್ಮ ಶ್ರೀಮಂತವಾಗಿ ಬೆಳೆಯಿತು. ವರ್ಧಮಾನ ಮಹಾವೀರ ಈ ಧರ್ಮದ ಸ್ಥಾಪಕನಾದನು. ಆದರೆ ಐತಿಹಾಸಿಕವಾಗಿ ಈತನೇ ಮೂಲಪುರುಷನಾಗಿದ್ದು ಜೈನ ಧರ್ಮಗ್ರಂಥಗಳ ಹಾಗೂ ನಂಬಿಕೆಗಳ ಪ್ರಕಾರ ಮಹಾವೀರನು ೨೪ನೇ ತೀರ್ಥಂಕರರು ಅದಕ್ಕೂ ಮೊದಲು ಆಗಿಹೋದ ೨೩ ಜನ ತೀರ್ಥಂಕರರು ಜೈನಧರ್ಮವನ್ನು ಪ್ರತಿಪಾದಿಸಿದರೆಂದು ೨೨ನೇ ತೀರ್ಥಂಕರರನ್ನು ಭಾಗವತದಲ್ಲಿ ಶ್ರೀ ಕೃಷ್ಣನ ಸಮಕಾಲೀನರೆಂದು ಹೇಳಲಾಗಿದೆ. ರಾಜ ಪುತ್ರರಾಗಿ ಜನಿಸಿದ ಮಹಾವೀರನು ತನ್ನ ವೈಭವಗಳನ್ನೇಲ್ಲಾ ತ್ಯಜಿಸಿ ತೀರ್ಥಂಕರಾದದ್ದು ಒಂದು ಅದ್ಭುತ ತ್ಯಾಗ ಎನ್ನಬಹುದು.

ಕ್ರಿ.ಶ. ೧೨೮೦ ರಲ್ಲಿ ಬೇತೂರಿನ ಸಾಮಂತಧಿಪತಿಯಾಗಿದ್ದ ಚಾವುಂಡರಸನು ಆನೆಯ ಗುಡ್ಡದ ಪಾಳೆಯಗಾರಾನಾಗಿದ್ದ ಮುಮ್ಮಡಿಸಿಂಗನ ಅಭೇದ್ಯವಾದ ದೊರೆವಾಡಿ ಕೋಟೆ ಮುತ್ತಿಗೆಹಾಕಿದಾಗ ಸಿಂಗನಿಗೆ ಜಯವಾಯ್ತು. ಈ ಮುಮ್ಮಡಿ ಸಿಂಗನು ತುಮಕೂರು ಜಿಲ್ಲೆಯ ನಿಡುಗಲ್ಲುರಾಜನಿಗೆ ಆಶ್ರಿತನಾಗಿ ತುಂಗಭದ್ರಾ ಮತ್ತು ವೇದಾವತಿ ನದಿಗಳ ಮಧ್ಯೆ ಬೇಡ ಜನಾಂಗಕ್ಕೆ ಅಧಿಪತಿಯಾಗಿದ್ದು.

ಸಣ್ಣರಾಜ್ಯಕ್ಕೆ ಒಡೆಯನಾಗಿದ್ದ ಮಹಾಪರಾಕ್ರಮಿ ಈ ಸಿಂಗನ ರಾಜ್ಯಸ್ಥಾಪನೆ ಮಾಡಿದವನು ಕಸ್ತೂರಿನಾಯಕನೆನ್ನುವ ಮೂಲ ಪುರುಷ.

ಚಾವುಂಡರಸನ ಸೋದರ ವಣದೇವರಸ ಈತ ಸಹ ಅಣ್ಣನ ಪರವಾಗಿ ಮುಮ್ಮಡಿಸಿಂಗನೊಡನೆ ಯುದ್ಧಮಾಡಿ ಕ್ರಿ.ಶ.೨೫೩-೧೨೮೨ರಲ್ಲಿ ಮರಣ ಹೊಂದಿದ್ದ ನಂತರ ಕ್ರಿ.ಶ. ೧೨೮೨ರಲ್ಲಿ ಈ ಪ್ರದೇಶವನ್ನು ಹೊಯ್ಸಳರು ವಶಪಡಿಸಿಕೊಂಡರು ಗ್ರಾಮದ ಪೂರ್ವದಿಕ್ಕಿನಲ್ಲಿ ಸರ್ಪದ ದಿಬ್ಬ ಎನ್ನುವ ಸ್ಥಳವಿದೆ. ಇಲ್ಲಿಯ ಒಂದು ಶಾಸನದಲ್ಲಿ ಚಾಳುಕ್ಯರ ಪ್ರಭುವನ ಮಲ್ಲಿದೇವನು ರಾಜ್ಯವಾಳುತ್ತಿರುವಾಗ ಇವನ ಮಹಾಸಾಮಂತನಾದ ಬ್ರಮ್ಮರಸನು ನೊಳಂಬವಾಡಿಯನ್ನು ಆಳುತ್ತಿರುವಾಗ ಇವನು ಪ್ರಚಂಡ ದಂಡನಾಯಕನಾಗಿದ್ದು ಇವನ ಕೊಗಳಿನಾಡಿನ ಕದಂಬಳಿಗೆ ಸಾವಿರವನ್ನು ಆಳುತ್ತಾ ಜಿನಾಲಯ ದೇಗುಲಕ್ಕೆ ಬಾವಿಗಳನ್ನು ಮಾಡಿಸುತ್ತಾ ತನ್ನ ಅಧಿಕಾರದ ವ್ಯಾಪ್ತಿಯಲ್ಲಿ ಬರತಕ್ಕ ಬೇತೂರಿನ ಗಿರಿಜಾತವಜೆಶಂಗೆ ಸರ್ಪೇಸ್ವರದೇವರ ರಂಗಭೋಗ ಅರ್ಚನ ನೈವೇದ್ಯೆ ದೀಪಕ್ಕೆಂದು ಚಾಳುಕ್ಯವಿಕ್ರಮ ೩೩ನೇ ಸರ್ವಧಾರಿ ಸಂವತ್ಸರದ ಶುದ್ಧ ಪಂಚಮಿ ಬಿಹವಾರವೆಂದು ಎತ್ತಾರಾಯನು ಸಂಕ್ರಮಣ ವೃತ್ತಿ ಪಾತ ನಿಮಿತ್ಯವಾಗಿ ತನ್ನ ಪನ್ನಾಯದ ಸುಂಕದಲ್ಲಿ ತಿಂಗಳಿಗೆ ಐದು ಪಣವನ್ನು ಪರಮೇಶ್ವರ ದತ್ತಿಯಾಗಿ ನೀಲಕಂಠ ಪಂಡಿತರ ಕಾಲು ಮುಗಿದು ಬಿಟ್ಟುಕೊಡುತ್ತಾನೆ. ಈ ಬ್ರಮ್ಮರಸನು ಗುಣದಲ್ಲಿ ರತ್ನದ ಆಗರವೆಂದು ಉಲ್ಲೇಖವಿದೆ.

ಬಹಳ ಹಿಂದಿನಿಂದಲೂ ಬೇತೂರಿನಲ್ಲಿ ಜೈನಮತ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ರೇವಣಸಿದ್ದೇಶ್ವರ ಮತ್ತು ಸಮಗದ್ದುಗೆ ಸಂಗಮೇಶ್ವರನ ದೇವಾಲಯದ ಹಿಂಭಾಗದಲ್ಲಿ ನೆಲ ಆಗೆದಾಗ ಮೂರು ಮೂರುವರೆ ಅಡಿ ಎತ್ತರದ ಮೂರು ತೀರ್ಥಂಕರರ ವಿಗ್ರಹಗಳು ದೊರೆತಿವೆ. ಬಹಳ ಸುಂದರವಾದ ವಿಗ್ರಹಗಳು (ಇಲ್ಲಿಯ ಒಂದು ದೇವಾಸ್ಥಾನಕ್ಕೆ ಜೈನ ಬಸದಿ ಎಂದು ಅಭಿಪ್ರಾಯಪಡುತ್ತಾರೆ) ಈ ಮೂರು ವಿಗ್ರಹಗಳನ್ನು ಬಯಲಿನ ಒಂದು ಜಗುಲಿಯ ಮೇಲಿರಿಸಿದ್ದಾರೆ. ಮಾರಮ್ಮನ ದೇವಾಲಯದ ಬಳಿ ಇರುವ ಕಲ್ಲಿನ ಸುಂದರ ಪೀಠಕ್ಕೆ ಧರ್ಮಚಕ್ರ ಎಂದು ಹೇಳುತ್ತಾರೆ. ಇಲ್ಲಿ ಆಳಿದ ಚಾವುಂಡರಸನು ಜೈನ ಮತದವನು ಆಗಿದ್ದಾನೆ.[೧೫]

ಈ ಗ್ರಾಮದಲ್ಲಿ ಸಿದ್ದೇಶ್ವರ ದೇವಾಲಯ (ಈಗಿನ ರೇವಣ ಸಿದ್ದೇಶ್ವರ ದೇವಾಲಯವೇ ಇರಬೇಕು) ಎಂದು ಇದರ ಬಳಿ ಇದ್ದ ಶಾಸನದಲ್ಲಿ ರಾಜರನ್ನು ಅತ್ಯಂತ ವೈಭವದಿಂದ ಹೊಗಳಲಾಗಿದ್ದು ಈ ಪ್ರದೇಶವನ್ನಾಳಿದ ಕೂಚರಾಜ ಅವನ ಗುರು ಶ್ರೀ ಮಜ್ಜಿನಭಟ್ಟಾರೆ ದೇವರು ವೀರಸೇನ ಜೀನಸೇನಾಚಾರ್ಯ, ಜೀನಸೇನಾಯೋಗಿ, ಮಂತ್ರದಿಂದೇವೆಂದ್ರ ಸುತ್ತಜೈನಮಾರ್ಗತಪದಿ ಪದ್ಮಸೇನಯತಿನಾಥ ಕೃಪಾರ್ಥವೆಂದು ಚಟ್ಟನೃಪತಿ ಕೂಚರಾಜದಂಡೇಶನ ಮುಂತಾದವರ ವರ್ಣನೆ ಬರುತ್ತದೆ. ಇದೇ ಶಾಸನದಲ್ಲಿ ಬೇತೂರಿನ ವರ್ಣನೆಯಿದೆ.

"ಪಾಂಡ್ಯದೇಶ ಮಧ್ಯಧ್ಯಸಿತಮದ ಬೇತೂರು ಚಲುವೆಂತನೆ ನಿರುಪಮ ದೇವಾಗಾರಂ ಸುರಚಿತ ಮೆನಿಸಿರ್ದ ವಿಪಣಗಣಿಕಾವಾಟಂ ಕರಮೆ ಸೇವಾ ಪ್ರಕಾರಂ ಪರಿದೆಸೆದಾದ್ಯಾನದಿಂದೆ ಬೇತೂರುರೆಸೆಗುಂ"

ಮತ್ತಮಾ ಬೇತೂರು ಮನೆಯರ ಸೆಟ್ಟಿಗುಸ್ತರ ಗೌಡುಗಳು ಊರೋಡೆಯರ ಮಹೋನ್ನತಿಯಂತಿನೆ" ಎಂದು ಶಾಸನದಲ್ಲಿ ಸುಂದರವಾಗಿ ವರ್ಣಿಸಲಾಗಿದೆ. ಇಂತಹ ಬೇತೂರಿನ ಪ್ರಭೃತಿಗಳಾದ ಕೂಚರಾಜನು ಆಳುತ್ತಿರುವಾಗ ಅವನ ಪತ್ನಿ ಸರ್ವಾಂಗಲಕ್ಷ್ಮಿ ಸ್ವರ್ಗಸ್ಥಳಾದಾಗ ಆಕೆಯ ಜ್ಞಾಪಕಾರ್ಥವಾಗಿ ಪದ್ಮಸೇನಭಟ್ಟಾರಕರ ಉಪದೇಶದಂತೆ ಲಕ್ಷ್ಮಿಜಿನಾಲಯವನ್ನು ಕಟ್ಟಿಸುತ್ತಾನೆ.

ಪ್ರಭಾವತಿ ಸಂವತ್ಸರದಲ್ಲಿ ಶ್ರೀ ವೀರಮಹಾದೇವಾಲಯ ಪ್ರಶಸ್ತಹಸ್ತದಿಂ ಬಾಡಾಗ್ರಾಮವನ್ನು ಅಗ್ರಾಹಾರವಾಗಿ ಹುಣಿಸೆಹಳ್ಳಿ ಗ್ರಾಮವನ್ನು ಹಾಗೂ ೧೨ ಹೊನ್ನನ್ನು ಪುಣ್ಯತಿಥಿಯೆಂದು ಶ್ರೀಪದ್ಮ ಸೇನಾಭಟ್ಟರಕರು ಪಾದ ಪೂಜೆಯ ಮೂಲಕ ಪಡೆದು ಶ್ರೀಪಾರ್ಶ್ವನಾಥ ದೇವರಿಗೆ ಒಪ್ಪಿಸಿ ಈ ಶಾಸನ ಮೂಡಿರುತ್ತಾರೆ. ಈ ಎಲ್ಲಾ ವಿಚಾರಗಳನ್ನು ಗಮನಿಸಿದರೆ ಈ ಪ್ರದೇಶದಲ್ಲಿ ಜೈನಮತ ಪ್ರಚಾರದಲ್ಲಿತ್ತು ಎಂದು ತಿಳಿಯಬಹುದು. ಈ ಧರ್ಮ ವಿಜಯನಗರ ಕಾಲಕ್ಕೆ ಕ್ಷೀಣಿಸುತ್ತಾ ಬಂದಿದ್ದು ಜೈನಧರ್ಮಿಯರು ಜೈನಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಲು ಪ್ರಯತ್ನಿಸಿದರು, ಈ ಕಾಲದಲ್ಲಿ ಸಾಹಿತಿಗಳು ಪಂಡಿತರು ದಂಡನಾಯಕರುಗಳು ಜೈನಧರ್ಮಿಯರಾಗಿದ್ದರು.

ಇರುಗಪ್ಪ ದಂಡನಾಯಕ ಮಧುರ ನೇಮಿಚಂದ್ರ ಮತ್ತು ವಿದ್ಯಾಧರ ಮುಂತಾದ ಜೈನ ಕವಿಗಳು ಜೈನ ಸಾಹಿತ್ಯವನ್ನು ಮುಂದಿನ ಪೀಳಿಗೆಗೆ ಕೊಂಡೊಯ್ದರೂ ಇವರುಗಳಿಂದ ಜೈನ ಸಾಹಿತ್ಯ ಧರ್ಮ ಹೆಚ್ಚು ಬೆಳೆಯಿತು. ಪ್ರಸ್ತುತ ಅಧ್ಯಯನದ ಅಣಜಿ ಪ್ರದೇಶದ ಸುತ್ತಮುತ್ತಲಿನಲ್ಲಿ ಜೈನಧರ್ಮ ಪ್ರಭಾವ, ಪ್ರಚಾರ ಇದ್ದು ಜೈನಧರ್ಮದ ಹಲವು ಶಾಸನಗಳು, ಶಿಲ್ಪಗಳು, ದೇವಾಲಯಗಳ ಕುರುಹುಗಳು ದೊರೆತಿವೆ ಎಂದು ಹೇಳಬಹುದು.

ಅಣಜಿಯಲ್ಲಿ ಕಂಡು ಬರುವಂತಹ ಜೈನ ಧರ್ಮದವರ ಬಗ್ಗೆ ಒಂದು ಶಾಸನದಲ್ಲಿ ಉಲ್ಲೇಖವಿದೆ. ಕ್ರಿ.ಶ. ೧೫೭೮ರಲ್ಲಿ ಅಣಜಿಯ ಮಾಚಪ್ಪ ದೇವರಮಠಕ್ಕೆ ದತ್ತಿಬಿಟ್ಟು ವಿಚಾರವಿದ್ದರೂ ಈಗ ಅಣಜಿಯಲ್ಲಿ ಮಾಚಪ್ಪದೇವರ ಮಠಯಾವುದೆಂದು ತಿಳಿಯುವುದಿಲ್ಲ. ಆದರೆ ದಿಗಂಬರ ಸ್ವಾಮಿಗಳ ಮಠವಿದೆ. ಏಳುನೂರು ವರ್ಷಗಳ ಹಿಂದೆ ಸ್ವಾಮಿಗಳೊಬ್ಬರು ಹಳೆಯ ಊರಿನಲ್ಲಿದ್ದು ಶಿವ ಭಕ್ತರಾಗಿ ನಿರ್ಮಾಣದಿಂದ ಸಮಾಧಿ ಹೊಂದಿದ್ದರಿಂದ ಗುದ್ದುಗೆಯ ಮೇಲೆ ಮಠ ಕಟ್ಟಿದ್ದಾರೆ.

ತುಂಬಿಗೆರೆಯ ಶಾಸನದಲ್ಲಿ ಉಲ್ಲೇಖಗೊಂಡಿರುವಂತಹ ವಿಷಯ ಕ್ರಿ.ಶ.೧೧೨೧ರಲ್ಲಿ ದಾವಣಗೆರೆಯ ಮೂರನೇ ಶಾಸನದಲ್ಲಿ 'ಕನ್ನಂಗೌಡಗೆರೆಯ ಏಡುವಗೊಡಿಯ ತುಂಬಿನಹಳ್ಳಿಯ ಹೊಂದೋಳಗೆ ದಾವಣಗೆರ್ಯ ಸೀಮೆಯಂ' ಎಂದು ಉಲ್ಲೇಖವಿದೆ. ತುಂಬಿನಹಳ್ಳಿಯೇ ತುಂಬಿಗೆರೆಯಾಗಿರಬೇಕು. ಕ್ರಿ.ಶ.೧೮೪೪ರಲ್ಲಿ ಇದೇ ಗ್ರಾಮದಲ್ಲಿ ಜನಿಸಿದ್ದ ಶ್ರೀ ಬ್ರಹ್ಮಾನಂದರು ಮೊದಲು ಗೃಹಸ್ಥಾರಾಗಿದ್ದರು ತಮ್ಮ ಪತ್ನಿಯ ಮರಣಾನಂತರ ಕ್ಷೇತ್ರದರ್ಶನ ಮಾಡುತ್ತಾ ವೈರಾಗ್ಯನಿಧಿಯಾಗಿ ಶ್ರೀ ಗಣೇಶವಧೂತರ ಶಿಷ್ಯರಾಗಿ ನಂಜನಗೂಡಿನ ಶ್ರೀ ನಾರಾಯಣಯತಿಗಳಿಂದ ಆಶ್ರಮವಾಸಿಗಳಾಗಿ ತಮ್ಮ ಪೂರ್ವದ ಚನ್ನಪ್ಪ ಎನ್ನುವ ನಾಮದಿಂದ ಮುಕ್ತರಾಗಿ ಶ್ರೀ ಬ್ರಹ್ಮನಂದಾರಾದರು.

ಶೃಂಗೇರಿ ಶ್ರೀಗಳವರಿಂದ ಆಶೀರ್ವಾದ ಪಡೆದು ಅನೇಕ ವರ್ಷಗಳ ಕಾಲ ಹರಿಹರದಲ್ಲಿದ್ದು ೧೯೦೪ರಲ್ಲಿ ಶಿವರಾತ್ರಿಯಂದು ಶಿವಾಧೀನರಾದರು. ಈಗಲೂ ಇವರ ಸಮಾಧಿ ತುಂಬಿಗೆರೆಯಲ್ಲಿದೆ ಊರವರು ಸ್ವಾಮಿಗಳಿಗೆ ಮಠ ಕಟ್ಟಿದ್ದಾರೆ. ಶಿವರಾತ್ರಿಯಲ್ಲಿ ವಿಜೃಂಭಣೆಯಿಂದ ಸಪ್ತಾಹ ಆಚರಿಸುತ್ತಾರೆ ಈ ಗ್ರಾಮದವರು. ಕ್ರಿ.ಶ. ೧೭೧೬ ರಲ್ಲಿ ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ದ್ಯಾಮೇನಹಳ್ಳಿ ಕೊಡಗನೂರು ಸೀಮೆಯಾಗಿದ್ದಾಗ ಚಿತ್ರದುರ್ಗದ ಪಾಳೆಯಗಾರ ಶ್ರೀ ಭರಮಣ್ಣನಾಯಕನು ವ್ಯಾಸರಾಯ ಮಠದ ಶ್ರೀ ರಘುನಾಥತೀರ್ಥ ಸ್ವಾಮಿಗಳಿಗೆ ಈ ಹಳ್ಳಿಯನ್ನು ಮಾನ್ಯವಾಗಿ ನೀಡಿದರೆಂದು ಶಾಸನದಲ್ಲಿ ಉಲ್ಲೇಖವಿದೆ. ಆದ್ದರಿಂದ ಇನಾಂದಾರಿ ಗ್ರಾಮವೆಂದು ಹೇಳುತ್ತಾರೆ.[೧೬] ಪ್ರಸ್ತುತ ಅಣಜಿ ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ಶ್ರೀ ವೈಷ್ಣವ ಧರ್ಮವು ಪ್ರಚಲಿತದಲ್ಲಿತ್ತು ಎಂದು ಹಲವಾರು ದೇವಾಲಯಗಳು ಮಠಗಳು ಶಾಸನ ಆಕಾರ ಮೂಲಕ ತಿಳಿಯಲಾಗಿದೆ.

### ಆರ್ಥಿಕ ಸ್ಥಿತಿಗತಿ

ಯಾವುದೇ ಒಂದು ಪ್ರದೇಶದ ಅಭಿವೃದ್ಧಿ ಆ ದೇಶದ ಆರ್ಥಿಕ ಸಂಪತ್ತನ್ನು ಅವಲಂಬಿಸಿರುತ್ತದೆ. ಅದು ಅಲ್ಲಿಯ ನೈಸರ್ಗಿಕ ಸಂಪನ್ಮೂಲಗಳು ಜನ-ಜೀವನ ಹಾಗೂ ಮಾನವನ ದುಡಿಮೆಯ ಪರಿಶ್ರಮದ ಫಲವಾಗಿ ಆ ದೇಶದ ಬೆನ್ನೆಲುಬು ಆರ್ಥಿಕ ವ್ಯವಸ್ಥೆಯಾಗಿ ಇದು ಪ್ರಮುಖವಾಗಿ ಆರ್ಥಿಕ ಬೆಳವಣಿಗೆಯಲ್ಲಿ ಪ್ರಗತಿಯ ಹಂತವನ್ನು ತಿಳಿಯಲು ಹೆಚ್ಚಿನ ಮಹತ್ವವುಳ್ಳದ್ದಾಗಿದೆ. ಕೌಟಿಲ್ಯನು ಕ್ರಿ.ಪೂ ೩ನೇ ಶತಮಾನದಲ್ಲಿಯೇ ತನ್ನ ಕೃತಿಯಾದ 'ಅರ್ಥಶಾಸ್ತ್ರದಲ್ಲಿ' ರಾಜ್ಯದ ಆರ್ಥಿಕ ವ್ಯವಸ್ಥೆಯ ಪ್ರಾಮುಖ್ಯತೆಯನ್ನು ದೀರ್ಘವಾಗಿ ಪ್ರಾಸ್ತಾಪಿಸಿದ್ದಾನೆ. ಹೀಗಾಗಿ ಹಲವಾರು ವಿದ್ವಾಂಸರು ನಂತರದ ಕಾಲದಲ್ಲಿ ಆರ್ಥಿಕ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ.

ಹೀಗಾಗಿ ಒಂದು ದೇಶದ ಆರ್ಥಿಕ ಅಭಿವೃದ್ಧಿ ಅಲ್ಲಿ ದೊರೆಯುವ ಸಂಪನ್ಮೂಲಗಳು ಆಧರಿಸಿರುತ್ತವೆ. ಒಂದು ದೇಶದ ಆರ್ಥಿಕ ಬೆಳವಣಿಗೆಯ ವ್ಯವಸ್ಥೆಯು ಪ್ರಮುಖವಾಗಿ ಕೃಷಿಗೆ ಸಂಬಂಧಿಸಿದ ನೀರಾವರಿ ಈ ನೀರಾವರಿಗೆ ಸಂಬಂಧಪಟ್ಟಂತೆ ಕೆರೆಕಟ್ಟೆಗಳು ನಿರ್ಮಾಣ, ಬಾವಿಗಳ ಕೊರೆತ ಆ ಕಾಲದಲ್ಲಿ ಬೆಳೆಯುತ್ತಿದ್ದ ವಿಭಿನ್ನ ಬೆಳೆಗಳು ಒಂದು ಕಡೆಯಾದರೆ ಮತ್ತೊಂದು ಕಡೆ ವಾಣಿಜ್ಯೋಕರಣಕ್ಕೆ ಸಂಬಂಧಪಟ್ಟಂತೆ, ವ್ಯಾಪಾರ ಆ ಕಾಲದ ಪ್ರಮುಖ ಆರ್ಥಿಕ ಪ್ರಗತಿಯು ಒಂದು ಭಾಗವಾಗಿತ್ತು. ಇವುಗಳ ದೃಷ್ಟಿಯಿಂದ ವ್ಯಾಪಾರದಲ್ಲಿ ಸ್ಥಳೀಯ ಆಂತರಿಕ ದೇಶ ವಿದೇಶಗಳೊಂದಿಗೆ ವ್ಯಾಪರೀಕರಣದ ಹಿನ್ನೆಲೆಯಿಂದ ವ್ಯವಹಾರಗಳನ್ನು ಅಂದಿನ ಜನ ಹೊಂದಿದ್ದರು. ಪ್ರಮುಖವಾಗಿ ವ್ಯಾಪಾರೀಕರಣದ ದೃಷ್ಟಿಯಿಂದ ಅನೇಕ ಸಂಘ ಸಂಸ್ಥೆಗಳು ಸ್ಥಾಪನೆಯಾಗಿ ಈ ಅರ್ಥ ವ್ಯವಸ್ಥೆಯಲ್ಲಿ ಉಳಿದ ಕ್ಷೇತ್ರಗಳ ಸ್ಥಿತಿಗತಿಗಳು ಆರ್ಥಿಕತೆಯನ್ನು ಅವಲಂಬಿಸಿ ವ್ಯವಸ್ಥಿತಗೊಂಡಿದೆ. ಪ್ರಕೃತಿದತ್ತವಾದ ಮಣ್ಣು, ನೀರು, ಖನಿಜ, ಅರಣ್ಯ ಮುಂತಾದವುಗಳನ್ನು ನೈಸರ್ಗಿಕ ಸಂಪನ್ಮೂಲಗಳು ಎನ್ನುವರು.

ಒಂದು ನಾಡಿನ ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳನ್ನು ಬಳಸಿಕೊಳ್ಳುವ ಉಪಯೋಗಪಡಿಸಿಕೊಳ್ಳುವ ಜನರ ಪರಿಶ್ರಮದಿಂದ ಆ ನಾಡಿನ ಆರ್ಥಿಕ ವ್ಯವಸ್ಥೆಯನ್ನು ತಿಳಿದುಕೊಳ್ಳಬಹುದು. ಈ ಪ್ರದೇಶದಲ್ಲಿ ಅಧಿಕಾರ ನಡೆಸಿದ ಹಲವು ಪ್ರಮುಖ ರಾಜ ಮನೆತನಗಳಿಗೆ ಸಂಬಂಧಿಸಿದ ಶಾಸನಗಳಿಲ್ಲಿ ಅಂದಿನ ಆರ್ಥಿಕ ವ್ಯವಸ್ಥೆಯನ್ನು ತಿಳಿಯಲು ನಮಗೆ ಸಹಕಾರಿಯಾಗಿದೆ.

### ಭೂ ಸಂಪತ್ತು

ಕೃಷಿ ಪ್ರಧಾನವಾಗಿರಿಸಿಕೊಂಡು ಈ ನಾಡಿನ ಜನತೆ ಆರ್ಥಿಕ ಸುಭದ್ರತೆಗಾಗಿ ಭೂ ಸಂಪತ್ತನ್ನು ಆಶ್ರಯಿಸಿದ್ದರು. ಭೂಮಿಯನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ವಿಭಾಗಿಸಿಕೊಳ್ಳಲಾಗಿತ್ತು ಎಂದರೆ ಕೃಷಿಗೆ ಯೋಗ್ಯವಾದ ಭೂಮಿ ಬೀಳು ಭೂಮಿ, ಮತ್ತು ಖನಿಜ ಸಂಪತ್ತಿನಿಂದ ಕೂಡಿದಂತಹ ಭೂಮಿ, ಈ ರೀತಿಯಾಗಿ ವಿಭಾಗ ಮಾಡಲಾಗಿದ್ದು ಬೀಳು ಭೂಮಿ ಎಂದರೆ ಕೃಷಿಗೆ ಯೋಗ್ಯವಲ್ಲದ ಭೂಮಿ, ಬೀಳು ಭೂಮಿಯನ್ನು ಪಶುಪಾಲನೆಗಾಗಿ ಹುಲ್ಲುಗಾವಲು ಎಂದು ಉಪಯೋಗಿಸುತ್ತಿದ್ದಂತೆ ಕಾಣುತ್ತದೆ. ಈ ಪ್ರದೇಶದ ಕೃಷಿ ಯೋಗ್ಯವಾದ ಕಪ್ಪು ಕೆಂಪು ಮರಳು ಮಿಶ್ರಿತ ಕೆಂಪು ಬೂದು ವರ್ಣದ ಹಾಗೂ ಕೆಲವು ಭಾಗಗಳಲ್ಲಿ ಸವುಳು ಮಣ್ಣನ್ನು ಹೊಂದಿದ್ದು ವಿಶಾಲವಾದ ಸಮತಟ್ಟಾದ ಭೂಮಿಯಿಂದ ಕೂಡಿದೆ. ಕೆಲವು ಕಡೆಗಳಲ್ಲಿ ಇಳಿಜಾರು ಪ್ರದೇಶಗಳಲ್ಲಿ ಕೃಷಿ ಚಟುವಟಿಕೆಗಳು ನಡೆದಿವೆ, ಇಲ್ಲಿ ದೊರಕಿರುವ ಶಾಸನಗಳಲ್ಲಿ ಭೂ ದಾನವೇ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ.

ಕ್ರಿ.ಶ ೧೨ನೇ ಶತಮಾನದಲ್ಲಿ ಕಬ್ಬೂರನ್ನು ಅಗ್ರಹಾರ ಮಾಡಿಕೊಂಡು ಆರನೇ ವಿಕ್ರಮಾದಿತ್ಯನು ಮತ್ತು ತ್ರಿಭುವನಮಲ್ಲಪಾಂಡ್ಯನ ಕಾಲದಲ್ಲಿ 'ಕರ್ವೂರು' ಎಂದು ವೀರರಾಜೇಂದ್ರ ಚತುರ್ವೇದಿ ಮಂಗಲ ನಿತ್ಯವಿನೋದಿ ಚತುರ್ವೇದಿ ಮಂಗಲ ಎಂದು ಪ್ರಖ್ಯಾತವಾಗಿತ್ತು. ಮೂಲ ಕಲಿದೇವರಿಗೆ ಅಥವಾ ಕಲ್ಲೇಶ್ವರನಿಗೆ ಇಲ್ಲಿಯ ಮಹಾಜನಗಳು ಗದ್ದೆ ಭೂಮಿಯನ್ನು ದಾನ ಕೊಟ್ಟ ವಿಚಾರ ಇಲ್ಲಿಯ ಕಲ್ಲೇಶ್ವರ ದೇವಾಲಯದ ಶಾಸನದಿಂದ ತಿಳಿದುಬರುತ್ತದೆ.

ಕ್ರಿ.ಶ. ೧೯೮ರಲ್ಲಿ ಈ ಶಾಸನದಲ್ಲಿ ಕಡಲೆಬಾಳು ಗ್ರಾಮದಲ್ಲಿ ಶಿಲಾಶಾಸನದಲ್ಲಿ ಶ್ರೀ ಚಾಲುಕ್ಯ ವಿಕ್ರಮ ಕಾಲದ ೨೩ನೇ ಪ್ರಮಾಧಿ ಸಂವತ್ಸರದ ಪ್ರಥಮ ಶಾಸನ, ಕಲ್ಯಾಣದಲ್ಲಿ ೬ನೇ ವಿಕ್ರಮಾದಿತ್ಯನು ಆಳುತ್ತಿದ್ದ ಸಂದರ್ಭದಲ್ಲಿ ಈತನ ಕಾಲದಲ್ಲಿ ಈ ಗ್ರಾಮದ ಮೂಲ ಕಲಿದೇವರಿಗೆ ಭೂದಾನ ನೀಡಲಾಗಿದೆ. ಈ ದಾನವನ್ನು ಸ್ವೀಕರಿಸಿದವರು ಬಾಳ ಚಂದ್ರ ಪಂಡಿತರು ಆಗ ಸಾನ್ತಗಾವುಂಡನ ಸಮ್ಮುಖದಲ್ಲಿ ಈ ದಾನ ನೀಡಲ್ಪಟ್ಟಿದೆ. ಮತ್ತು ಹೆಮ್ಮೆನ ಬೇತೂರಿನ ಸಿದ್ದೇಶ್ವರ ದೇವಾಲಯದ ಬಳಿ ಇರುವ ಶಾಸನದಿಂದ ಕ್ರಿ.ಶ.೧೨೩೮ (೧೧೮೦)ರಲ್ಲಿ ಭಕ್ತಜನರ ಆರಾಧನೆಯಲ್ಲಿ ಕಾಶಿಗಿಂತ ಮಿಗಿಲಾದುದೆಂದು, ಜಂಗಮಾರಾಧನೆಯಲ್ಲಿ ಈ ಭೂಮಿಯಲ್ಲಿ ಮಿಗಿಲಾದುದೆಂದು ಸಾರಲ್ಪಟ್ಟಿ ಈ ಹೆಮ್ಮೆನಬೇತೂರಿನಲ್ಲಿಯಿದೆ.[೧೬]

ಕ್ಷಯಸಂವತ್ಸರದ ಚೈತ್ರಮಾಸದಲ್ಲಿ ಸೋಮವಾರದಂದು ದವನಾರೋಪಣ ಸಮಯದಲ್ಲಿ ಹೆಮ್ಮನಬೇತೂರಿನ ಪಿಂಗರಮಲ್ಲಯ್ಯದೇವರಿಗೆ ಕಲ್ಲುಗುರುಗಳ ಕಾಲ ತೊಳೆದು ಧಾರಪೂರ್ವಕವಾಗಿ ಮತ್ತು ಛತ್ರಕ್ಕೊಂದು ಹರಳೆಕಟ್ಟೆಯ ಹಿಂದೆ ಗದ್ದೆ ಅರವತ್ತಾರು ತೆಂಕಣದಕೋಡಿಯಲ್ಲಿ ಅರವತ್ತು ಎರೆ. ಗದ್ದೆ ಬೆದ್ದಲುಭೂಮಿಯಗಣಿಯನ್ನು ಈ ರೀತಿಯಾಗಿ ಭೂಮಿಯನ್ನು ದಾನ ನೀಡಲಾಗಿದೆ. ಹೆಮ್ಮನಬೇತೂರಿನ ಸಿದ್ದೇಶ್ವರ ದೇವಾಲಯದ ಬಳಿ ಇರುವ ಶಾಸನದಿಂದ ವಿಷಯವನ್ನು ತಿಳಿಯುತ್ತದೆ. ಹೀಗೆ ವ್ಯವಸಾಯವೇ ಅತಿ ಪ್ರಮುಖವಾದ ಜೀವನೋಪಾಯವಾಗಿದೆ. ತನ್ನ ಗರ್ಭದಿಂದ ಹೊರಟ ಧಾನ್ಯದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದೂ ಕರೆದಿದ್ದಾರೆ.

"ರೈತರ್ನು ಒಕ್ಕಲ ಮಕ್ಕಳೆಂದು ಶಾಸನಗಳು ಕರೆದಿವೆ" ಹಾಗೂ ಸಾಗುವಳಿ ಜಮೀನನ್ನು ದೇವಮಾತೃಕೆ ಮತ್ತು ನದಿ ಮಾತೃಕೆಗಳೆಂದು ಸ್ಥೂಲವಾಗಿ ವಿಂಗಡಿಸಬಹುದು. ಕೇವಲ ಮಳೆಯನ್ನು ಅವಲಂಬಿಸಿ ಸಾಗುವಳಿ ಮಾಡುವ ಭೂಮಿಯನ್ನು ದೇವ ಮಾತೃಕೆವೆಂದು ಕೆರೆ ಬಾವಿ ಮುಂತಾದವುಗಳನ್ನು ಆಶ್ರಯಿಸಿರುವ ಭೂಮಿಯನ್ನು ನದೀ ಮಾತೃಕೆಗಳೆಂದು ವಿಂಗಡಿಸಲಾಗಿದೆ. ಈ ರೀತಿಯಾಗಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಕುರಿತು ತಿಳಿಸಿದ್ದಾರೆ.

## ಕೃಷಿ ವ್ಯವಸ್ಥೆ

ಗ್ರಾಮೀಣ ಸೊಗಡನ್ನು ಮೈಗೂಡಿಸಿಕೊಂಡಿರುವ ಅಣಜಿ ಪರಿಸರದ ಸುತ್ತಮುತ್ತಲಿನ ಎಲ್ಲಾ ಹಳ್ಳಿಗಳು ಶೇ೮೦ ರಷ್ಟು ಭಾಗ ಕೃಷಿಯನ್ನೇ ಅವಲಂಬಿಸಿದೆ. ಭೂಮಿಯನ್ನು ಸಾಗುವಳಿ ಮಾಡಿ ಬದುಕುವ ರೈತ ಜನರು ಹೆಚ್ಚಾಗಿ ಕಂಡು ಬರುತ್ತಾರೆ. ಭೂಮಿಯಲ್ಲಿ ಕೃಷಿ ಮಾಡುವವರನ್ನು ಒಕ್ಕಲಿಗ ಎಂದು ಕರೆಯುತ್ತಾರೆ. ಭೂಮಿಯನ್ನು ಭಿತ್ತಿ ಬೆಳೆಯನ್ನು ತೆಗೆಯುವುದು ಒಕ್ಕಲಿಗನ ಮುಖ್ಯ ಕರ್ತವ್ಯವಾಗಿದೆ. ಹೀಗೆ ಕೃಷಿಯ ಮೂಲಕ ಬೆಳೆಯನ್ನು ತೆಗೆಯುವ ರೈತರನ್ನು ಒಕ್ಕಲು ಮಕ್ಕಳೆಂದು ಕರೆಯುತ್ತಾರೆ. ಇದಕ್ಕೆ ಅನೇಕ ಕಡೆ ಶಾಸನಧಾರಗಳು ಇವೆ. ಮಾನವ ಎಂದು ತನ್ನ ಅಲೆಮಾರಿ ಜೀವನಕ್ಕೆ ಮಂಗಳ ಹಾಡಿದ ಒಂದು ಸ್ಥಿರವಾಗಿ ನೆಲೆನಿಂತು ವಾಸಿಸಲು ತೊಡಗಿದನೋ ಅಲ್ಲಿಂದಲೇ ಕೃಷಿಯ ಆರಂಭವನ್ನು ಕಾಣಬಹುದು.

ವ್ಯವಸಾಯಕ್ಕೆ ಅಗತ್ಯವಾದ ಸಾಧನ ಸಲಕರಣೆಗಳಾದ ನೇಗಿಲನ್ನು ಬಳಸಿ ಪ್ರಾಣಿಗಳನ್ನು ಬಳಸಿಕೊಂಡು ಉತ್ತಮ ಬೀಜವನ್ನು ಬಿತ್ತಿ ಬೆಳೆಗಳನ್ನು ಬೆಳೆದು ಬದುಕತೊಡಗಿದ್ದರು, ಹೀಗೆ ಕೃಷಿ ಆರ್ಥಿಕತೆಯನ್ನು ಆಧರಿಸಿದ ಗ್ರಾಮಗಳು ಅಸ್ಥಿತ್ವಕ್ಕೆ ಬಂದಿದೆ. ವ್ಯವಸಾಯಕ್ಕೆ ರೈತನು ಈಗ ನೇಗಿಲನ್ನೇ ಅವಲಂಬಿಸಬೇಕೆಂದಿಲ್ಲ ಯಾಕೆ ಎಂದರೆ ಇತ್ತೀಚಿನ ದಿನಗಳಲ್ಲಿ ಟ್ರಾಕ್ಟರ್‌ಗಳಲ್ಲಿ ಹೊಲಗಳನ್ನು ಉಳುಮೆ ಮಾಡುವ ಪದ್ದತಿ ಇತ್ತೀಚೆಗೆ ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಇದರಿಂದ ಸಮಯದ ಉಳಿತಾಯಾವಾಗುತ್ತದೆ ಮತ್ತು ರೈತರ ಶ್ರಮವು ಕೂಡ ಕಡಿಮೆ ಎಂದು ಈ ಪ್ರದೇಶದಲ್ಲಿ ರೈತರು ಹೇಳುತ್ತಾರೆ.

## ಬೆಳೆಗಳು

ಅಣಜಿ ಪರಿಸರವು ಬಯಲು ಸೀಮೆಯಾಗಿದ್ದು ಇಲ್ಲಿ ಮಳೆ ಆಶ್ರಿತ ವ್ಯವಸಾಯ ಹೆಚ್ಚು ಪ್ರಚಲಿತದಲ್ಲಿತ್ತೆಂದು ತೋರುತ್ತದೆ. ಆದ್ದರಿಂದ ಈ ಪರಿಸರದಲ್ಲಿ ಹೆಚ್ಚು ಜೋಳ, ರಾಗಿ ಮೆಕ್ಕೆಜೋಳ, ಹತ್ತಿ, ನವಣೆ ಮತ್ತು ಸಜ್ಜೆಯನ್ನು ಮೊದಲು ಬೆಳೆದು ಶೇಂಗವನ್ನು ಬೆಳೆಯುತ್ತಿದ್ದರು. ಮತ್ತು ನಿರಾವರಿ ಸೌಲಭ್ಯವಿದ್ದ ಕಡೆ ಮಾತ್ರ ಭತ್ತ ಮತ್ತು ಬಾಳೆಯನ್ನು ತೆಂಗು ಅಡಿಕೆ, ಈರಳ್ಳಿಯನ್ನು ಬೆಳೆಯುತ್ತಿದ್ದರು, ದ್ವಿದಳ ಧಾನ್ಯಗಳಾದ ತೊಗರಿ, ಹೆಸರುಕಾಳು, ಕಡಲೆ, ಕುಸುಬಿ, ಅಲಸಂದಿ, ಹುರುಳಿ, ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಅಣಜಿ ಪರಿಸರದಲ್ಲಿ ಸುತ್ತಮುತ್ತಲಿನಲ್ಲಿ ತೋಟಗಳು ಹೆಚ್ಚು ಕಂಡು ಬಂದಿದು ಭೂಮಿಯ ಒಳಗೆ ಮಣ್ಣು ತೇವಾಂಶವನ್ನು ಹಿಡಿದಿಟ್ಟುಕೊಂಡಿರುವುದರಿಂದ ತೆಂಗಿಗೆ ಸದಕಾಲ ತಂಪಾದ ತೇವಾಂಶವಿರುತ್ತದೆ. ಇತ್ತೀಚೆಗೆ ಇಲ್ಲಿನ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದಾರೆ. ಕೊಳವೆ ಬಾವಿಗಳ ಮೂಲಕ ನೀರಿನ ಆಶ್ರಯ ಪಡೆದುಕೊಂಡು ರೈತರಿಗೆ ಸುಲಭವಾಗಿ ಲಭ್ಯವಾಗುತ್ತಿರುವುದರಿಂದ ವಾಣಿಜ್ಯ ಬೆಳೆಗಳಾದ ದಾಳಿಂಬೆ, ಮೆಡಿಸಿನ್ ಸೌತೆ ಜೊತೆಗೆ ಮೆಣಸಿನಕಾಯಿ, ಬದನೆ, ಬೆಂಡೆ, ಹುರುಳಿ, ಅವರೆ ಮುಂತಾದ ತರಕಾರಿಗಳನ್ನು ಅಣಜಿ ಪರಿಸರದ ಸುತ್ತುಮುತ್ತಲಿನ ಹಳ್ಳಿಗಳಲ್ಲಿ ' ಬೆಳೆಗಳನ್ನು ಬೆಳೆಯುತ್ತಿದ್ದರು.[೧೮]

## ನೀರಾವರಿ ವ್ಯವಸ್ಥೆ

ಪ್ರಸ್ತುತ ಈ ಅಧ್ಯಯನದ ಪರಿಸರದಲ್ಲಿ ಕಂಡುಬರುವಂತಹ ಒಂದು ಬಯಲು ಸೀಮೆಯಾಗಿದ್ದು ಇಲ್ಲಿಯಾವುದೇ ಜೀವನದಿ ಪಾತ್ರಕ್ಕೆ ಈ ಪ್ರದೇಶವು ಒಳಗಾಗಿಲ್ಲ. ಆದ್ದರಿಂದ ಕೆರೆ-ಬಾವಿಗಳೇ ಕೃಷಿ ಚಟುವಟಿಕೆಗಳಿಗೆ ನೀರೊದಗಿಸುವ ಪ್ರಮುಖ ತಾಣಗಳಾಗಿವೆ. ರಾಜರು ಶ್ರೀಮಂತರು ಮತ್ತು ಗೌಡರು ಗ್ರಾಮ ಸಂಸ್ಥೆಗಳು ಕೆರೆ-ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದರು. ಕೃಷಿ ಅಭಿವೃದ್ಧಿಗೆ ನೀರಾವರಿ ವ್ಯವಸ್ಥೆ ಅನಿವಾರ್ಯವಾಗಿತ್ತು. ಈ ಹಿಂದೆ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದ ಎಲ್ಲಾ ವ್ಯವಸ್ಥೆಯಂತೆ ನೀರಾವರಿ ವ್ಯವಸ್ಥೆಯು ಕೂಡ ಆತನ ಕೈಯಲ್ಲಿರುತ್ತಿತ್ತು. ಇತ್ತೀಚೆಗೆ ಭದ್ರಾ ಜಲಾಶಯದಿಂದ ಅಣಜಿಯ ಕೆರೆಗೆ ನೀರು ಬರುತ್ತಿದೆ.

ಊರಿನ ಗೌಡರು ಜಲ ಸೂತ್ರದಾರರು, ಶ್ಯಾನಭೋಗರು ನೀರ್ಗಂಟಿಗಳು ತಳವಾರರು ಗ್ರಾಮ ಪಂಚ್ತಾಯಿತಿಯ ಅಧ್ಯಕ್ಷರು ಮತ್ತು ಸದಸ್ಯರು ನೀರಿನ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ರಾಜನು ದತ್ತಿ ಅಥವಾ ಕೆರೆ ಕಟ್ಟಿ ಇತ್ಯಾದಿಗಳನ್ನು ಕಟ್ಟಿಸಲು ಅನುಮತಿ ನೀಡುತ್ತಿದ್ದನು. ಈ ಅಣಜಿ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಕ್ರಿ.ಶ.೧೭೭೯ರಲ್ಲಿ ಭರಮಣ್ಣನಾಯಕನೊಬ್ಬನ ಕಾಲದಲ್ಲಿಯೇ ೨೦ ಕೆರೆಗಳು ಕಟ್ಟಿಸಿರುವುದನ್ನು ಉಲ್ಲೇಖಗಳಿವೆ, ಅಣಜಿ ಕೆರೆ, ಜಗಳೂರು ತಾಲ್ಲೂಕಿನಲ್ಲಿ ಬರುವಂತಹ ಭೀಮ ಸಮುದ್ರ ಕೆರೆ, ಮತ್ತು ಭರಮಸಾಗರ ಕೆರೆ ಆನುಗೋಡು ಕೆರೆ, ಹಲವು ಕಡೆ ಕೆರೆಗಳನ್ನು ದಾವಣಗೆರೆ

ತಾಲ್ಲೂಕಿನಲ್ಲಿ ಅಣಜಿ ಕೆರೆ ಅಥವಾ ಕೆರಹೊನ್ನಮ್ಮನ ಮಾವನ ಗೌಡನು ಕಟ್ಟಿಸಿದ್ದಾನೆ ಎಂದು ಜಾನಪದದ ಮೂಲಕ ಹೇಳುತ್ತಾರೆ.

ಬಿಚ್ಚುಗತ್ತಿ ಭರಮಣ್ಣನಾಯಕ ಚಿತ್ರದುರ್ಗ ಪಾಳೆಯಗಾರರ ಪಟ್ಟಿನ ಎರಡನೇಯ ಸಂತತಿಯಾದ ಬಿಳಿಚೋಡು ಸಂತತಿಗೆ ಸೇರಿದವನು, ಸಂಸ್ಥಾನವನ್ನು ಆಳಿದ ಪಾಳೆಯಗಾರರಲ್ಲಿ ಅತ್ಯಂತ ದಕ್ಷನಾದ ಪಾಳೆಯಗಾರ, ಪ್ರಜಾಹಿತಿ ಕಾರ್ಯಗಳಿಗೆ ಅತ್ಯಂತ ಗಮನ ನೀಡಿದವನು, ಕ್ರಿ.ಶ.೧೬೯೮ರಲ್ಲಿ ಮೊಘಲರ ದಿಲಾದರ್ ಖಾನನೊಂದಿಗೆ ರಾಜಿಮಾಡಿಕೊಂಡು ನಂತರ ತಮ್ಮ ಕಾಮಗೇತಿ ವಂಶದವರು ನೆಲೆ ಮತ್ತು ಭೂಮಿ, ಕೆರೆ, ಬಾವಿಗಳ ಮೇಲಿನ ಅನನ್ಯ ಭಕ್ತಿ ಹಾಗೂ ಅಭಿಮಾನದಿಂದ ನೀರ್ಥಡಿ ರಂಗನಾಥ ದೇವಾಲಯವನ್ನು ಪುನರ್ ನಿರ್ಮಿಸಿ ಪುನಃ ದೇವತಾ ಪ್ರತಿಷ್ಠಾಪನೆ ಮಾಡಿ ಪಕ್ಕದ ಎಮ್ಮೆಹಟ್ಟಿ ಗ್ರಾಮವನ್ನು ಉಂಬಳಿ ಹಾಕಿ ಶಾಸನ ಹಾಕಿಸಿದರು ಈ ಶಾಸನವನ್ನು ದೇವಾಲಯದ ಉತ್ತರದ ಮಂಟಪದ ಹೊರಭಾಗದಲ್ಲಿ ಕಾಣಬಹುದು.(ದಾವಣಗೆರೆ ಶಾಸನ ಸಂ.೧೧ ಪು.ಸಂ, ೧೬೪)

"ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖವರುಷ ೧೬೧೯ ಸಾವಿರದ ಆರುನೂರ ಹತ್ತೊಂಭತ್ತನೆಯ ವರುಷಯೇಶ್ವರನಾಮ ಸಂವತ್ಸರದ ಮಾಘ ಶುದ್ದ ಕಲ್ಲು

ನೀರತಡಿ ಅಹೋಬಲ ನರಸಿಂಹ ಸ್ವಾಮಿಯಮ ನದಿತನ್ಯವಾಗಿ ಶಿಲಾಮೂರ್ತಿಯನ್ನು ಮಾಡಿದ್ದಕ್ಕೆ। ಬರದ ಶಾಸನದ ಕ್ರಮವೆಂತೆಂದರೆ ಪ್ರಕುದತುಸ್ವೀಚರದ ಚೈತ್ರ ಮಾಸದಲ್ಲು ಡಿಳ್ಳಿ ಬಾದಶಹ ದಂಡಬಂದು ದೇವರ ದೇವಸ್ತಾನವನು ಶ್ತಿರ ಸಾಮ್ರಾಜ್ಯವಾಗಿ ಆಳುವಂಥ ಶ್ರೀಮನ್ಮಹನಾಯಕಚಾರ್ಯ ಕಾಮಗೇತಿ ಕಸ್ತೂರಿ ಮದಕರಿ ನಾಯಕರ ಭರಮಣನಾಯಕರು। ಯೀ ನಿರತಡಿ ಅಹೋಬಲನಾರಸಿಂಃದೇವರ ಪುನಃ ಪ್ರತಿಷ್ಠೆಯಿಂ ಮಾಡಿಸಿದೇವಸ್ತಾನವಂನು ಜೀರ್ಣೋದ್ಧಾರವನು ಆಚಂದ್ರರ್ಕಸಾಯಿಯಾಗಿ ಮಾಡಿಸ್ತ ಸೇವೆ ದೇವರ ಅಮೃತಪಡಿ ನಂದಾದೀಪಕ್ಕೆ ಕೊಟ್ಟಧರ್ಮ। ಬರಮಸಾಗರದ ಸೀಮೆಯ ಎಮ್ಮೆಹಟ್ಟಿಗೆ ೨ ಮನಂಸ್ತ ತೋಟಯದು ಮಾತ್ರ ಶಾಸನಹಾಕಿಸಿ ಮಾಪಿಸ್ತಧರ್ಮಸೇವೆ। ೧೬೫ನೇ ಶಾಸನ ದೇವಾಲಯದ ಪಶ್ಚಿಮ ಪ್ರಕಾರದಲ್ಲಿದೆ ಈಶಾಸನದಲ್ಲಿ ಕ್ರಿಷ್ಣಪ್ಪನಾಯಕರು ಅಣಜಿ ಸ್ಥಳದೊಳಗಣ ನೀರತಡಿ ಅಹೋಬಲ ಸ್ವಾಮಿಗೆ ದಾನ ನೀಡಿದ ವಿಚಾರ ತಿಳಿಯುತ್ತದೆ. ಮತ್ತು ಈ ದೇವಾಲಯದ ಪೌಳಿಯಲ್ಲಿ ಬೃಹತ್ ಬಾವಿಯನ್ನು ಮತ್ತು ಊರ ಹೊರಗೆ ಸುಂದರವಾದ ಕೆರೆ ಮತ್ತು ಹೊಂಡವನ್ನು ಭಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ ಕಟ್ಟಿಸಿದ್ದಾನೆ.[೧೯] ಈ ಹಿನ್ನೆಲೆಯಲ್ಲಿ ವಿವೇಚಿಸುವುದಾದರೆ ಈ ದೊರೆಯು ನೀರಾವರಿ ವ್ಯವಸ್ಥೆಗೆ ಕೊಟ್ಟಿರುವಂತಹ ಆದ್ಯತೆ ವ್ಯಕ್ತವಾಗುತ್ತವೆ. ಹಾಗೂ ಕೆರೆ ನಿರ್ಮಾಣ ರೀಪೇರಿಯ ನಿರ್ವಹಣೆ ಮತ್ತು ದಾನ ಚಟುವಟಿಕೆಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸಿರುವುದು ಕಂಡು ಬರುತ್ತದೆ. ಅಲ್ಲದೆ ಅವರು ಸಂಬಂಧಿಗಳು ಅಧಿಕಾರ ವರ್ಗದವರು ಸಾಮಂತರು ವೃತ್ತಿಪರರು ಮತ್ತಿತರರು ಅಸಂಖ್ಯಾ ಸಂಖ್ಯೆಯಲ್ಲಿ ಕೆರೆ ಸಂಬಂಧಿಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ ಎನ್ನುವುದು ಶಾಸನ ಮತ್ತಿತರ ಆಧಾರಗಳಲ್ಲಿ ವ್ಯಕ್ತವಾಗುತ್ತದೆ. ಈ ಪ್ರದೇಶದಲ್ಲಿನ

ಕೆರೆ ಕಟ್ಟೆ ಬಾವಿ ಮೊದಲಾದ ಸತತ ನೀರಿನ ಆಶ್ರಯವಿರುವ ತೋಟಗಳಲ್ಲಿ ತೆಂಗು ಬಾಳೆ-ಅಡಿಕೆ, ವಿಳ್ಯೆದಲೆ-ಮಾವು, ಹುಣಸೆ ಮೊದಲಾದವುಗಳನ್ನು ಬೆಳೆಯಲಾಗುತ್ತಿತ್ತು.

ಶಾಸನಗಳ ಸಹಾಯದಿಂದ ಯಾವ ಯಾವ ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು ಎಂಬುದು ತಿಳಿದುಬರುತ್ತದೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ದೇವಾಲಯದ ಪೂಜಾರಿಗಳು ಬ್ರಾಹ್ಮಣರಿರುತ್ತಿದ್ದರು. ಪ್ರಾಚೀನ ಕಾಲದಿಂದಲೂ ಕೃಷಿಯೇ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬಾದುದರಿಂದ ಕೃಷಿಕರು ಇತರ ವಿವಿಧ ಕಸಬುಗಳನ್ನು ಅವಲಂಬಿಸಿದ್ದರು. ಜೊತೆಗೆ ಗ್ರಾಮದ ಮುಖಂಡ ಕೆರೆ ನಿರ್ಮಾಣಗಳಲ್ಲಿ ದಾನ ಧರ್ಮಗಳಲ್ಲಿ ಅವನ ಪಾತ್ರ ಅನನ್ಯವಾಗಿರುತ್ತಿತ್ತು ಎಂದು ಕಂಡು ಬರುತ್ತದೆ. ರಾಜನಾದವನು ಮತ್ತು ಇತರೆ ಪ್ರಮುಖ ಅಧಿಕಾರಿ ವರ್ಗದವರು ಕೆರೆಗಳಂತ ಜನೋಪಾಕಾರಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಅಥವಾ ಪ್ರೋತ್ಸಾಹಿಸುವುದು ತನ್ನ ರಾಜ್ಯದ ಆರ್ಥಿಕ ಪ್ರಗತಿಗೆ ಪೂರಕವೇ ಆಗಿತ್ತು.

ಪ್ರಸ್ತುತ ಅಣಜಿ ಪರಿಸರದಲ್ಲಿ ಸುತ್ತುಮುತ್ತಲಿನಲ್ಲಿ ಕಂಡು ಬರುವಂತಹ ಕೆರೆಬಾವಿಗಳು ಕೇವಲ ಕೃಷಿಗೆ ಮಾತ್ರ ಉಪಯೋಗವಾಗದೇ ಜನರ ದಿನ ನಿತ್ಯದ ಚಟುವಟಿಕೆಗಳನ್ನು ಸುಗಮವಾಗಿ ಸಾಗುವಂತೆ ಮಾಡಲು ಸಹಾಯಕಾರಿಯಾಗಿದ್ದವು. ಕುಡಿಯುವ ನೀರಿನ ಬಳಕೆ, ದಿನನಿತ್ಯ ಉಪಯೋಗಿಸಲು ನೀರಿನ ಅವಶ್ಯಕತೆಯಿತ್ತು. ಹಾಗಾಗಿ ಪ್ರಾಚೀನ ಕಾಲದಿಂದಲೂ ನೀರಿಗೆ ಹೆಚ್ಚಿನ ಆದ್ಯತೆ ನೀಡಿರುವುದು ನಾವು ಕಾಣಬಹುದಾಗಿದೆ.

**ಅಳತೆಗಳು ಮತ್ತು ತೂಕಗಳು**

ಒಂದು ವಸ್ತು ಅಥವಾ ಪ್ರದೇಶದ ನಿರ್ದಿಷ್ಟ ಪ್ರಮಾಣವನ್ನು ತಿಳಿಯಲು ಅಳತೆ ತೂಕ ಅವಶ್ಯಕ. ಹಿಂದೆ ರಾಜರು ವ್ಯಾಪಾರಿಗಳು ಇನ್ನಿತರರು ದಾನಗಳನ್ನು ನೀಡುವಾಗ ಇಂತಿಷ್ಟು ಎಂದು ಹೇಳಿ ಕೊಟ್ಟಿರುವುದು ತಿಳಿದುಬರುತ್ತದೆ. ಅಣಜಿ ಪರಿಸರದ ಸುತ್ತಮುತ್ತಲಿನ ಕೆಲವರು ಹಳ್ಳಿಗಳನ್ನು ವ್ಯಾಪಾರ ಕೇಂದ್ರವಾಗಿದ್ದರು ಮತ್ತು ಅಗ್ರಹಾರ ದೇವಾಲಯಗಳಿಗೆ ದಾನಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ನೀಡಿರುವುದನ್ನು ಗಮನಿಸಬಹುದು. ಈ ಪರಿಸರದಲ್ಲಿ ಶಾಸನಗಳಲ್ಲಿ ಅಳತೆ ಮತ್ತು ತೂಕಗಳನ್ನು ಮತ್ತರು. ಕಮ್ಮಕಂಬ, ಬೆಂಕೊಳ್ವನ ಕಂಬ ಬೆಂಕೊಳ್ವನ ಕೋಲು, ಹಿರಿಯಕೋಲು, ಹೊರಗೆ ಎಂದು ಉಲ್ಲೇಖಿಸುತ್ತಾನೆ. ಬಹುತೇಕವಾಗಿ ಈ ಅಳತೆಗೋಲು ಪ್ರಮಾಣಗಳಿಂದ ಹೊಲ ಅಥವಾ ಭೂಮಿಗಳನ್ನು ಅಳೆಯುತ್ತಿದ್ದರು. ಭೂ ಅಳತೆಯ ಘಟಕಗಳಿಗೆ ಸಾಮಾನ್ಯವಾಗಿ ನಿರ್ವತನ ಮತ್ತರ್ ಮತ್ತು ಕಮ್ಮ ಎಂಬ ಹೆಸರುಗಳನ್ನು ಉಪಯೋಗಿಸಲಾಗುತ್ತಿದ್ದಿತ್ತು.[೨೦] ಜಮ್ಮಾಪುರ, ಅಣಜಿಯು ಪಾಳೆಯಗಾರರ ಕಾಲದಲ್ಲಿ ಕೇಂದ್ರ ಸ್ಥಳವಾಗಿದ್ದಾಗ ಜಮ್ಮಾಪುರವನ್ನು ಕಂದಾಯ ವಸೂಲಿ ಮಾಡುವಂತಹ ಗ್ರಾಮವಾಗಿತ್ತು. ಕ್ರಿ.ಶ.೧೨೬೬ ಹಿಮ್ಮಡಿ ದೇವರಸನ ಮಗ ವಿಠ್ಠಲ ದೇವರಸ ಈತ ಹೆಮ್ಮನ ಬೇತೂರಿನ ಶಾಸನರಕ್ತದಾನಿ, ಅಣಜಿಯ ಶಾಸನ ಬಂದರಲ್ಲಿ ಈ ವಿಠ್ಠಲ ದೇವರಸನು ಅಣಜಿ ದೇವರಿಗೆ ಹೆಮ್ಮನ ಬೇತೂರನ್ನು ದಾನ ನೀಡಿದನೆಂದು ಮೂಲಕ

ಕುಲದೇವರಿಗೆ ಅಗ್ರಹಾರವನ್ನಾಗಿ ದಾನ ಮಾಡಿದನೆಂದು ತಿಳಿಯುತ್ತದೆ. ಪ್ರಸ್ತುತವಾಗಿ ಒಂದು ಕೆ.ಜಿ ಎರಡು ಕೆ.ಜಿ ಬಟ್ಟುಗಳನ್ನು ತೂಕದ ಮಾಪಕವಾಗಿ ವ್ಯಾಪಾರಿಗಳು ಬಳಸುತ್ತಾರೆ ಮತ್ತು ಲೀಟರ್ ಲೆಕ್ಕದಲ್ಲಿ ಎಣ್ಣೆಯನ್ನು ನೀಡುವುದನ್ನು ಕಾಣುತ್ತವೆ.

### ನಾಣ್ಯಪದ್ದತಿ

ಪ್ರಾರಂಭದಲ್ಲಿ ಸಾಮಾನ್ಯವಾಗಿ ಎಲ್ಲಾ ಗ್ರಾಮಗಳಲ್ಲಿಯೂ ವಸ್ತು ವಿನಿಮಯ ಪದ್ದತಿ ಕಂಡು ಬರುತ್ತಿತ್ತು. ತಮ್ಮಲ್ಲಿ ಇರುವ ವಸ್ತುಗಳನ್ನು ತಮಗೆ ಬೇಕಾದ ವಸ್ತುಗಳು ಇರುವವರಿಗೆ ನೀಡಿ ಅವರಲ್ಲಿ ಇದ್ದಂತಹ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಮುಂದೆ ಕಾಲಾನಂತರದಲ್ಲಿ ನಾಣ್ಯ ಪದ್ದತಿ ಕಾಣಿಸಿಕೊಂಡಿತು. ಒಂದು ಪ್ರದೇಶದಲ್ಲಿ ಬಳಕೆಯಾಗುತ್ತಿದ್ದ ನಾಣ್ಯಗಳಿಂದ ಆ ಪ್ರದೇಶದ ಆರ್ಥಿಕ ಪ್ರಗತಿಯ ಪ್ರತಿಬಿಂಬವನ್ನು ತಿಳಿಯಬಹುದು. ಸಾಮಾನ್ಯವಾಗಿ ಬಳಕೆಯಾಗುತ್ತಿದ್ದ ನಾಣ್ಯಗಳೆಂದರೆ ಕಾಸು, ಆಣೆ, ಗದ್ಯಾಣ, ವರಹ, ಟಂಕ, ಇತ್ಯಾದಿ ಕಂಡುಬರುತ್ತದೆ. ಇವುಗಳ ಆಗಿನ ಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುತ್ತದೆ. ಇತ್ತೀಚೆಗೆ ಕೂಡ ರೈತರಲ್ಲಿ ವಸ್ತು ವಿನಿಮಯ ಪದ್ದತಿ ಕಂಡು ಬರುತ್ತದೆ. ಕಾಸು ಮತ್ತು ಆಣೆ ವ್ಯವಹಾರ ನಿಂತು ಹೋಗಿ ಈಗ ಪ್ರಸ್ತುತ ರೂಪಾಯಿನೋಟಿನ[೨೧] ವ್ಯವಹಾರ ಕಂಡು ಬರುತ್ತದೆ. ಮತ್ತು ಒಟ್ಟಾರೆಯಾಗಿ ಅಣಜಿ ಪರಿಸರದಲ್ಲಿ ಲಭ್ಯವಾದ ಆ ಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ವಲ್ಪಮಟ್ಟಿನ ಮಾಹಿತಿಯನ್ನು ನೀಡುತ್ತದೆ.

### ಕಂದಾಯ ಪದ್ದತಿ

ಈ ಪ್ರದೇಶದಲ್ಲಿ ಪ್ರತಿ ಎಂಟು ಅಥವಾ ಹದಿನಾರು ಹಳ್ಳಿಗಳಿಗೆ ಒಂದರಂತೆ ಸ್ಥಾಪನೆಯಾದ ಹೋಬಳಿಗಳು ಕೇವಲ ಆಡಳಿತಾತ್ಮಕ ವಿಭಾಗೀಕರಣವಲ್ಲದೆ ಕಂದಾಯ ಸಂಗ್ರಹಣೆಯ ಘಟಕಗಳು ಆಗಿದ್ದವು. ಗ್ರಾಮವು ಆಡಳಿತದ ಚಿಕ್ಕ ಘಟಕವಾಗಿತ್ತು. ಪ್ರತಿಯೊಂದು ಸೀಮೆ ಅಥವಾ ಗ್ರಾಮಗಳು ಆಡಳಿತವನ್ನು ಪಾರುಪತ್ಯೆಗಾರರು, ನಾಡಗೌಡರು ದಳವಾಯಿಗೌಡ, ಶಾನುಭೋಗರು ನೋಡಿಕೊಳ್ಳುತ್ತಿದ್ದರು. ಹಾಗೂ ಹಲವಾರು ವಿವಿಧ ಮೂಲಗಳಿಂದ ಹಣವು ರಾಜ್ಯದ ಬೊಕ್ಕಸಕ್ಕೆ ಬರುತ್ತಿತ್ತು. ಕೆಲವೊಮ್ಮೆ ಆಡಳಿತವರ್ಗದವರು ಕಂದಾಯ ಸುಂಕವನ್ನು ಬಿಟ್ಟ ಅಂಶಗಳನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ.

ಚಿತ್ರದುರ್ಗ ಮೊದಲು ಪಾಳೆಯಗಾರನಾದ ಮತ್ತಿತಿಮ್ಮಣ್ಣನಾಯಕರಲ್ಲಿ ಬಿಳಿಚೋಡಿನ ವಿರೂಪಾಕ್ಷಜೊಯಿಸರವಾಗ ಪರಶುರಾಮಪ್ಪನವರು ಹರಿಯುವ ಹಚ್ಚಡ ಮುರಿಯದ ಒಡವೆಯನ್ನು ಕೇಳಿದಾಗ ನಾಯಕರು ಪರಶುರಾಮಪ್ಪನವರ ಮಕ್ಕಳಾದ ಯಲ್ಲಪ್ಪ ಭುವನಪ್ಪನವರಿಗೆ ಲಿಂಗದಹಳ್ಳಿ ಶಾನುಭೋಗಿಕೆಯನ್ನು ನೀಡಿದಾಗ ಇವರಲ್ಲೊಬ್ಬರು ಅಣಜಿಯಲ್ಲಿ ನೆಲೆಸಿದಾಗ ಪಾಳೇಯಗಾರ ಪ್ರತಿನಿಧಿ ಈ ವಂಶಸ್ಥರಿಗೆ ಶ್ಯಾನುಭೋಗಿಕೆ, ಸ್ಥಳ ಪೌರೋಹಿತ್ಯ ಸುಂಕವಸೂಲಿ ಅಧಿಕಾರ

ನೀಡಿದರು. ಈ ಮನೆತನದವರು ಬಹುಕಾಲ ಅಣಜಿಯಲ್ಲಿದ್ದರು ಅಣಜಿಯ ವಿರೂಪಾಕ್ಷ ಜೋಯಿಸರೆನ್ನುವವರು, ರಾಜಾವೀರ ಮದಕರಿ ನಾಯಕನ ಆಸ್ಥಾನದಲ್ಲಿದ್ದರು. ಮಕ್ಕಳಿಲ್ಲದ ಇವರಿಗೆ ಶ್ರೀಮುರಗೋಡಾ ಚಿದಂಬರರ ಕೃಪೆಯಿಂದ ವಂಶವೃದ್ಧಿಯಾಯಿತೆಂದು ತಿಳಿಯುತ್ತದೆ.

ಕ್ರಿ.ಶ.೧೫೧೫ ರಲ್ಲಿ ಕಾಲದ್ದೆಂದು ಭಾವಿಸಲಾಗಿರುವ ಶಾಸನದಲ್ಲಿ ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನ ಒಬ್ಬ ಅಧಿಕಾರಿ ಅರವಣೆಯ ಚೆನ್ನರಸ ಎಂಬುವನು ಮದುವೆಗೆ ಹಾಕಲಾಗುತ್ತಿದ್ದ ಸುಂಕವನ್ನು ಬಿಡಿಸಿದನೆಂಬ ಸಂಗತಿ ಈ ಶಾಸನದಿಂದ ತಿಳಿಯುತ್ತದೆ.[೨೨]

ಜಮ್ಮಾಪುರ ದಾವಣಗೆರೆ ಹುಣಸೇಕಟ್ಟೆ ಮಾರ್ಗದಲ್ಲಿ ಈ ಗ್ರಾಮವಿದೆ ಈ ಊರು ಪಾಳೆಯಗಾರರ ಕಾಲದಲ್ಲಿ ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ಒಂದು ಆಯಾಕಟ್ಟಿನ ಸ್ಥಳವಾದ ಅಣಜಿಗೆ ಹತ್ತಿರುವಿರುವಂತಹ ಗ್ರಾಮ ಇದು ಕಂದಾಯ ವಸೂಲಿಯು ಮಾಡುವಂತಹ ಸ್ಥಳವಾಗಿರಬೇಕು, ಹೆಮ್ಮನಬೇತೂರಿನ ಸಿದ್ದೇಶ್ವರ ದೇವಾಲಯದ ಬಳಿ ಇರುವ ಶಾಸನದಿಂದ ಕ್ರಿ.ಶ.೧೨೫೮(೧೧೮೦)ರಲ್ಲಿ ಭಕ್ತಜನರ ಆರಾಧನೆಯಲ್ಲಿ ಕಾಶಿಗಿಂತ ಮಿಗಿಲಾದುದೆಂದು ಜಂಗಮಾರಾಧನೆಯಲ್ಲಿ ಈ ಭೂಮಿಯಲ್ಲಿ ಮಿಗಿಲಾದುದೆಂದು ಸಾರಸ್ವಲ್ಪ ಈ ಹೆಮ್ಮನಬೇತೂರಿನಲ್ಲಿ ಕಾಣಬಹುದಾಗಿದೆ.

**ಕೃಷಿಯೇತರ ಕಸುಬುಗಳು**

ಅಣಜಿ ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ಕೃಷಿಯೇತರ ಕಸುಬುಗಳಿಗೆ ಅನುಕೂಲಕರವಾದ ಮೂಲಭೂತ ಸೌಲಭ್ಯಗಳನ್ನು ಹೊಂದಿದ್ದಿತು. ಪಶುಪಾಲನೆ ಮಾನವ ತನ್ನ ಅಲೆಮಾರಿ ಜೀವನವನ್ನು ಬಿಟ್ಟು ನೆಲೆನಿಲ್ಲಲು ಪ್ರಾರಂಭಿಸಿದಾಗಿನಿಂದ ಪಶುಪಾಲನೆ ಕಂಡುಬರುತ್ತದೆ. ಇದು ಅಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಜನರು ಅನೇಕ ಸಾಕು ಪ್ರಾಣಿಗಳನ್ನು ಸಾಕುತ್ತಿದ್ದರು. ಕುರಿ, ಮೇಕೆ, ಎಮ್ಮೆ, ಎತ್ತು, ಹಸುಗಳು ಮುಂತಾದ ಪ್ರಾಣಿಗಳು ಸಾಕಣಿಕೆಗೆ ಉತ್ತೇಜನ ನೀಡಿದ್ದರು, ಇತ್ತೀಚೆಗೆ ಈ ಪ್ರದೇಶದಲ್ಲಿ ಹಸು ಮತ್ತು ಕುರಿ, ಮೇಕೆಗಳು ಸಾಕಣಿಕೆ ಹೆಚ್ಚು ಕಂಡುಬರುತ್ತಿದ್ದು.[೨೩] ಇದರಿಂದ ಹಸು ಸಾಕುವುದರಿಂದ ಹಾಲು ಮತ್ತು ಗೊಬ್ಬರ ಅಥವಾ ಸಗಣಿ ಉತ್ಪಾದನೆಯಾಗುವುದರಿಂದ ಇದನ್ನು ಮಾರಾಟ ಮಾಡುವುದರಿಂದ ಜನತೆಗೆ ಆರ್ಥಿಕವಾಗಿ ಸುಭದ್ರತೆಯನ್ನು ಹೊಂದಿರುತ್ತಿದ್ದರು. ಇದಲ್ಲದೆ ಈ ಪ್ರದೇಶದಲ್ಲಿ ಕುಂಬಾರಿಕೆ, ಕಮ್ಮಾರಿಕೆ ಮತ್ತು ಮನೆಗೆಲಸ ಮಾಡುವವರು ಅಂದರೆ ಬಡಗಿಗಳು ಕಂಡು ಬರುತ್ತಾರೆ. ಈಗಲೂ ಸಹ ಈ ಪ್ರದೇಶದಲ್ಲಿ ಮಡಕೆಗಳಲ್ಲಿ ಅಂದರೆ ಮಣ್ಣಿನ ಪಾತ್ರೆಗಳಲ್ಲಿ ಅಡಿಗೆ ಮಾಡುವ ವ್ಯವಸ್ಥೆ ಅಸ್ಥಿತ್ವದಲ್ಲಿದ್ದು ಕುಂಬಾರಿಕೆಯು ಈಗಲೂ ಅಸ್ತಿತ್ವದಲ್ಲಿದೆ ಮತ್ತು ಕಮ್ಮಾರರು ಇಲ್ಲಿನ ರೈತರಿಗೆ ಬೇಕಾದ ಕೃಷಿ ಉಪಕರಣಗಳನ್ನು ತಯಾರಿಸಿಕೊಡುತ್ತಾರೆ. ಇದನ್ನು ಅವರು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದು ಈಗಲೂ ಸಹ ಅದು ಮುಂದುವರೆದುಕೊಂಡು ಬಂದಿದೆ.

ಪ್ರಸ್ತುತ ಈ ಪ್ರದೇಶವು ಆರ್ಥಿಕವಾಗಿ ಹಿಂದೂಳಿದ ಪ್ರದೇಶವಾಗಿತ್ತೆಂದು ತಿಳಿಯುತ್ತದೆ. ಈ ಭಾಗದಲ್ಲಿ ಅನೇಕ ರಾಜ ಮಹಾರಾಜರು ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿದ್ದಾರೆ.

ಈ ಪ್ರದೇಶದ ಅಭಿವೃದ್ಧಿಗಾಗಿ ನಿರಂತರವಾಗಿ ರಾಜ ಮತ್ತು ಅವನ ಸಾಮಂತರಿಗೆ ಅಧಿಕಾರ ವಹಿಸಿಕೊಂಡು ಅಧಿಕಾರಿಗಳು ಊರಿನ ಗೌಡ ಶ್ಯಾನಭೋಗ ಹೀಗೆ ಹಲವಾರು ಜನರು ಈ ಭಾಗದ ಏಳ್ಗೆಗಾಗಿ ಪ್ರಯತ್ನಿಸಿರುವುದು ನಮಗೆ ಶಾಸನಗಳಿಂದ ಮತ್ತು ಪ್ರಾಚ್ಯವಶೇಷಗಳಿಂದ ತಿಳಿದುಬರುತ್ತದೆ.[೨೪] ಈ ಎಲ್ಲಾ ಅಂಶಗಳು ಅಂದಿನ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ ಎಂದು ಹೇಳಬಹುದು.

**ಅಡಿ ಟಿಪ್ಪಣೆಗಳು**

೧. ಚಿದಾನಂದಮೂರ್ತಿ ಎಂ., 'ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಯನ, ಪುಟ – ೪೩೦–೪೩೧

೨. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ–೩೫೭

೩. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ–೩೫೮

೪. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ–೩೫೪

೫. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ–೩೫೮

೬. ಶ್ರೀ ಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ, ಪುಟ–೨೫೪

೭. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿಕ ಸಮೀಕ್ಷೆ, ಪುಟ–೧೨, ೧೫

೮. ಕವಲಿ ಜೆ.ಎ. ಭಾರತೀಯ ಹಬ್ಬಗಳು, ಪುಟ–೨೫

೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪುಟ–೪೪೮

೧೦. ದೇವೆಂದ್ರಕುಮಾರ, ಹಕರಾರಿ ಜಾತ್ರೆಗಳು ಮತ್ತು ಕಲೆ, ಪುಟ – ೫೮

೧೧. ಗಿರಿಜ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ – ೨೯೫

೧೨. ಗಿರಿಜ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ –೨೯೬

೧೩. ಗಿರಿಜ ಟಿ., ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ –೨೯೭

೧೪. ಎಪಿಗ್ರಾಪಿಯ ಕರ್ನಾಟಕ, ಸಂ, ೨, ದಾ.ಶಾ.ಸಂ, ೧೭

೧೫. ಪೂರ್ವೋಕ್ತ ಪುಟ - ೩೧೮

೧೬. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ಪುಟ – ೫೧

೧೭. ಭೈರಪ್ಪ ಕೆ., ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ., ಪುಟ – ೬೩೪

೧೮. ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಪುಟ–೩೭

೧೯. ಪೂರ್ವೋಕ್ತ, ಪುಟ – ೧೩೨

೨೦. ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ–೧ ಪುಟ – ೧೭೪

೨೧. ಪೂರ್ವೋಕ್ತ, ಪುಟ – ೧೭೬

೨೨. ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಪುಟ – ೩೭

೨೩. ಭೈರಪ್ಪ. ಕೆ., ಸಮಾಜಶಾಸ್ತ್ರ, ೧೯೯೭, ಪುಟ – ೧೯೫

೨೪. ಭೈರಪ್ಪ. ಕೆ., ಪೂರ್ವೋಕ್ತ, ಪುಟ – ೧೭೯

# ಅಧ್ಯಾಯ – ೪

## "ವಾಸ್ತು ಮತ್ತು ಮೂರ್ತಿ ಶಿಲ್ಪಗಳು"

ಕರ್ನಾಟಕ ಇತಿಹಾಸದಲ್ಲಿ ವಾಸ್ತುಶಿಲ್ಪಕಲೆಯು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ವಾಸ್ತು ರಚನೆಯೊಂದು ಒಳಗೊಂಡಿರುವ ವಿವಿಧ ಭಾಗಗಳು ಹಾಗೂ ಅವುಗಳ ಮೇಲಿನ ಅಲಂಕರಣೆ ಮತ್ತು ಶಿಲ್ಪಗಳನ್ನು ಸ್ಥೂಲವಾಗಿ ವಾಸ್ತು ಎಂದು ಕರೆಯಬಹುದು ವಾಸ್ತು ಇತರ ಕಲೆಗಳಂತೆಯೇ ಆಯಾಕಾಲದ ಮತ್ತು ಆಯಾ ಜನಾಂಗದ ಆಂತರಿಕ ಆಕಾಂಕ್ಷೆ ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದು. ನಾಗರೀಕತೆಯನ್ನು ರೂಪಿಸುವ ಕಾರ್ಯವನ್ನು ಮಾಡುತ್ತದೆ. ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ಸಹ ವಾಸ್ತು ಬೆಳವಣಿಗೆಯಲ್ಲಿ ನಾವು ಕಂಡುಕೊಳ್ಳಬಹುದು.

ವಾಸ್ತುವೆಂದರೆ ವಿಶಾಲಾರ್ಥದಲ್ಲಿ ಮರ, ಕಲ್ಲು, ಅಥವಾ ಮಣ್ಣು ಇತ್ಯಾದಿಗಳೆಲ್ಲವೂ ಆಗಬಹುದು. ಮಯಮತಗ್ರಂಥವು ವಾಸ್ತು ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಾಸ್ತು ಎಂದು ಹೆಸರು ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದು ಗುರುತಿಸಲ್ಪಡುತ್ತದೆ.

ಅವಾಸ ವಾಸ ವೇಶ್ವಾದೌಪುರೇ ಗ್ರಾಮೇವಣಿಕ್ಷಥೇ

ಪ್ರಸಾದಾರಾಮ ದುರ್ಗೇಷ, ದೇವಾಲಯ ಮರೇಷುಚ

ಗರುಡ ಪುರಾಣದಲ್ಲಿ ಈ ಶ್ಲೋಕವು ಗ್ರಾಮಗಳು ನಗರಗಳು, ಕೋಟೆಗಳು, ಪಟ್ಟಣಗಳು ಮತ್ತು ಮಠಗಳು ಸಹ ವಾಸ್ತುಗಳೆಂದು ವಿವರಿಸುತ್ತದೆ. ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ ಕಲ್ಲು, ಮರ ಹಾಗೂ ಕಬ್ಬಿಣಗಳನ್ನು ಸಹ ವಿಶ್ವಕರ್ಮನು ವಾಸ್ತು ಶಾಸ್ತ್ರದಲ್ಲಿ ವಾಸ್ತುಗಳೆಂದೇ ಕರೆದಿದ್ದಾನೆ.

ಪ್ರಸಾದ, ಹರ್ಮ್ಯ ಮತ್ತು ಸೌಧ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದರಿಂದ ವಾಸ್ತು ಎಂದೆನಿಸುತ್ತವೆ. ಆದ್ದರಿಂದ ವಾಸ್ತು ಎಂದಲ್ಲಿ ವಸತಿಯೋಗ್ಯ ಭೂಮಿ ಮತ್ತು ಆ ಭೂಮಿಯ ಮೇಲೆ ನಿಂತು ಕಟ್ಟಡ ಎರಡನ್ನು ಒಳಗೊಳ್ಳುತ್ತವೆ. ದೇವಾಲಯ ಅರಮನೆ ಅಥವಾ ರಾಜಗೃಹ ರಚನೆ ದೇವತಾ ಮೂರ್ತಿಗಳ ರಚನೆ ಸರ್ವಜನೋಪಯೋಗಿ ಗೃಹಗಳು ಬಾವಿ ಪುಷ್ಕರಿಣಿ ಮುಂತಾದವುಗಳನ್ನು ಶುಕ್ರನೀತಿ ಗ್ರಂಥವು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ.[೧]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸ ಪಿ.ಕೆ.ಆಚಾರ್ಯರ ಅವರು ವಾಸ್ತುಶಾಸ್ತ್ರ ಮತ್ತು ಶಿಲ್ಪಶಾಸ್ತ್ರ ಪದಗಳನ್ನು ಪರ್ಯಾಯಾ ಪದಗಳೆಂಬಂತೆ ಬಳಸಿದ್ದಾರೆ. ಭಾರತೀಯ ವಾಸ್ತು ಮೂರ್ತಿ ಚಿತ್ರಕಲೆಗಳ ಅಧ್ಯಯನಕ್ಕೆ ಸಂಬಂಧಿಸಿದ ಪ್ರಾಚೀನ ಗ್ರಂಥಗಳನ್ನು ಶಿಲ್ಪಶಾಸ್ತ್ರಗಳೆಂದೇ ಗುರುತಿಸುವುದುಂಟು. ಕರ್ನಾಟಕದಲ್ಲಿ ವಾಸ್ತುಶಿಲ್ಪದ ಉಗಮವನ್ನು ಮೌರ್ಯರ ಕಾಲಕ್ಕೆ ಕೊಂಡೊಯ್ಯಬಹುದು. ಅವರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪವು ಸೀಮಿತ ಪ್ರಮಾಣದಲ್ಲಿ ಮಾತ್ರ ಸಿಗುತ್ತವೆ. ಬಾದಾಮಿ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಪ್ರಯೋಗ ನಡೆದು ವ್ಯವಸ್ಥಿತವಾದ ವಾಸ್ತುಶಿಲ್ಪಕ್ಕೆ ಭದ್ರ ಬುನಾದಿ ನಿರ್ಮಾಣವಾಯಿತು. ನಂತರದ ರಾಜಮನೆತನಗಳ ಆಳ್ವಿಕೆಯ ಕಾಲಾವಧಿಯಲ್ಲಿ ವಾಸ್ತುಶಿಲ್ಪವು ಹಲವಾರು ಅಂಶಗಳ ಸೇರ್ಪಡೆಯೊಂದಿಗೆ ಬೃಹದಾಕಾರವಾಗಿ ಬೆಳೆದು ದ್ರಾವಿಡ ಶೈಲಿ ಎಂದು ಪ್ರಸಿದ್ಧಿಯಾಯಿತು.

## ವಾಸ್ತುಶಿಲ್ಪ

ಭಾರತದಲ್ಲಿ ರಚಿತವಾಗಿರುವ ವಾಸ್ತು ರಚನೆಗಳನ್ನು ಅವುಗಳ ರಚನಾ ವಿನ್ಯಾಸದಿಂದ ವಿದ್ವಾಂಸರು ಸ್ಥೂಲವಾಗಿ ನಾಗರ ವೇಶದ ಮತ್ತು ದ್ರಾವಿಡ ಶೈಲಿ ಎಂದು ವಿಂಗಡಿಸಿದ್ದಾರೆ.

ನಾಗರ ಶೈಲಿಯು ಉತ್ತರ ಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿದೆ. ವೇಸರ ಶೈಲಿಯು ಕರ್ನಾಟಕದ ಮತ್ತು ಆಂಧ್ರ ಪ್ರದೇಶಗಳಲ್ಲಿರುವುದನ್ನು ಗಮನಿಸಬಹುದು. ನಾಗರ ಮತ್ತು ದ್ರಾವಿಡ ಶೈಲಿಗಳ ಮಿಶ್ರಣದಂತೆ ಈ ಶೈಲಿಯು ನಿರ್ಮಾಣವಾಗಿದೆ. ಈ ವಿಭಾಗಗಳನ್ನು ರಾಜವಂಶಗಳ ಹೆಸರಿನಲ್ಲಿ ಗುರುತಿಸಲಾಗುತ್ತದೆ. ಬಾದಾಮಿ ಚಾಲುಕ್ಯ ಹಾಗೂ ಪಲ್ಲವ, ಜೋಳ, ರಾಷ್ಟ್ರಕೂಟ ವಿಜಯನಗರ ಶೈಲಿ ಎಂದು ವಿಂಗಡಿಸಲಾಗಿದೆ. ಈ ಬಗೆಯ ವಿಂಗಡನೆಯನ್ನು ಆಯಾ ರಾಜವಂಶಗಳು ಬಳಸಿರುವ ಶಿಲೆ, ಕಲೆಯ ಲಕ್ಷಣಗಳ ಆಧಾರದ ಮೇಲೆ ಮಾಡಲಾಗಿದೆ. ಈ ಲಕ್ಷಣಗಳನ್ನು ಹೇಳುವಾಗ ವ್ಯತ್ಯಾಸದ ಅಂತರ ತೀರಾ ಕಡಿಮೆಯಿರುತ್ತದೆ. ಇಂತಹ ಕಡೆ ಸೂಕ್ಷ್ಮವಾದ ಅವಲೋಕನದಿಂದ ವಿಂಗಡಣೆಯನ್ನು ಗಮನಿಸಬೇಕಾಗುತ್ತದೆ.[೨]

ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಯು ಅಭಿರುಚಿಗೆ ಅನುಗುಣವಾಗಿ ವಾಸ್ತುವಿನ ವಿವಿಧ ಭಾಗಗಳಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣುತ್ತೇವೆ. ವಾಸ್ತು ಮತ್ತು ಶಿಲ್ಪಗಳೆರಡು ಕಲಾ ಸೌಂದರ್ಯದ ಪ್ರತೀಕವಾಗಿವೆ. ಅವು ಆರಂಭದಿಂದಲೂ ಜೊತೆಯಾಗಿಯೇ ಬೆಳೆದು ಬಂದಿರುವುದು ಗಮನೀಯ ಅಂಶವಾಗಿದೆ. ದಾವಣಗೆರೆ ತಾಲ್ಲೂಕಿನ ದೇವಾಲಯಗಳಲ್ಲಿರುವ ಭಿತ್ತಿ, ಪ್ರಸ್ತಾರ ಹಾಗೂ ಕಂಬಗಳ ವಿಭಿನ್ನ ಭಾಗಗಳಲ್ಲಿ ಬಿಡಿ ಬಿಡಿ ಶಿಲ್ಪಗಳನ್ನು ಕೆತ್ತಿರುವುದನ್ನು ಕಾಣಬಹುದು. ಇನ್ನೂ ಕೆಲವು ದೇವಾಲಯಗಳಲ್ಲಿ ಶಿಲ್ಪಗಳಿರದೆ ಕೇವಲ ವಾಸ್ತು ಭಾಗವನ್ನು ಮಾತ್ರ ಒಳಗೊಂಡಿರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ವಾಸ್ತುವೊಂದನ್ನು ನಿರ್ಮಿಸುವುದು ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ವಾಸ್ತುಕಲೆ ಎನ್ನುವ

ಪದ ಪ್ರಯೋಗವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ವಾಸ್ತು ಕಲೆಯಲ್ಲಿ ನಾವು ಆಧ್ಯಾತ್ಮಿಕ ಮನೋಧರ್ಮವನ್ನು ಕಾಣುತ್ತೇವೆ.

ಧಾರ್ಮಿಕ ಭಾವನೆಯನ್ನು ಮೈಗೂಡಿಸಿಕೊಂಡು ಅಣಜಿ ಪರಿಸರದಲ್ಲಿ ಆಳ್ವಿಕೆ ಮಾಡಿದ ರಾಜರು ಸಾಮಂತರು ಅನೇಕ ದೇವಾಲಯಗಳನ್ನು ಕರೆ–ಕಟ್ಟೆಗಳನ್ನು ಕಟ್ಟಿಸಿದ್ದಾರೆ. ಜೊತೆಗೆ ಅಲ್ಲಲ್ಲಿ ಕೋಟೆಗಳನ್ನು ಲೌಕಿಕ ಕಟ್ಟಡಗಳನ್ನು ನಿರ್ಮಿಸಿದ್ದಾರೆ.[೩]

**ಮೂರ್ತಿ ಶಿಲ್ಪಗಳು**

ಭಾರತ ದೇಶದಲ್ಲಿರುವಷ್ಟು ದೇವಾಲಯ ಮತ್ತು ಮೂರ್ತಿಶಿಲ್ಪಗಳು ಬೇರೆ ಯಾವ ದೇಶಗಳಲ್ಲೂ ಕಂಡುಬರುವುದಿಲ್ಲ. ಪ್ರತಿಯೊಂದು ಗ್ರಾಮ, ಪಟ್ಟಣ ನಗರಗಳಲ್ಲಿ ದೇವಾಲಯ ಗುಡಿಗಳು ಇದ್ದೇ ಇರುತ್ತವೆ. ಹಾಗಾಗಿ ಭಾರತದಲ್ಲಿ ಗುಡಿಗಳಿಲ್ಲದ ಗ್ರಾಮಗಳು ನಗರ– ಪಟ್ಟಣಗಳಿಲ್ಲ ಎನ್ನಬಹುದು.

ಭಾರತದಲ್ಲಿ ದೇವತಾರಾಧನೆ ಹಾಗೂ ವ್ಯವಸ್ಥಿತ ದೇವಾಲಯಗಳ ನಿರ್ಮಾಣ ಎಂದು ಆರಂಭವಾಯಿತೋ ಅಂದಿನಿಂದಲೂ ದೇವತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆದೇ ಇದೆ. ಯಾವುದೇ ಪಂಥದ ದೇವಾಲಯವಿರಲಿ ಆ ದೇವಾಲಯಕ್ಕೊಂದು ದೇವತಾಮೂರ್ತಿ ಇದ್ದೇ ಇರುತ್ತದೆ. ಮೂರ್ತಿ ಎಂಬ ಪದಕ್ಕೆ ಸಮಾನಾರ್ಥವಾಗಿ ಪ್ರತಿಮೆ ಎಂಬ ಪದ ಪ್ರಯೋಗದಲ್ಲಿದೆ. ಅಲ್ಲದೇ ಮೂರ್ತಿಶಾಸ್ತ್ರವನ್ನು ಪ್ರತಿಮಾಶಾಸ್ತ್ರ ಎಂದು ಕರೆಯಲಾಗುತ್ತದೆ. (Iconography-Iconomentry) ಪ್ರತಿಮಾ ಲಕ್ಷಣವೆಂದರೆ ಒಂದು ದೇವತೆಯ ಲಕ್ಷಣವನ್ನು ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೀಗೆ ಹಿಡಿಯಬೇಕೆಂಬುದನ್ನು ವಿಧಿಸುವ ಶಾಸ್ತ್ರ ಶಾಸ್ತ್ರೀಯ ನಿರೂಪಣೆ ಪ್ರಕಾರ ಮೂರ್ತಿಯು ಒಂದು ರೂಪ ಒಂಭತ್ತು ಅಂಗಗಳನ್ನು ಒಳಗೊಂಡಿರುತ್ತದೆ.

ಅವು ಎಂದರೆ ನ್ಯಾಸ (ರೂಪ ಸಂಯೋಜನೆ) ಅಲಂಕಾರ (ಆಭರಣ ವಸ್ತ್ರ ಕೇಶ ಮುಂತಾದವು) ಮುದ್ರಾ (ಹಸ್ತಮುದ್ರೆಗಳು) ಆಯುಧ (ದೇವತೆಯಕೈಯಲ್ಲಿರುವ ಆಯುಧಗಳು) ಕಕ್ಷ (ಆಸನ) ವಾಹನ ಉಪದೇವ (ಪ್ರಧಾನ ದೇವತೆಯ ಜತೆ ತೋರಿಸಲ್ಪಡುವ ಇತರ ಕಡಿಮೆ ಮಹತ್ವದ ದೇವತೆಗಳು ಪುರುಷ ದೇವತೆಗಳ ಸಂದರ್ಭದಲ್ಲಿ ಅವರ ಸ್ತ್ರೀ ದೇವತೆಗಳು) ಅರಿ (ದೇವತೆಯ ವೈರಿ) ಹಾಗೂ ಸ್ತುವಕ (ಭಕ್ತರು ಹಾಗೂ ಇತರ ಸೇವಕರು) ಈ ಶಾಸ್ತ್ರೀಯ ಸಂಪ್ರದಾಯಕ್ಕನುಗುಣವಾಗಿಯೇ ದೇವತಾ ಮೂರ್ತಿಗಳು ರೂಪುಗೊಳ್ಳುತ್ತವೆ. ಮೂರ್ತಿ ಶಿಲ್ಪಕ್ಕೆ ಪ್ರಾಗೈತಿಹಾಸಿಕ ಕಾಲದಿಂದಲೂ ಆಧಾರಗಳು ದೊರಕ್ಕಿವೆ.

ಮಹೆಂಜೊದಾರಿನಲ್ಲಿ ದೊರೆತ ಪ್ರಾಣಿಗಳ ಶಿಲ್ಪಗಳು ಹಾಗೂ ನರ್ತನ ಶಿಲ್ಪ ಮುದ್ರೆಯ ಮೇಲೆ ದೊರೆತಿರುವ ವಿಗ್ರಹಗಳು ಮುಖ್ಯವಾಗಿ ಪಶುಪತಿ ಶಿವನೆಂದು ಗುರುತಿಸಲಾಗಿರುವ ಧ್ಯಾನಸ್ತ ಮೂರ್ತಿಗಳು ಸಿಂಧೂ ನಾಗರೀಕತೆಯಲ್ಲಿ ದೊರೆಯುವ ಪ್ರಮುಖ ಮೂರ್ತಿಶಿಲ್ಪಗಳಾಗಿವೆ.

ವೇದಗಳ ಕಾಲದಲ್ಲಿ ವಿಗ್ರಹಗಳಿಗೆ ಪ್ರಾಧಾನ್ಯವಿರಲಿಲ್ಲವೆಂದು ಪ್ರಕೃತಿ ಶಕ್ತಿಗಳನ್ನು ಆರಾಧಿಸುತ್ತಿದ್ದರೆಂದು ಹೇಳಲಾಗುತ್ತದೆ. ಆದರೂ ಇಂದ್ರ ವರುಣ ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯ ಆಕಾರದ ಕಲ್ಪನೆಯನ್ನು ಕೊಟ್ಟಿರುವುದು ಕಂಡುಬರುತ್ತವೆ. ಮೂರ್ತಿ ಶಾಸ್ತ್ರಕ್ಕೆ ಕ್ರಿ.ಪೂ ೩ನೇ ಶತಮಾನದಿಂದ ಆಧಾರಗಳು ಸಿಗುತ್ತವೆ. ಅವೈದಿಕರು ಕೂಡಾ ಮೂರ್ತಿಗಳ ಆರಾಧನೆಯಲ್ಲಿ ತೊಡಗಿದ್ದರೆಂಬುದು ವೈದಿಕ ಸಾಹಿತ್ಯದಿಂದ ವ್ಯಕ್ತವಾಗುತ್ತದೆ. ಕ್ರಿ.ಶ.ನಾಲ್ಕನೇ ಶತಮಾನಕ್ಕೆ ಸೇರಿದ ಅವಶೇಷಗಳು ಗಂಗಾ ಬಯಲಿನಲ್ಲಿ ದೊರೆತಿದ್ದು, ಅವುಗಳಿಂದ ಕ್ರಿ.ಪೂ ೩ನೇ ಶತಮಾನಕ್ಕೆ ಪೂರ್ವದಲ್ಲೇ ಪ್ರಾಚೀನ ಭಾರತದ ಗ್ರಾಮಗಳಲ್ಲಿ ಮರದ ಮೂರ್ತಿಗಳು ಇದ್ದವೆಂಬುದು ಸ್ಪಷ್ಟವಾಗುತ್ತದೆ.[೪]

ಈ ಎಲ್ಲಾ ಆಧಾರಗಳಿಂದ ಭಾರತೀಯ ನೆಲದ ಆವೈದಿಕ ಸಮಾಜಗಳಲ್ಲಿ ಮೂರ್ತಿ ಪೂಜೆ ಸಂಪ್ರದಾಯ ಪ್ರಚಲಿತದಲ್ಲಿತ್ತೆಂದು ಹೇಳಬಹುದು. ಭಾರತೀಯ ಮೂರ್ತಿ ಶಿಲ್ಪ ಚರಿತ್ರೆಯಲ್ಲಿಯೇ ಮೌರ್ಯ ಕಾಲದಲ್ಲಿ ಬಂದು ಹೊಸ ಅಧ್ಯಾಯ ಪ್ರಾರಂಭವಾಯಿತು. ತನ್ನ ಪೂರ್ವಿಕರಿಗಿಂತ ಭಿನ್ನವಾಗಿ ಅಶೋಕನ ಶಿಲಾ ಮಾಧ್ಯಮಕ್ಕೆ ಆದ್ಯತೆ ನೀಡಿದೆ. ಕಲ್ಲಿನಿಂದ ಮಾಡಿದ ಮೂರ್ತಿಗಳಲ್ಲಿ ಮೌರ್ಯರ ಸ್ತಂಭಗಳ ಮೇಲ್ಭಾಗದ ವೃಷಭ ಆನೆ, ಸಿಂಹ ಕುದುರೆಯ ಆಕೃತಿಗಳು ಮುಖ್ಯವಾಗಿವೆ. ಧೌಲಿಯ ಬಂಡೆಯ ಮೇಲಿರುವ ಆನೆಯ ಉಬ್ಬು ಶಿಲ್ಪ ಪಾಟ್ನದ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪಗಳು ಬೆಸನಗರದ ಯಕ್ಷಿ ಸಾರನಾಥದಲ್ಲಿ ದೊರೆತ ಶಿಲ್ಪಗಳು ಪ್ರಮುಖವಾದವುಗಳಾಗಿವೆ. ಅವುಗಳಲ್ಲಿ ಬುದ್ಧನನ್ನು ಮೂರ್ತಿರೂಪದಲ್ಲಿ ತೋರಿಸದ್ದಿದರೂ ಬುದ್ಧನ ಪ್ರತೀಕವಾದ ಭೋಧಿವೃಕ್ಷ, ಸಿಂಹಾಸನ ಸ್ತೂಪ ಚಕ್ರ ರೂಪದಲ್ಲಿ ಪೂಜಿಸುವ ದೃಶ್ಯಗಳಿರುತ್ತವೆ. ಈ ಪೂಜೆಯಲ್ಲಿ ನಮಸ್ಕಾರ ಪ್ರದಕ್ಷಿಣೆ ಧೂಪ ದೀಪ ಪುಷ್ಪ ನೈವೇದ್ಯ ಮುಂತಾದ ಪೂಜೆಯ ಅಂಗಗಳು ಚಿತ್ರಿತವಾಗಿರುತ್ತವೆ. ಈ ಪೂಜೆಯನ್ನು ಮೂರ್ತಿ ಪೂಜೆಯ ಇತಿಹಾಸದಲ್ಲಿ ಒಂದು ಪ್ರಾರಂಭಿಕ ಅವಸ್ಥೆ ಎಂದು ಹೇಳಬಹುದಾಗಿದೆ. ಕ್ರಿಸ್ತ ಪೂರ್ವದಲ್ಲಿ ಕಂಡು ಬರುವ ಬೌದ್ಧ ಸ್ತೂಪಗಳಲ್ಲಿ ಬುದ್ದಮೂರ್ತಿಯೊಡನೆ ಯಕ್ಷ-ಯಕ್ಷಿಣಿ, ನಾಗ, ಹಾಗೂ ವೈದಿಕ ದೇವತೆಗಳು ಕೈ ಮುಗಿದು ನಿಂತಿರುವಂತೆ ಕೆತ್ತಲಾಗಿದೆ.

ಜೈನ ಧರ್ಮದಲ್ಲಿ ತೀರ್ಥಂಕರರನ್ನು ಮೂರ್ತಿರೂಪದಲ್ಲಿ ಪೂಜಿಸುವ ಸಂಪ್ರದಾಯ ಕ್ರಿ.ಶ ಆರಂಭದಲ್ಲೇ ಇದ್ದುದಕ್ಕೆ ಪ್ರಾಕ್ತನ ಶಾಸ್ತ್ರೀಯ ಆಧಾರಗಳು ದೊರೆಯುತ್ತವೆ. ಜಿನಮೂರ್ತಿಯ ಉಲ್ಲೇಖ ಸ್ಪಷ್ಟವಾಗಿ ಖಾರವೇಲನ ಹಾಂಥಿಗುಂಪಾ ಶಾಸನದಲ್ಲಿ ದೊರಕುತ್ತದೆ. ಇದು ಕ್ರಿ.ಪೂ ಮೊದಲನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದಾಗಿದೆ. ಇದು.ಕ್ರಿ.ಪೂ ಮೊದಲನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದಾಗಿದೆ ಮಥುರಾದಲ್ಲಿ ಬೌದ್ಧಮೂರ್ತಿಗಳಂತೆ ಪ್ರಾಚೀನ ಜಿನಮೂರ್ತಿಗಳು ದೊರೆಯುತ್ತವೆ. ಪ್ರಸ್ತುತವಾಗಿ ಅಣಜಿ ಪರಿಸರದ ಸುತ್ತಮುತ್ತಲಿರುವ ಪರಿಸರದಲ್ಲಿ ಮೂರ್ತಿಗಳು ಪ್ರಧಾನವಾಗಿ ಕಂಡು ಬರುತ್ತವೆ.[೫]

## ದೇವಾಲಯ

ದೇವಾಲಯ ಎಂದರೆ ದೇವರಿಗಾಗಿ ನಿರ್ಮಿಸಿದ ಆಲಯವೇ ಆಗಿದೆ, ಮಾನವನು ಮನೆಗಳನ್ನು

ನಿರ್ಮಿಸಿಕೊಂಡು ಹೇಗೆ ಜೀವನ ನಿರ್ವಹಿಸುವನೋ ಹಾಗೆಯೇ ದೇವರಿಗೂ ಆಲಯವನ್ನು ನಿರ್ಮಿಸಬೇಕು ಎನ್ನುವ ಉದ್ದೇಶದಿಂದ ದೇವಾಲಯವನ್ನು ನಿರ್ಮಿಸಲು ಪ್ರಾರಂಭಿಸಿರಬೇಕು. ದೇವಾಲಯದಲ್ಲಿ ಪರಮಾತ್ಮನನ್ನು ಪೂಜಿಸುವ ಭಕ್ತನ ವಿಶ್ವಾಸ ಶಕ್ತಿಯು ಪರಮಾತ್ಮನ ವಾತ್ಸಲ್ಯವೆಂಬ ಸಮಶಕ್ತಿಯೊಡನೆ ಸೇರಿದಾಗ ಭಕ್ತನಲ್ಲಿ ಒಂದು ಪ್ರಬಲ ಶಕ್ತಿಯು ಉತ್ಪನ್ನವಾಗಿ ಅವನನ್ನೇ ಉನ್ನತಿಗೇರಿಸುತ್ತದೆ. ಮಾನವನ ದೈವ ಇಹ ಪರ, ವಾಸ್ತವಿಕ ಆದರ್ಶ ಇವುಗಳ ಮಿಲನದ ಸಂಕೇತವೇ ದೇವಾಲಯ ಲೋಕ ಸಂರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ವಾಸಮಾಡುವ ಸ್ಥಳವಾದ ದೇವಾಲಯವು ಜೀವಾತ್ಮ ಪರಮಾತ್ಮದಲ್ಲಿ ಇರುವ ಅಂತರವನ್ನು ಬಹುಮಟ್ಟಿಗೆ ಕಡಿಮೆ ಮಾಡುತ್ತದೆ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಕನಾದ ದೇವನ ಬಳಿಗೆ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವು ದೇವಾಯವೇ ಆಗಿದೆ ಎಂದು ಹೇಳಬಹುದು.

### ತಲವಿನ್ಯಾಸ

ಭೂಮಿಯ ಮೇಲ್ಭಾಗದಲ್ಲಿ ಭೂಮಿಗೆ ಸಮನಾಂತರವಾಗಿ ನಿರ್ಮಿಸಿರುವ ದೇವಾಲಯದ ಭಾಗಗಳನ್ನು ತಲವಿನ್ಯಾಸದ ಅಡಿಯಲ್ಲಿ ಅಧ್ಯಯನ ಮಾಡಲಾಗುತ್ತದೆ. ತಲವಿನ್ಯಾಸದ ಅತ್ಯಂತ ಪ್ರಮುಖ ಭಾಗವೆಂದರೆ ಗರ್ಭಗೃಹ. ಇದು ದೇವಾಲಯದ ಕೇಂದ್ರ ಎಂದರು ತಪ್ಪಲ್ಲ. ಉಳಿದ ಭಾಗಗಳು ಇದಕ್ಕೆ ಹೊಂದಿಕೊಂಡಂತೆ ನಿರ್ಮಾಣಗೊಂಡಿರುತ್ತವೆ. ಸಾಮಾನ್ಯವಾಗಿ ಗರ್ಭಗೃಹವು ಚೌಕಾಕಾರವಾಗಿರುತ್ತದೆ. ಅಣಜಿ ಪರಿಸರದಲ್ಲಿ ಲಭ್ಯವಿರುವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹವು ಚೌಕಕಾರವಾಗಿರುತ್ತದೆ.[೬]

ಆಯತಾಕಾರದ ಸ್ಥಳವಕಾಶವಿರುತ್ತದೆ ಅಥವಾ ಇಲ್ಲದೇಯೇ ಇರಬಹುದು. ಅದನ್ನು ಅಂತರಾಳ ಸುಕಾನಾಸವೆಂದು ಕರೆಯುವರು. ಅಣಜಿ ಪರಿಸರದಲ್ಲಿ ಈ ರೀತಿಯ ದೇವಾಲಯಗಳು ಇವೆ. ಗರ್ಭಗೃಹಕ್ಕೂ ಮಧ್ಯ ಅಂತರಾಳವನ್ನು ಕಲ್ಪಿಸಲು ಮಾಡಿರುವ ಚಿಕ್ಕ ಕೊಠಡಿಯು ಇದೆ. ಇದರ ಮುಂಭಾಗವು ಯಾವುದೇ ರೀತಿಯ ಪ್ರವೇಶ ದ್ವಾರವನ್ನು ಹೊಂದಿರದಿದ್ದರೆ ಅದನ್ನು ತೆರೆದ ಅಂತರಾಳ ಎಂದು ಕರೆಯುವರು. ಮಧ್ಯದಲ್ಲಿ ನಾಲ್ಕು ಕಂಬಗಳನ್ನು ಸುತ್ತಲೂ ಹನ್ನೆರಡು ಅರೆಕಂಬಗಳನ್ನು ಹೊಂದಿದ್ದು ಒಂಭತ್ತು ಅಂಕಣಗಳಿಂದ ಕೂಡಿರುತ್ತದೆ. ಇದನ್ನೇ ನವರಂಗ ಎನ್ನುವರು. ಇದಕ್ಕೆ ಒಂದು ಎರಡು ಅಥವಾ ಮೂರು ಪ್ರವೇಶ ದ್ವಾರಗಳನ್ನು ಕಾಣಬಹುದು. ಇದರ ಮೇಲ್ಭಾವಣೆ ಗುಮ್ಮಟ ಅಥವಾ ಚಪ್ಪಟೆಯ ಆಕಾರದಲ್ಲಿ ಕೆಲವೊಮ್ಮೆ ಗಾಳಿ-ಬೆಳಕಿಗೆ ಜಾಲಾಂಧ್ರಗಳನ್ನು ನಿರ್ಮಿಸಿರುವುದನ್ನು ಅಣಜಿ ಪರಿಸರದ ದೇವಾಲಯಗಳಲ್ಲಿ ನಿರ್ಮಿಸಿರುವರು.[೭]

### ದೇವಾಲಯದ ಉಗಮ ಮತ್ತು ಬೆಳವಣಿಗೆ

ಸಾಮಾನ್ಯವಾಗಿ ದೇವಾಲಯಗಳನ್ನು ಮರ ಇಟ್ಟಿಗೆ ಅಥವಾ ಕಲ್ಲಿನಿಂದ ಕಟ್ಟಲಾಗುತ್ತದೆ. ಆದರೆ

ದೇವಾಲಯಗಳು ಶ್ರೇಷ್ಠವೆಂಬ ನಂಬಿಕೆಯ ಹಿನ್ನೆಲೆಯಲ್ಲಿ ಹಾಗೂ ಅಲ್ಲದೆ ಅವು ಶಾಶ್ವತವಾಗಿಯೂ ಉಳಿಯುವಂತಹವು. ಆದ್ದರಿಂದ ಕಾಲಾನುಕ್ರಮದಲ್ಲಿ ಮರ, ಇಟ್ಟಿಗೆಗಳಿಗಿಂತ ಕಲ್ಲಿನ ದೇವಾಲಯ ರಚನೆಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಯಿತು. ಇದರಿಂದಾಗಿ ಕಲ್ಲಿನಿಂದ ನಿರ್ಮಾಣಗೊಂಡ ದೇವಾಲಯಗಳು ಇಂದಿಗೂ ಉಳಿದುಕೊಂಡು ಪ್ರಾಚೀನ ಕಲಾ ಪರಂಪರೆಯ ಬಗ್ಗೆ ಅವು ಅರಿವು ನೀಡುತ್ತವೆ ಎಂದರೆ ತಪ್ಪಾಗಲಾರದು.

ದೇವಾಲಯ ನಿರ್ಮಾಣದ ಬಗ್ಗೆ ಮಾರ್ಗದರ್ಶನ ಮಾಡುವ ವಿಧಿ ನಿಷೇಧಗಳನ್ನು ಹೇಳುವ ಅನೇಕ ಗ್ರಂಥಗಳಿವೆ. ಗೃಹ್ಯಸೂತ್ರ, ಬೃಹತ್ ಸಂಹಿತಾ, ಮತ್ಸ್ಯ ಪುರಾಣ ಮುಂತಾದ ಕೃತಿಗಳಲ್ಲಿ ವಾಸ್ತು ಶಿಲ್ಪದ ವಿಷಯಗಳು ಪ್ರಾಸಂಗಿಕವಾಗಿ ಬಂದಿವೆ ಸು. ಏಳು–ಎಂಟನೆಯ ಶತಮಾನದಿಂದ ಆಗಮಗಳು ರಚನೆಗೊಂಡು ದೇವಾಲಯ ನಿರ್ಮಾಣದ ರೂಪು–ರೇಷೆಗಳನ್ನು ಇನ್ನು ನಿಖರವಾಗಿ ಪ್ರತಿಪಾದಿಸಲಾರಂಭಿಸಿದವು. ಇವು ದೇವಾಲಯ ರಚನೆಯನ್ನು ಅರ್ಥೈಸುವಲ್ಲಿಯೂ ಮಹತ್ತರ ಪಾತ್ರವನ್ನು ವಹಿಸುತ್ತವೆ. ಇವುಗಳಲ್ಲಿ ಮುಖ್ಯವಾದುವೆಂದರೆ ಸುಪ್ರಭೆದಾಗಮ ಕಾಮಿಕಾಗಮ ಕಾರಣಾಗಮ ಅಜಿತಾಗಮ ಮುಂತದವು ಶಿಲ್ಪ ಶಾಸ್ತ್ರಕ್ಕೆ ಮೀಸಲಾದ ಕೆಲವು ಗ್ರಂಥಗಳು ಇವೆ. ಇವುಗಳಲ್ಲಿ ಭುವನ ಪ್ರದೀಪನ ಅಪರಾಜಿತ ಪೃಚ್ಛಾ ಭೋಜನ ಸಮರಾಂಗಣ ಸೂತ್ರಧಾರ ಮಂಡನ ಮಿಶ್ರನಾದ ರೂಪಮಂಡನ ಮುಂತಾದವು ಉತ್ತರ ಭಾರತದ ದೇವಾಲಯಗಳ ರೂಪುರೇಷೆಚಿುನ್ನು ತಿಳಿಸುತ್ತವೆ. ಅಂತೆಯೇ ಮಯಮತ ಮಾನಸಾರ ತಂತ್ರಸಮುಚ್ಚಾಯ ಶಿಲ್ಪರತ್ನ ಮುಂತಾದ ಗ್ರಂಥಗಳು ದಕ್ಷಿಣ ಭಾರತ ದೇವಾಲಯಗಳ ರಚನಾ ಕ್ರಮವನ್ನು ತಿಳಿಸುತ್ತವೆ.[೮]

ದೇವಾಲಯದ ಪರಿಕಲ್ಪನೆಯಲ್ಲೂ ಒಂದು ತಾತ್ವಿಕ ಅರ್ಥವಿದೆ. ದೇವಾಲಯ ಪರಮಾತ್ಮ (ದೇವ)ನಿಗೆ ತನ್ನ ವಿಶ್ವಸೃಷ್ಟಿಯ ಮನೆ (ಆಲಯ) ಅಂಥ ಆಲಯದಲ್ಲಿ ವಿಶ್ವದ ತನ್ನ ಎಲ್ಲಾ ಪರಿವಾರದೊಡನೆ ಪರಮಾತ್ಮ ಇರುತ್ತಾನೆ. ಆದ್ದರಿಂದ ವಿಶ್ವದಲ್ಲಿ ಕಾಣಸಿಗುವ ಯಾವುದನ್ನು ಇದರಲ್ಲಿ ತೋರಿಸಬಹುದು. ಆತ್ಮ ಸಹಿತ ಮನುಷ್ಯ ಶರೀರವೂ ಒಂದು ದೇವಾಲಯ ಆತ್ಮ ದೇವರು (ದೇಹೋದೇವಾಲಯಃ ಪ್ರೋತ್ತೋ ಜೀವೋ ದೇವಃ ಸನಾತನಃ) ಮನುಷ್ಯ ಕಾಲು ಚಾಚಿ ಕುಳಿತಾಗ ಪಾದಗಳು ಗೋಪುರ ಸಹಿತ ಮಹಾದ್ವಾರ ತೊಡೆಯ ಭಾಗ ಪ್ರಸ್ತಾರ ಹೃದಯವೇ ಗರ್ಭಗೃಹ ತಲೆಯೇ ಶಿಖರ ಭಾರತೀಯ ದೇವಾಲಯ ವಾಸ್ತು ಪ್ರಕಾರದಲ್ಲಿ ಮುಖ್ಯವಾದ ಮೂರು ಶೈಲಿಗಳೆಂದರೆ ದ್ರಾವಿಡ, ನಾಗರ, ಮತ್ತು ವೇಸರ. ದ್ರಾವಿಡ ಶೈಲಿ ದಕ್ಷಿಣ ಭಾರತದ ಪ್ರಮುಖ ವಾಸ್ತು ಶೈಲಿ ಈ ಶೈಲಿಯನ್ನು ದಾಕ್ಷಿಣಾತ್ಯ ಶೈಲಿ ಎಂದು ಕರೆಯಲಾಗುತ್ತದೆ.

ವಾಸ್ತು ಶಾಸ್ತ್ರಗಳ ಪ್ರಕಾರ ಹಾಗೂ ಈ ಶೈಲಿಯ ವಾಸ್ತು ರೂಪುಗಳಲ್ಲಿ ಕಂಡುಬರುವ ಭೌಗೋಳಿಕ ಪ್ರಾಂತದ ಪ್ರಕಾರ ನೋಡಿದರೆ ದ್ರಾವಿಡ ದೇಶದ ಅಥವಾ ದಕ್ಷಿಣ ಭಾರತವೆಂದರೆ ಆಂಧ್ರ ಪ್ರದೇಶ ಕರ್ನಾಟಕ ತಮಿಳುನಾಡು ಕೇರಳ ಮತ್ತು ಗೋವಾ ರಾಜ್ಯಗಳು. ಈ ಪ್ರದೇಶಗಳಲ್ಲಿ

ಜನಪ್ರಿಯವಾಗಿ ಬೆಳೆದು ವಾಸ್ತುರೂಪವೇ ದ್ರಾವಿಡ ಶೈಲಿ ಎನಿಸಿದೆ. ಕಾಮಿಕಾಗಮ ದ್ರಾವಿಡ ವಾಸ್ತು ಪ್ರಕಾರದ ವಿವರಣೆಯನ್ನು ಸ್ವಲ್ಪಮಟ್ಟಿಗೆ ಸ್ಪಷ್ಟವಾಗಿ ನೀಡುವ ಗ್ರಂಥವಾಗಿದೆ. ಇದರ ಪ್ರಕಾರ ದ್ರಾವಿಡ ವಾಸ್ತು ಷಡ್ವರ್ಗ ಗುಂಪಿಗೆ ಸೇರಿದ ಕಟ್ಟಡ ಷಡ್ವರ್ಗಗಳಾವುವೆಂದರೆ ಆಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಮತ್ತು ಸ್ತೂಪಿ ಇದಿಷ್ಟು ಕೂಡಿ ದ್ರಾವಿಡ ವಿಮಾನವೆನಿಸುತ್ತವೆ.

ಉಪನಾತ್ ಸ್ತೂಪಿ ಪರ್ಯಂತ ತಂ ವಿಮಾನಃ ಎಂದು ಶಾಸ್ತ್ರಗಳಲ್ಲಿ ಹೇಳಿದೆ ವಿಮಾನ ಎಂದರೆ ಉಪಾನದಿಂದ (ಅಧಿಷ್ಟಾನದ ಅತ್ಯಂತ ಕೆಳಗಿನ ಭಾಗ) ಹಿಡಿದು ಸ್ತೂಪಿಯವರೆಗಿನ ಭಾಗ ಎಂದರ್ಥವಾಗುತ್ತದೆ.

ದೇವಾಲಯಗಳಲ್ಲಿ ಅಧಿಷ್ಠಾನ ಮಾದರಿಯಲ್ಲಿ ಪಾದ ಬಂಧ ಕಪೋತಬಂಧ ಪದ್ಮಬಂಧ ಎಂದೆಲ್ಲಾ ವಿವಿಧ ಪ್ರಕಾರಗಳಿವೆ. ಆಧಿಷ್ಠಾನದ ಅತ್ಯಂತ ಕೆಳಗಿನ ಭಾಗ ಉಪಾನ: ಇದು ಕಟ್ಟಡದ ಎಲ್ಲೆಡೆ ಕಾಣಬರುತ್ತದೆ. ಆದರೆ ಸ್ತೂಪಿ ಕಾಣಬರುವುದು ಗರ್ಭಗೃಹದ ಮೇಲಿನ ಪ್ರಸ್ತಾರದ ತುದಿಯಲ್ಲಿ ಮಾತ್ರ. ಆದ್ದರಿಂದ ಈ ಹೇಳಿಕೆ ಗರ್ಭಗೃಹದ ಭಾಗಕ್ಕೆ ಮಾತ್ರ ಅನ್ವಯವಾಗುತ್ತದೆ ಎಂದು ತಿಳಿಯಬೇಕು. ಗರ್ಭಗೃಹದ ಮೇಲಿನ ಪ್ರಸ್ತರ ಭಾಗಕ್ಕೂ ಸಹ ವಿಮಾನವೆನ್ನಲಾಗುತ್ತದೆ. ವಿಮಾನದ ಆಕಾರ ಗರ್ಭಗೃಹದ ಆಕಾರವನ್ನು ಹೋಲುತ್ತದೆ. ಗರ್ಭಗೃಹ ಚತುರಸ್ರ ಆಯತ ವೃತ್ತ ವೃತ್ತಾಯತ ಮತ್ತು ಗಜಪೃಷ್ಠಕಾರಗಳಲ್ಲಿ ಕಂಡುಬಂದಿದೆ. ದೇವಾಲಯವನ್ನು ಎತ್ತರವಾದ ದಿಂಡುಗಳಿಂದ ಅಲಂಕೃತವಾದ ಆದಿಷ್ಠಾನದ ಮೇಲೆ ನಿರ್ಮಿಸಲಾಗುತ್ತದೆ. ಈ ದಿಂಡುಗಳಿಗೆ ಪ್ರಸ್ತರ ಎಂಬ ಹೆಸರುಗಳುಂಟು ಅವುಗಳೆಂದರೆ ಕೆಳಗಿನಿಂದ ಉಪಾನ ಜಗತಿ ಕುಮುದ ಕಪೋತ ಅಥವಾ ಪಟ್ಟಿಕೆ ಹಾಗೂ ಆದಿಷ್ಠಾನದ ಮೇಲೆ ಭಿತ್ತಿಯನ್ನು (ಗೋಡೆ) ನಿರ್ಮಿಸಲಾಗುತ್ತದೆ. ಕರ್ನಾಟಕದ ದೇವಾಲಯದಲ್ಲಿರುವ ಆಧಿಷ್ಠಾನದಲ್ಲಿ ಕಪೋತದ ಬಳಕೆ ಅಧಿಕವಾಗಿದೆ. ಭಿತ್ತಿಯಲ್ಲಿ ಅನೇಕ ಹಿಂಚಾಚು ಮುಂಚಾಚುಗಳನ್ನು ಕರ್ಣಗಳೆಂದು ಮಧ್ಯದ ಸಣ್ಣ ಸಣ್ಣ ಮುಂಚಾಚುಗಳನ್ನು ಪ್ರತಿ ಕರ್ಣಗಳೆಂದು ಕರೆಯಲಾಗಿದೆ. ಈ ಎಲ್ಲಾ ಹಿಂಚಾಚು ಮುಂಚಾಚುಗಳೂ ವಿಮಾನದ ತುದಿಯವರೆಗೂ ಅದೇ ರೀತಿ ಉಳಿಸುವ ಪದ್ದತಿಯನ್ನು ಇಲ್ಲಿ ಭಿತ್ತಿಯ ಮೇಲೆ ಕಪೋತ ಚಾವಣಿ ಕಂಡುಬರುತ್ತದೆ.

ಚಾವಣಿಯ ಮೇಲೆ ಇರುವುದೇ ಹಾರ (ಕೈಪೀಡಿ ಗೋಡೆ) ಇದು ಐಚ್ಚಿಕ ಹಾರ ಎಂದರೆ ಮಾಲೆ, ಕೂಟ, ಶಾಲ ಮತ್ತು ಪಂಜರ ಮಾದರಿಯ ಚಿಕಣಿ ಮಂಟಪಗಳ ಮಾಲೆ ಅಥವಾ ಸರಪಳಿ ಇದು ಕಪೋತ ಚಾವಣಿ ಮತ್ತು ಹಾರ ಇವಿಷ್ಟು ಕೂಡಿ ಪ್ರಸ್ತಾರವೆನಿಸುತ್ತವೆ. ಛಾವಣಿಯ ಮೇಲ್ಭಾಗದಲ್ಲಿ ಗರ್ಭಗೃಹದ ಭಾಗದ ಮೇಲೆ ಎತ್ತರವಾದ ವೇದಿಯನ್ನು ನಿರ್ಮಿಸಲಾಗಿದೆ. ವೇದಿಯ ಮೇಲೆ ಗ್ರೀವ (ಕಂಠ ಅಥವಾ ಕತ್ತು) ಗ್ರೀವರ ಮೇಲೆ ಶಿಖರ ಶಿಖರದ ಮೇಲೆ ಸ್ತೂಪಿ ಇವಿಷ್ಟು ಕೂಡಿ ವಿಮಾನ ಅಥವಾ ಕೂಟವೆನಿಸುತ್ತದೆ. ಆಧಿಷ್ಠಾನ ಭಿತ್ತಿ ಪ್ರಸ್ತಾರ ಇವಿಷ್ಟು ಕೂಡಿ ಒಂದು ತಲವೆನಿಸುತ್ತದೆ. ಈ ಮೂರು ಅಂಗಗಳು ದೇವಾಲಯದಲ್ಲಿ ಎಲ್ಲಾ ಭಾಗಗಳಿಗೂ ಅನ್ವಯವಾಗುತ್ತವೆ.

ದ್ರಾವಿಡ ದೇವಾಲಯ ವಾಸ್ತುಶೈಲಿಯ ಸ್ಪಷ್ಟರೂಪ ಮೊಟ್ಟ ಮೊದಲಿಗೆ ಕಾಣುವುದು ಬಾದಾಮಿ ಚಾಲುಕ್ಯರ ಮತ್ತು ಪಲ್ಲವರ ದೇವಾಲಯಗಳಲ್ಲಿ. ಹಲವಾರು ಪ್ರಯೋಗಗಳು ನಡೆದು ೭ನೆಯ ಶತಮಾನದಲ್ಲಿ ಬಾದಾಮಿಯಲ್ಲಿರುವ ಮಾಲೆಗಿತ್ತಿ ಶಿವಾಲಯ, ಮಹಾಬಲಿಪರಂನ ಧರ್ಮರಾಜರಥ ದೇವಾಲಯಗಳಲ್ಲಿ ವಾಸ್ತುವಿನ ಷಡ್ವರ್ಗಗಳನ್ನು ಸ್ಪಷ್ಟವಾಗಿ ಹೊಂದಿರುವ ಲಕ್ಷಣಗಳು ಕಂಡು ಬರುತ್ತವೆ. ಇವರ ಕಾಲದಲ್ಲಿ ಹಲವಾರು ದೇವಾಲಯಗಳು ನಿರ್ಮಾಣವಾದವು. ರಾಷ್ಟ್ರಕೂಟರ ನಂತರ ಬಂದು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕರ್ನಾಟಕದ ಹಲವಾರು ಕಡೆ ಅಸಂಖ್ಯಾತ ದೇವಾಲಯಗಳು ನಿರ್ಮಾಣವಾದವು. ಜೊತೆಗೆ ದೇವಾಲಯಗಳ ಸಂಖ್ಯೆಯು ಹೆಚ್ಚಾಗಿತ್ತು. ಅನಾಂತರ ಬಂದ ಹೊಯ್ಸಳರು ಕಾಲದಲ್ಲಿ ಸೂಕ್ಷ್ಮ ಕೆತ್ತನೆಗಳನ್ನು ದೇವಾಲಯಗಳಲ್ಲಿ ಕಾಣಬಹುದು. ಆದರೆ ೧೩ನೇ ಶತಮಾನದ ಕೊನೆಯ ಭಾಗದಲ್ಲಿ ೧೪ನೆಯ ಶತಮಾನದ ಪ್ರಾರಂಭದಲ್ಲಿ ಮುಸ್ಲಿಂ ದಾಳಿಗಳಿಂದ ದೇವಾಲಯ ನಿರ್ಮಾಣ ಸ್ವಲ್ಪ ಕುಂಠಿತವಾಯಿತು. ಆದರೆ ಇದೇ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವುದರೊಂದಿಗೆ ೧೮ನೆಯ ಶತಮಾನದವರೆಗೆ ದೇವಾಲಯಗಳು ನಿರ್ಮಾಣ ಮುಂದುವರೆಯಿತು.[೧೦]

ಬ್ರಿಟಿಷರ ಆಡಳಿತದಲ್ಲಿ ದೇವಾಲಯಗಳ ನಿರ್ಮಾಣ ಸಂಪೂರ್ಣವಾಗಿ ಕುಂಠಿತವಾಯಿತು. ಆದರೆ ಪ್ರಸ್ತುತ ದೇವಾಲಯಗಳ ವಾಸ್ತು ಕಲೆಯನ್ನು ಪುನರುಜ್ಜೀವನಗೋಳಿಸಬೇಕಾದ ಕಾಲ ಅವಕಾಶ ಒದಗಿಬಂದಿದೆ. ಆದರೆ ಅಣಜಿ ಪರಿಸರದಲ್ಲಿ ಕಂಡುಬರುವ ಬಹುತೇಕ ದೇವಾಲಯಗಳು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತಹ ದೇವಾಲಯಗಳು ಅವುಗಳ ರಚನೆಗಳನ್ನು ಗಮನಿಸಿದಾಗ ನಮಗೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ರಚನೆ ಯಾದ ದೇವಾಲಯಗಳಲ್ಲಿರುವ ಲಕ್ಷಣಗಳು ಸಾಕಷ್ಟು ಹೋಲಿಕೆಗಳು ಕಂಡುಬರುತ್ತವೆ.

ಪ್ರಸ್ತುತ ದೇವಾಲಯಗಳು ಎಲೆಬೇತೂರಿನ ಕಲ್ಲೇಶ್ವರ ದೇವಾಲಯದ ನವರಂಗದಲ್ಲಿರುವ ಸುಂದರ ಕಂಬಗಳ ರಚನೆಯು ಮತ್ತು ಕಬ್ಬೂರು ಕಲ್ಲೇಶ್ವರ ದೇವಾಲಯದ ನವರಂಗದ ಕಂಬಗಳು ಹಾಗೂ ಜಗಳೂರು ತಾಲ್ಲೂಕಿನಲ್ಲಿ ಬರುವಂತಹ ಗ್ರಾಮ ಕಲ್ಲೇದೇವರಪುರದ ಕಲ್ಲೇಶ್ವರ ದೇವಾಲಯದ ಕಂಬಗಳು ರಚನಾ ಸಾಮ್ಯತೆ ಒಂದೇ ರೀತಿಯಲ್ಲಿ ಕಂಡುಬರುತ್ತವೆ. ಆದರೆ ಬಹುತೇಕ ದೇವಾಲಯಗಳು ಹೊಯ್ಸಳ ಕಲ್ಯಾಣದ ಚಾಲುಕ್ಯ, ವಿಜಯನಗರ ಅರಸರು ಮತ್ತು ಚಿತ್ರದುರ್ಗದ ಪಾಳೇಯಗಾರ ಕಾಲದಿಂದಲೂ ಕೂಡಾ ನಿರ್ಮಾಣವಾದ ದೇವಾಲಯದ ಲಕ್ಷಣಗಳನ್ನು ಈ ಪ್ರದೇಶದ ಸುತ್ತಮುತ್ತಲ್ಲಿರುವ ದೇವಾಲಯಗಳಲ್ಲಿ ಕಾಣುತ್ತೇವೆ. ಬೇತೂರುನಲ್ಲಿ ಜೈನಮತ ಬಹಳ ಹಿಂದಿನಿಂದಲೂ ಜೈನಮತ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ರೇವಣಸಿದ್ದೇಶ್ವರ ಮತ್ತು ಸಮ ಅಥವಾ ಗದ್ದಿಗೆ ಸಂಗಮೇಶ್ವರ ದೇವಾಲಯದ ಹಿಂಭಾಗದಲ್ಲಿ ನೆಲ ಅಗೆದಾಗ ಮೂರು-ಮೂರುವರೆ ಅಡಿ ಎತ್ತರದ ಮೂರು ಸುಂದರ ತೀರ್ಥಂಕರ ಕಲ್ಲಿನ ವಿಗ್ರಹಗಳು ದೊರೆತಿದ್ದು, ಅವುಗಳನ್ನು ಈ ದೇವಾಲಯದ ಪಕ್ಕದಲ್ಲಿಟ್ಟಿದ್ದಾರೆ (ಯಾವ ರಕ್ಷಣೆಯೂ

ಇಲ್ಲದಂತೆ) [೧೧]ಹಾಗೂ ಇಲ್ಲಿ ಒಂದು ದೇವಾಲಯಕ್ಕೆ ಜೈನಬಸದಿ ಎಂದು ಅಭಿಪ್ರಾಯ ಪಡುತ್ತಾರೆ. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದದ ಚಾವುಂಡರಸನು ಜೈನಮತಾವಲಂಬಿಯಾಗಿದ್ದ ಇನ್ನೂ ಅನೇಕ ಆಧಾರಗಳನ್ನು ಗಮನಿಸಿದಾಗ ಇಲ್ಲಿ ಜೈನಮತ ಪ್ರಚಾರದಲ್ಲಿತ್ತು ಎಂದು ತಿಳಿಯಲು ಸಾಧ್ಯವಾಗಿದೆ.

ಪ್ರಸ್ತುತ ಅಣಜಿ ಪರಿಸರದಲ್ಲಿ ಕಂಡುಬರುವ ಪ್ರಮುಖ ದೇವಾಲಯಗಳೆಂದರೆ ಅಣಜಿ, ಆನಗೋಡು ಎಲೆಬೇತೂರು, ಹೇಮ್ಮನಬೇತೂರು, ತುಂಬಿಗೆರೆ, ಕುರುಡಿ, ಆಲೂರು ಮೊದಲಾದ ಕಡೆಗೆ ಚಾರಿತ್ರಿಕವಾದ ದೇವಾಲಯಗಳಿದ್ದು ಅವುಗಳು ಇಂದಿಗೂ ಜೀವಂತವಾಗಿದ್ದು ದಿನನಿತ್ಯ ಪೂಜೆಗಳು ನಡೆಯುತ್ತವೆ. ಆದರೆ ಅಣಜಿ ಪ್ರದೇಶದ ವ್ಯಾಪ್ತಿಯಲ್ಲಿ ಚಾಲುಕ್ಯರ ಕಾಲದಿಂದ ಹಿಡಿದು ಚಿತ್ರದುರ್ಗದ ಪಾಳೆಯಗಾರರ ಕಾಲದವರೆಗೂ ಸಾಕಷ್ಟು ದೇವಾಲಯಗಳು ಕಂಡುಬರುತ್ತವೆ ಅವುಗಳಲ್ಲಿ ಶೈವ ವೈಷ್ಣವ ಶಾಕ್ತದೇವಾಲಯಗಳು ಎಂಬುದಾಗಿ ತಿಳಿಯಲಾಗಿದೆ. ಹಿಂದಿನ ಕಾಲಾವಧಿಯಲ್ಲಿ ಕಲ್ಲಿನಿಂದ ಇಟ್ಟಿಗೆಯಿಂದ ದೇವಾಲಯಗಳ ಗೋಪುರಗಳು ನಿರ್ಮಾಣಗೊಳ್ಳುತ್ತಿದ್ದವು. ಆದರೆ ವಿಜಯನಗರದ ಅರಸರು ಇಟ್ಟಿಗೆ ಮತ್ತು ಗಾರೆಯನ್ನು ಬಳಸಿಕೊಂಡು ನಿರ್ಮಾಣ ಮಾಡುವುದನ್ನು ಆರಂಭಿಸಿದ್ದರು ಸದ್ಯದ ಪ್ರದೇಶಗಳಲ್ಲಿ ಶೈವ ವೈಷ್ಣವ ದೇವಾಲಯಗಳು ನಿರ್ಮಾಣಗೊಂಡಿದ್ದು ಪಾಳೇಯಗಾರರ ಕಾಲದವರೆಗೆ ಅಲ್ಲದೇ ಪಾಳೇಯಗಾರರು ಶೈಲಿಯಿಂದ ಪ್ರಭಾವಿತಗೊಂಡು ಆಧುನಿಕ ಕಾಲದಲ್ಲಿ ನಿರ್ಮಾಣಗೊಂಡಂತಹ ದೇವಾಲಯಗಳನ್ನು ಸಹ ಕಾಣಬಹುದು. ಇಲ್ಲಿನ ಎಲ್ಲಾ ದೇವಾಲಯಗಳು ನಿರಾಂಧಾರ ದೇವಾಲಯಗಳಿವೆ. ಸದ್ಯದ ಈ ಪ್ರದೇಶದ ರಚನಾತ್ಮಕ ವಾಸ್ತು ಕಲೆಯಲ್ಲಿ ಮಹತ್ವದ್ದು ಆಧುನಿಕ ದೇವಾಲಯಗಳಾಗಿದ್ದರೂ ಲಿಂಗಗಳು ಕ್ರಿ.ಶ.೧೦-೧೨ನೇ ಶತಮಾನಕ್ಕೆ ಸೇರಿದವುಗಳನ್ನು ಕಾಣಬಹುದು.[೧೨]

೧. ಊರು :- ಎಲೆಬೇತೂರು

ಹೋಬಳಿ :- ಕಸಾಬ (ದ್ಾವಣಗೆರೆ)

ಹೆಸರು :- ಕಲ್ಲೇಶ್ವರ ದೇವಾಲಯ

ಸ್ಥಳ :- ಗ್ರಾಮದ ಉತ್ತರ ಭಾಗ

ಅಭಿಮುಖ :- ಪೂರ್ವಾಭಿಮುಖ

ಕಾಲ :- ಕ್ರಿ.ಶ.೧೧-೧೨ನೇ ಶತಮಾನ

ಶಿಖರ ಶೈಲಿ :- ಮೂಲ ಶಿಖರ ಉಳಿದಿಲ್ಲ

ಬಳಸಿದ ಶಿಲೆ :- ಬಳಪದ ಕಲ್ಲು

ದಾವಣಗೆರೆಯಿಂದ ಜಗಳೂರು ಮಾರ್ಗದಲ್ಲಿ ಸುಮಾರು ನಾಲ್ಕು ಕಿ.ಮೀ ಅಂತರದಲ್ಲಿ ಅಂದರೆ ದಾವಣಗೆರೆ ನಗರಕ್ಕೆ ಹೊಂದಿ ಕೊಂಡಿರುವ ಗ್ರಾಮ ಬೇತೂರು ಗ್ರಾಮದ ಉತ್ತರ ಭಾಗದಲ್ಲಿ ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಕಲ್ಯಾಣ ಚಾಲುಕ್ಯರ

ಜಗದೇಕಮಲ್ಲನ ಆಳ್ವಿಕೆ ಕಾಲದ ಕ್ರಿ.ಶ ೧೦೬೬ ರ ಶಾಸನವು ಚಾಲುಕ್ಯ ಮಹಾಮಂಡಲೇಶ್ವರ ವಿಷ್ಣುವರ್ಧನ ವಿಜಯಾದಿತ್ಯನು ಇಲ್ಲಿನ ಮೂಲಸ್ಥಾನ ದೇವರಿಗೆ ದಾನನೀಡಿದ ವಿವರಗಳು ಉಲ್ಲೇಖಗೊಂಡಿವೆ. ಈ ಶಾಸನದ ಪಾಠವನ್ನು ಗಮನಿಸಿದರೆ ಹೊಯ್ಸಳರು ಇನ್ನೂ ಕಲ್ಯಾಣದ ಚಾಲುಕ್ಯರ ಮಂಡಲೀಕರಾಗಿಯೇ ರಾಜ್ಯಭಾರ ನಡೆಸುತ್ತಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ. ಭೌಗೋಳಿಕವಾಗಿ ಈ ಸ್ಥಳವು ದ್ವಾರವತೀಪುರಕ್ಕೆ (ಹಳೇಬಿಡು) ಹತ್ತಿರದಲ್ಲಿಯೇ ಇತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೦೬೬ರ ವೇಳೆಗೆ ಹೊಯ್ಸಳ ವಿಜಯಾದಿತ್ಯನು ಚಾಲುಕ್ಯರೊಂದಿಗೆ ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ಅವರ ವಿಶ್ವಾಸ ಮತ್ತು ಪ್ರೀತಿಗೆ ಅರ್ಹನಾಗಿದ್ದ. ಆ ಸಂದರ್ಭಕ್ಕೆ ಈ ದೇವಾಲಯ ನಿರ್ಮಾಣವಾದಂತೆ ತೋರುತ್ತದೆ. ಈ ದೇವಾಲಯದ ನಿರ್ಮಾಣದ ಬಗ್ಗೆ ಸ್ಪಷ್ಟ ದಾಖಲೆಗಳು ದೊರೆಯದೇ ಹೋದರೂ ಕ್ರಿ.ಶ. ೧೦೬೬ರ ವೇಳೆಗೆ ನಿರ್ಮಾಣವಾಗಿತ್ತೆಂದು ಸ್ಪಷ್ಟವಾಗಿ ಹೇಳಬಹುದು. ಕ್ರಿ.ಶ.೧೧೦೦ರ ಚಾಲುಕ್ಯ ವಿಕ್ರಮಾದಿತ್ಯನ ಮತ್ತೊಂದು ಶಾಸನದಿಂದ ಈ ದೇವಾಲಯವು ನಂತರ ದಿನಗಳಲ್ಲಿ ಮತ್ತಷ್ಟು ಅಭಿವೃದ್ಧಿಯಾಗಿದೆ ಎನ್ನುವುದನ್ನು ಗಮನಿಸಬಹುದು.

ಪ್ರಸ್ತುತ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ತೆರೆದು ಅಂತರಾಳ ನವರಂಗ ಹಾಗೂ ತೆರೆದ ಮುಖ ಮಂಟಪಗಳನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದಲ್ಲಿ ಲಿಂಗವಿದೆ. ವಿತಾನದಲ್ಲಿ ಪದ್ಮದ ಅಲಂಕರಣೆಯಿದೆ. ಗರ್ಭಗೃಹದ ಪ್ರವೇಶದ್ವಾರವು ಪಂಚಶಾಖೆಗಳನ್ನು ಹೊಂದಿದೆ. ಮೊದಲು ಎರಡು ಶಾಖೆಗಳು ಹೂಬಳ್ಳಿಗಳಿಂದಲೂ ಮಧ್ಯದ ಶಾಖೆಯು ಸ್ತಂಭಗಳನ್ನು ಮತ್ತು ಕೊನೆಯ ಎರಡು ಶಾಖೆಗಳು ಹೂಬಳ್ಳಿಗಳ ಅಲಂಕರಣದಿಂದ ಕೂಡಿವೆ. ಪೇದ್ಯದಲ್ಲಿ ಗಂಗಾ ಯಮುನೆ ಹಾಗೂ ಶೈವ ದ್ವಾರ ಪಾಲಕರಿರುವ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಶಾಖೆಗಳು ಉತ್ತಾರಾಂಗದಲ್ಲಿಯೂ ಮುಂದುವರೆದಿದ್ದು, ಶಿಖರ ಮಾದರಿಯ ಅಲಂಕರಣ ಕೆತ್ತನೆಯನ್ನು ಹೊಂದಿವೆ. ನವರಂಗದ ಭುವನೇಶ್ವರಿಯಲ್ಲಿ ಪತ್ನಿ ಹಾಗೂ ವಾಹನ ಸಮೇತ ಅಷ್ಟದಿಕ್ಪಾಲಕರನ್ನು ಕಾಣಬಹುದು. ಉತ್ತರದಿಂದ ಕ್ರಮವಾಗಿ ಕುಬೇರ ಈಶಾನ್ಯ, ಇಂದ್ರ, ಅಗ್ನಿ ನಿಋುತಿ, ವರುಣ ಹಾಗೂ ವಾಯುಗಳಿದ್ದಾರೆ. ಈ ದಿಕ್ಪಾಲಕರ ಮಧ್ಯದಲ್ಲಿ ನಾಟ್ಯ ಶಿವನನ್ನು ಸುಂದರವಾಗಿ ನಿರೂಪಿಸಲಾಗಿದೆ.

ನವರಂಗದ ಮುಂಭಾಗದಲ್ಲಿ ತೆರೆದ ಮುಖಮಂಟಪವಿದೆ. ಇದರಲ್ಲಿ ಪ್ರತಿಸಾಲಿನಲ್ಲಿ ನಾಲ್ಕು ಕಂಬಗಳಂತೆ ನಾಲ್ಕು ಸಾಲಿನಲ್ಲಿ ಒಟ್ಟು ಹದಿನಾರು ಕಂಬಗಳಿವೆ. ಈ ಕಂಬಗಳಲ್ಲಿ ಫಲಕ ಮತ್ತು ಬೋಧಿಗೆಗಳಲ್ಲಿ ಸ್ವಲ್ಪಮಟ್ಟಿಗೆ ಪುಷ್ಪದ ಅಲಂಕರಣೆಯನ್ನು ಕಾಣಬಹುದು. ಏರುವಿನ್ಯಾಸದಲ್ಲಿ ದೇವಾಲಯವು ಆಧಿಷ್ಠಾನ ಭಿತ್ತಿ ಹಾಗೂ ಪ್ರಸ್ತರ ಭಾಗಗಳನ್ನು ಹೊಂದಿದೆ. ಈ ರೀತಿಯ ಶಿಖರ ಮಾದರಿಗಳು ಬಾಗಿಲುವಾಡದ ಮೇಲ್ಭಾಗದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೊಟ್ಟಮೊದಲು ಕಂಡುಬಂದರೂ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರ ಹಾಗೂ ಹೊಯ್ಸಳರ ಕಾಲದಲ್ಲಿ ವಿಶೇಷ ಅಭಿವೃದ್ಧಿಯನ್ನು ಹೊಂದಿದವೆಂದು ಹೇಳಬಹುದು. ಹಾಗಾಗಿ ಈ ದೇವಾಲಯವು ಕಲ್ಯಾಣದ

ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಲಕ್ಷಣಗಳಿಂದ ನಿರ್ಮಾಣಗೊಂಡಿದೆ ಎಂದು ಅಭಿಪ್ರಾಯಿಸಬಹುದು.[೧೩]

೨. ಊರು :– ಅಣಜಿ

ಹೋಬಳಿ :– ಅಣಜಿ

ಹೆಸರು :– ಸೋಮೇಶ್ವರ ದೇವಾಲಯ

ಸ್ಥಳ :– ಗ್ರಾಮದ ಪೂರ್ವ ಭಾಗ

ಅಭಿಮುಖ :– ಪೂರ್ವಾಭಿಮುಖ

ಕಾಲ :– ಕ್ರಿ.ಶ.೧೨ನೇ ಶತಮಾನ

ಶಿಖರ ಶೈಲಿ :– ಶಿಖರ ಇಲ್ಲ

ಬಳಸಿದ ಶಿಲೆ :– ಗ್ರಾನೈಟ್ ಶಿಲೆ (ಕಣ)

ದಾವಣಗೆರೆಯಿಂದ ಜಗಳೂರು ಮಾರ್ಗದಲ್ಲಿ ಸುಮಾರು ೨೦ಕಿ.ಮೀ ಅಂತರದಲ್ಲಿ ಕೇಂದ್ರೀಕೃತಕೊಂಡಿರುವ ಈ ಗ್ರಾಮ ಅಣಜಿ ಗ್ರಾಮದ ಪೂರ್ವ ಭಾಗದಲ್ಲಿ ಸೋಮೇಶ್ವರ ದೇವಾಲಯವಿದೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೧೧೮೨ರ ಶಾಸನವು ಹೆಮ್ಮಡಿ ದೇವರಸರ ಕುಮಾರ ವಿಠ್ಠಲ ದೇವರಸರು ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವಾಗಿ ದಾನ ನೀಡಿದ್ದನ್ನು ವಿವರಗಳು ಉಲ್ಲೇಖಿಸುತ್ತವೆ. ಸ್ಥಳೀಯರು ಈ ದೇವಾಲಯವನ್ನು ಹೊನ್ನಮ್ಮನ ಗುಡಿಯೆಂದು ಕರೆಯುವರು. ಈ ಅಣಜಿ ಗ್ರಾಮ ಇದರ ಆರಂಭಿಕ ಚರಿತ್ರೆ ಕಂಡುಬರುವುದು ಕೇಕೆಯ ಶಿವಸ್ಕಂದವರ್ಮನ ಮೂಲಕ ಇಲ್ಲಿನ ಶಾಸನವು ಇದನ್ನು ದೃಢಪಡಿಸುತ್ತದೆ ಅಣಜಿ ಗ್ರಾಮದಲ್ಲಿನ ಈ ಶಾಸನದ ಲಿಪಿ ಮಳವಳ್ಳಿ ಸ್ತಂಭ ಶಾಸನದ ಲಿಪಿಯನ್ನು ಹೋಲುತ್ತದೆ. ಭಾಷೆ ಸಂಸ್ಕೃತ ಕ್ರಿ.ಶ.೪೫೦ರಲ್ಲಿ ನೊಣ್ಣಕ್ಕೆ (೦) ಸ ಪಲ್ಲವನಿಗೂ ಕದಂಬ ರಾಜ್ಯದ ಸಾಮಂತನಾಗಿ ಆಳುತ್ತಿದ್ದ ಕೃಷ್ಣವರ್ಮನಿಗು ಘೋರ ಯುದ್ಧನೆಡೆದು ಈತನಿಗೆ ಯುದ್ಧದಲ್ಲಿ ಸೋಲುಂಟಾಗಿ, ಯುದ್ಧದಲ್ಲಿ ಕೃಷ್ಣವರ್ಮನಿಗು ಸಹಾಯ ಮಾಡಿದ ಶಿವಸ್ಕಂದವರ್ಮನು ಭಗ್ನ ಹೃದಯನಾಗಿ ಮರಣ ಹೊಂದಿ ಈತ ಕೇಕೆಯ ಕುಲದವನು ಕೃಷ್ಣವರ್ಮನು ಕೇಕೆಯ ರಾಜಕುಮಾರಿಯನ್ನು ಮದುವೆಯಾಗಿದ್ದರಿಂದ ಶಿವಸ್ಕಂದವರ್ಮನು ಇವನಿಗೆ ಯುದ್ಧದಲ್ಲಿ ಸಹಕರಿಸಿದ್ದ ಕೃಷ್ಣವರ್ಮ ಶಾಂತಿವರ್ಮನು ಸೋದರನು ಮಹಾವೀರನಾದ ಇವನು ತ್ರಿಪರ್ವತದಿಂದ ಆಳುತ್ತಿದ್ದ ಆದಿ ಕದಂಬ ಶಾಖೆಗೆ ಸೇರಿದವನಾಗಿದ್ದ.

ಕ್ರಿ.ಶ.೧೧೨೫ರ ಶಾಸನದಲ್ಲಿ ನನ್ನ (ನೋ)ಕ್ಕರಸನನ್ನು ವಾರಣಾಂಕುಶ ತೆಲುಂಗರಾಯ ಭುಜಬಲಭೀಮ ಇತರ ಬಿರುದುಗಳಿಂದ ಕರೆಯಲಾಗಿದೆ. ಕದಂಬರ ತರುವಾಯ ಗಂಗರು, ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದ ಅಣಜಿ ಚಾರಿತ್ರಿಕ ಮಹತ್ವವನ್ನು ಇಲ್ಲಿಂದಲೇ ಗುರುತಿಸಿಕೊಂಡಿತು. ಆದರೆ ಹದಡಿ ಶಾಸನದ ಪ್ರಕಾರ ಕಲ್ಯಾಣದ ಚಾಲುಕ್ಯರ ಆಳ್ವಿಕೆಗೆ ದಾವಣಗೆರೆ ಪ್ರದೇಶವು ಸೇರಿತ್ತು. ಕಳಚೂರಿ ಬಿಜ್ಜಳನಿಗೂ ಚೋಳರಿಗೂ ಮತ್ತು ಹೊಯ್ಸಳ

ಇಮ್ಮಡಿ ಬಲ್ಲಾಳರಾಯನಿಗೂ ಉಚ್ಚಂಗಿಯಲ್ಲಿ ಯುದ್ಧ ನಡೆದು ಬಲ್ಲಾಳ ಜಯಗಳಿಸಿದನು ಎಂಬ ವಿಚಾರವನ್ನು ಕ್ರಿ.ಶ. ೧೧೭೩ರ ಅಣಜಿ ಶಾಸನವು ವಿವರಿಸುತ್ತದೆ. ಅಲ್ಲದೇ ಅದೇ ಕಾಲದಲ್ಲಿ ಅಣಜಿ ಅಗ್ರಹಾರವಾಗಿತ್ತು ಎಂದು ತಿಳಿದುಬರುತ್ತದೆ.

ಪ್ರಸ್ತುತ ಈ ದೇವಾಲಯವು ಅಣಜಿ ಗ್ರಾಮದ ಪೂರ್ವದಿಕ್ಕಿಗೆ ಜಗಳೂರು ಹೋಗುವ ಮಾರ್ಗದಲ್ಲಿ ಕೆರೆಯ ಬಳಿ ಅಥವಾ ಹಿಂದೆ ಪಾತಳ ಗುಡಿಯಾಗಿ ಕಂಡುಬರುವುದೇ ಸೋಮೇಶ್ವರ ದೇವಾಲಯ ಎರಡು ಕಡೆ ಪ್ರವೇಶದ್ವಾರವಿದ್ದು ಏಕೈಕ ಗುಡಿಯು ನೆಲಮಟ್ಟದ ಚಾವಣಿ ಹೊಂದಿದೆ. ನಾಲ್ಕು ಕಂಬಗಳ, ನವರಂಗ, ಮಧ್ಯೆ ನಂದಿವಿಗ್ರಹವಿದೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ಶಿವಲಿಂಗಯಿದೆ. ನಂದಿಯ ಉತ್ತರ ದಿಕ್ಕಿಗೆ ವಿಘ್ನೇಶ್ವರ ನವದುರ್ಗಿಯರ ವಿಗ್ರಹಗಳಿವೆ. ಮೂಲೆ ಭಾಗದಲ್ಲಿ ಶಾಸನ ಕಂಡುಬರುತ್ತದೆ. ಕ್ರಿ.ಶ. ೧೧೮೨ರಲ್ಲಿ ಹೆಮ್ಮಡಿ ದೇವರಸರ ಕುಮಾರ ವಿಠ್ಠಲ ದೇವರಸರು ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವಾಗಿ ದಾನ ನೀಡಿದ ವಿಚಾರ ಉಲ್ಲೇಖಯಿದೆ. ಈ ದೈವ ದೇವಾಲಯವಾಗಿದೆ.[೧೪]

೩. ಊರು :- ಹೆಮ್ಮನ ಬೇತೂರು

ಹೋಬಳಿ :- ಅಣಜಿ

ಹೆಸರು :- ಸಿದ್ದೇಶ್ವರ ದೇವಾಲಯ

ಸ್ಥಳ :- ಗ್ರಾಮದ ಪಶ್ಚಿಮ ಭಾಗ

ಅಭಿಮುಖ :- ಉತ್ತರಾಭಿಮುಖ

ಕಾಲ :- ಕ್ರಿ.ಶ.೧೨ನೇ ಶತಮಾನ

ಶಿಖರಶೈಲಿ :- ಆಧುನಿಕ

ಬಳಸಿದ ಶಿಲೆ :- ಗ್ರಾನೈಟ್ (ಕಣ) ಶಿಲೆ

ಅಣಜಿ ಮಾರ್ಗದಲ್ಲಿ ದ್ಯಾಮವ್ವನಹಳ್ಳಿ ಕ್ರಾಸಿನಿಂದ ಐದು ಕಿ.ಮೀ ಅಂತರದಲ್ಲಿ ಹೊಂದಿಕೊಂಡಿರುವ ಈ ಗ್ರಾಮವಿದೆ. ಗ್ರಾಮದ ಪಶ್ಚಿಮ ಭಾಗದಲ್ಲಿ ಬರುವಂತಹ ಸಿದ್ದೇಶ್ವರ ದೇವಾಲಯಿದೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಹೆಮ್ಮನ ಬೇತೂರಿನ ಸಿದ್ದೇಶ್ವರ ದೇವಾಲಯದ ಶಾಸನದಲ್ಲಿ ಡಿಂಗರ ಮಲ್ಲಯ್ಯ ದೇವರಿಗೆ ಕಲ್ಲುಗುರುಗಳ ಕಾಲುತೊಳೆದು ಛತ್ರಕ್ಕೆ ಭೂದಾನಕೊಟ್ಟ ವಿವರ ಇದೆ ಮತ್ತು ಇದೇ ದೇವರಿಗೆ ಹಾಲುಮಂಡಿಗೆ ನೈವೇದ್ಯಕ್ಕೆಂದು ಭೂದತ್ತಿ ಕೊಟ್ಟ ವಿಚಾರ ತಿಳಿಯುತ್ತದೆ.

ಈ ಗ್ರಾಮದ ಭಕ್ತಜನರು ಆರಾಧಾನೆಯಲ್ಲಿ ಕಾಶಿಗಿಂತ ಮಿಗಿಲಾದವರಂತ ಪ್ರಸಿದ್ದಿಯಾಗಿತ್ತು. ಈ ರೀತಿ ಹೊಗಳಿ ಹಾಡಿದ್ದಾರೆ. ಶಾಸನದ ಕಾಲ ಕ್ರಿ.ಶ.೧೨೬೬ ಹೆಮ್ಮಾಡಿ ದೇವರಸ ಮಗ ವಿಠ್ಠಲ ದೇವರಸ. ಈತ ಹೆಮ್ಮನಬೇತೂರಿನ ಶಾಸನೋಕ್ತದಾನಿ ಅಣಜಿಯು ಶಾಸನದಲ್ಲಿ ಈ ವಿಠ್ಠಲ ದೇವರಸನು ಅಣಜಿ ದೇವರಿಗೆ ಹೆಮ್ಮನಬೇತೂರನ್ನು ದಾನನೀಡಿದನೆಂದು ಮೂಲ ಕಲಿ

ದೇವರಿಗೆ ಅಗ್ರಹಾರವನ್ನಾಗಿ ದಾನ ಮಾಡಿದನೆಂದು ಉಲ್ಲೇಖಯಿದೆ.

ಪ್ರಸ್ತುತ ಈ ದೇವಾಲಯವು ಊರಿನಿಂದ ಅರ್ಧ ಮೈಲಿ ದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಬರುವಂತ ಸಿದ್ದೇಶ್ವರ ದೇವಾಲಯಯಿದೆ. ಈ ದೇವಾಲಯವು ಉತ್ತರಭಿಮುಖವಾಗಿದ್ದು ತಳವಿನ್ಯಾಸ ಗರ್ಭಗೃಹ ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹವು ಚೌಕಾಕಾರವಾಗಿದ್ದು ನಾಲ್ಕು ಕಂಬಗಳನ್ನು ಹೊಂದಿದೆ. ಗರ್ಭಗೃಹದ ಮಧ್ಯದಲ್ಲಿ ಶಿವಲಿಂಗವಿದೆ. ಮತ್ತು ನಾಲ್ಕು ಕಂಬಗಳಲ್ಲಿ ನವರಂಗವನ್ನು ಜೋಡಿಸಲಾಗಿದೆ. ನವರಂಗದ ಮುಂದೆ ನಂದಿ ಇದೆ ನಂದಿ ಮೊದಲು ವಿಗ್ರಹವನ್ನು ಶೀತಲಗೊಂಡಿದ ನಂತರ ನಂದಿ ವಿಗ್ರಹ ನೂತನವಾಗಿ ಅಥವಾ ಹೊಸದಾಗಿ ತಂದು ಇಟ್ಟಿದ್ದಾರೆ. ಏರು ವಿನ್ಯಾಸದಲ್ಲಿ ದೇವಾಲಯವು ಆದಿಷ್ಠಾನದ ಮೇಲೆ ನಿರ್ಮಾಣಗೊಂಡಿದ್ದು ಆದಿಷ್ಠಾನದಲ್ಲಿ ಉಪಾನ ಜಗತಿ ಪದ್ಮಪಟ್ಟಿಕಾತ್ರಿಪಟ್ಟ ಕುಮುದ ದಂತ ಪಂಕ್ತಿ ಹಾಗೂ ಕೆಪೋತಭಾಗವಿದೆ. ದೇವಾಲಯ ಪಶ್ಚಿಮ ಭಾಗದಲ್ಲಿ ಶಾಸನಗಳು ಕ್ರಿ.ಶ.೧೨೬೬ರ ಹೆಮ್ಮಾಡಿ ದೇವರಸನ ಮಗ ವಿಠ್ಠಲ ದೇವರಸ ಈತ ಹೆಮ್ಮನ ಬೇತೂರಿನ ಶಾಸನೋಕ್ತದಾನಿ ಅಣಜಿಯ ಶಾಸನ ಒಂದರಲ್ಲಿ ಈ ವಿಠ್ಠಲ ದೇವರಸನು ಅಣಜಿ ದೇವರಿಗೆ ಹೆಮ್ಮನಬೇತೂರನ್ನು ದಾನ ನೀಡಿದನೆಂದು ಮೂಲ ಕಲಿದೇವರಿಗೆ ಅಗ್ರಹಾರವನ್ನಾಗಿ ದಾನ ಮಾಡಿದನೆಂದು ಉಲ್ಲೇಖಯಿದೆ. ಈ ದೇವಾಲಯದ ಶಿಖರ, ಗೋಪುರವನ್ನು ಆಧುನಿಕವಾಗಿದೆ ಮತ್ತು ಸುತ್ತಲು ಪೌಳಿಯನ್ನು ಕಟ್ಟಿದ್ದಾರೆ ಪೌಳಿಯು ಬಾಗಿಲು ಪೂರ್ವಾಭಿಮುಖವಾಗಿದೆ ಪ್ರವೇಶದ್ವಾರ, ಇದೊಂದು ಸರಳ ರೀತಿಯ ದೇವಾಲಯವಾಗಿದ್ದು ಮೇಲಿನ ಚೌವಣಿಯನ್ನು ಆಧುನಿಕವಾಗಿ ಇತ್ತೀಚೆಗೆ ನಿರ್ಮಿಸಿದ್ದಾರೆ ಇತ್ತೀಚೆಗೆ ಈ ದೇವಾಲಯವನ್ನು ಜೀರ್ಣದ್ಧೋರಗೊಳಿಸಲಾಗಿದೆ.[೧೫]

೪. ಊರು :– ತುಂಬಿಗೆರೆ

ಹೋಬಳಿ:– ಅಣಜಿ

ಹೆಸರು :– ಕಾಶಿರಾಮೇಶ್ವರ ದೇವಾಲಯ

ಸ್ಥಳ :– ಗ್ರಾಮದ ಉತ್ತರ ಭಾಗ

ಅಭಿಮುಖ :– ಪೂರ್ವಾಭಿಮುಖವಾಗಿ

ಕಾಲ :– ಕ್ರಿ.ಶ.೧೨–೧೩ನೇ ಶತಮಾನ

ಶಿಖರಶೈಲಿ :– ಆಧುನಿಕ

ಬಳಸಿದ ಶಿಲೆ :– ಗ್ರಾನೈಟ್ ಕಲ್ಲು

ಈ ದೇವಾಲಯವು ಗ್ರಾಮದ ಉತ್ತರದಿಕ್ಕಿನಲ್ಲಿ ಬರುವಂತ ದೇವಾಲಯವಾಗಿದೆ. ಕಾಶಿ ರಾಮಶ್ವೇರ ದೇವಾಲಯವು ತುಂಬಿಗೆರೆ ಬಗ್ಗೆ ಈ ಶಾಸನ "ಕ್ರಿ.ಶ.೧೧೨೧ರಲ್ಲಿ ದಾವಣಗೆರೆ ಮೂರನೇ ಶಾಸನದಲ್ಲಿ ಕನ್ನುಂಗೌಡಗೆರೆಯ ಏಡುವಗೋಡಿ ತುಂಬಿನಹಳ್ಳಿಯ ಹೊಲದೊಳಗೆ ದಾವಣಗೆರ್ಯ ಸೀಮೆಯಂ ಎಂದು ಉಲ್ಲೇಖವಿದೆ." ತುಂಬಿನಹಳ್ಳಿಯೇ ತುಂಬಿಗೆರೆಯಾಗಿರಬೇಕು.

ಕ್ರಿ.ಶ.೧೮೪೪ರಲ್ಲಿ ಇದೇ ಗ್ರಾಮದಲ್ಲಿ ಜನಿಸಿದ ಶ್ರೀ ಬ್ರಹ್ಮಾನಂದ ಸ್ವಾಮಿ ಮೊದಲು ಗೃಹಸ್ಥರಾಗಿದ್ದು ತಮ್ಮ ಪತ್ನಿಯ ಮರಣಾನಂತರ ಕ್ಷೇತ್ರದರ್ಶನ ಮಾಡುತ್ತಾ ವೈರಾಗ್ಯ ನಿಧಿಯಾಗಿ ಶ್ರೀ ಗಣೇಶವಧೂತರ ಶಿಷ್ಯರಾಗಿ ನಂಜನಗೂಡಿನ ಶ್ರೀ ನಾರಾಯಣಯತಿಗಳಿಂದ ಆಶ್ರಮವಾಸಿಗಾಳಾಗಿ ತಮ್ಮ ಪೂರ್ವದ ಚನ್ನಪ್ಪ ಎನ್ನುವ ನಾಮದಿಂದ ಮುಕ್ತರಾಗಿ ಶ್ರೀ ಬ್ರಹ್ಮಾನಂದರಾದರು. ಶೃಂಗೇರಿ ಶ್ರೀಗಳವರಿಂದ ಆಶೀರ್ವಾದ ಪಡೆದು ಅನೇಕ ವರ್ಷಗಳ ಕಾಲ ಹರಿಹರದಲ್ಲಿದ್ದು ೧೯೦೪ರಲ್ಲಿ ಶಿವರಾತ್ರಿಯೆಂದು ಶಿವಾಧೀನರಾದರು ಇವರ ಸಮಾಧಿ ತುಂಬಿಗೆರೆಯಲ್ಲಿದೆ.

ಈ ದೇವಾಲಯವು ಪೂರ್ವಾಭಿಮುಖವಾಗಿದೆ ಗರ್ಭಗುಡಿ ಚೌಕಾಕರದ ಗರ್ಭಗುಡಿಯಲ್ಲಿ ಲಿಂಗವಿದ್ದು ಅಂತರಾಳ ಮತ್ತು ಮುಖಮಂಟಪವಿದೆ. ಅಲ್ಲದೇ ದೇವಾಲಯದ ಎದುರು ಭಾಗಕ್ಕೆ ನಂದಿಯಿದೆ. ನಾಲ್ಕು ಕಂಬಗಳಲ್ಲಿ ಯಾವುದೇ ಶಿಲ್ಪಗಳು ಕಾಣುವುದಿಲ್ಲ ಆದರೆ ಶಿಖರ ಆಧುನಿಕ ಕಾಲದ್ದಾಗಿದೆ ಅಂತರಾಳ ವಿಶಾಲವಾಗಿದೆ ಇದು ತುಂಬಿಗೆರೆಯಲ್ಲಿ ಬರುವಂತಹ ಒಂದು ರಾಮಶ್ವೇರ ದೇವಾಲಯವುಯಾಗಿದೆ ಕಂಬಗಳಿಗೆ ಬಳಿ ಮತ್ತು ಕೆಂಪು ಬಣ್ಣದನ್ನು ಹಚ್ಚಿದ್ದಾರೆ ಗೋಪುರವು ಆಧುನಿಕವಾಗಿ ನಿರ್ಮಾಣ ಮಾಡಲಾಗಿದೆ. ಈ ದೇವಾಲಯದಲ್ಲಿ ಕಂಡುಬರುವಂತೆ ಸುಖನಾಸನಯಲ್ಲಿ ನಾಗರಎಡೆ ಶಿಲ್ಪಿ ಕಾಣುತ್ತವೆ. ಇದು ಕಾಶಿ ರಾಮಶ್ವೇರ ದೇವಾಲಯದಲ್ಲಿ ಬರುವಂತಹ ವಿಶೇಷ ನಾಗರಎಡೆಯ ಶಿಲ್ಪವಾಗಿದೆ. ಈ ದೇವಾಲಯದ ಲಿಂಗ ಮತ್ತು ನಂದಿ ಇರುವಂತಹ ಲಕ್ಷಣಗಳ ಆಧಾರದ ಮೇಲೆ ಇದು ಶೈವ ದೇವಾಲಯವೆಂದು ಹೇಳಬಹುದು.[೧೬]

೫. ಊರು :– ಕುರುಡಿ

ಹೋಬಳಿ :– ಅಣಜಿ

ಹೆಸರು :– ದ್ವಿಕೂಟ ದೇವಾಲಯ

ಸ್ಥಳ :– ಊರಿನ ಮಧ್ಯ ಭಾಗದಲ್ಲಿ

ಅಭಿಮುಖ :– ಪೂರ್ವಾಭಿಮುಖವಾಗಿ

ಕಾಲ :– ಕ್ರಿ.ಶ.೧೨ನೇ ಶತಮಾನ

ಶಿಖರಶೈಲಿ :– ಆಧುನಿಕ

ಬಳಸಿದ ಶಿಲೆ :– ಗ್ರಾನೈಟ್ ಶಿಲೆ

ದಾವಣಗೆರೆಯಿಂದ ಅಣಜಿ ಮಾರ್ಗದಲ್ಲಿ ೬ಕೀ.ಮೀ ಇರುವ ಕುರುಡಿ ಗ್ರಾಮವಾಗಿದೆ. ಇದು ಅಣಜಿ ಹೋಬಳಿಗೆ ಸೇರಿದ ಗ್ರಾಮವಾಗಿದೆ. ಶಾಸನದಲ್ಲಿ ಕ್ರಿ.ಶ.೧೩೩೯ರಲ್ಲಿ ಕುರುಡಿಯ ಬಡಗಿಮಲ್ಲೋಜನು ಶಿಭಾರ ಮಾಡಿಸಿದ ವಿಚಾರವಿದೆ. ಶಾಸನದಲ್ಲಿ 'ಕೊರಡಿ' ಎಂದು ಉಲ್ಲೇಖವಿದೆ.

ಈ ದೇವಾಲಯವು ಊರಿನ ಮಧ್ಯಭಾಗದಲ್ಲಿ ಬರುವಂತಹ ದ್ವಿಕೂಟ ದೇವಾಲಯವಾಗಿದೆ. ಎರಡು ಗರ್ಭಗುಡಿ ಮತ್ತು ಎರಡು ಗೋಪುರವನ್ನು ಕಾಣಬಹುದು. ಗರ್ಭಗುಡಿ ಬಂದರಲ್ಲಿ ಹಗೇವು ಸಿದ್ದೇಶ್ವರ ಮೂರ್ತಿಯಿದೆ. ಇನ್ನೊಂದು ಗರ್ಭಗುಡಿಯಲ್ಲಿ ರೇವಣಸಿದ್ದೇಶ್ವರ ಮೂರ್ತಿಯಿದೆ. ದೇವಾಲಯದ ಒಳಭಾಗವು ತಗ್ಗುಯಾಗಿದ್ದು ಗರ್ಭಗುಡಿ ಪಕ್ಕದಲ್ಲಿ ಮೂರ್ತಿ ಶಿಲ್ಪಗಳು ಕಾಣುತ್ತಾವೆ.

ಇಲ್ಲಿ ಯಾವುದೇ ಶಿಲ್ಪಗಳು ಕಂಭಗಳಲ್ಲಿ ಕಂಡುಬರುವುದಿಲ್ಲ ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭಯಿದೆ ದೇವಾಲಯ ದಕ್ಷಿಣಭಾಗದಲ್ಲಿ ಚಿಕ್ಕ ಗುಡಿಯನ್ನು ಶ್ರೀ ಜಟಿಗೆಪ್ಪ ದೇವಾಲಯ ಕಾಣತ್ತವೆ. ಮತ್ತು ಈ ದೇವಾಲಯವು ಎರಡು ಗೋಪುರ ಆಧುನಿಕ ನಿರ್ಮಾಣ ಮಾಡಿದ್ದಾರೆ ಇತ್ತೀಚೆಗೆ ಈ ದೇವಾಲ್ಲಯನ್ನು ಜೀರ್ಣದ್ಧೋರಗೊಳಿಸಲಾಗಿದೆ.[೧೭]

೬. ಊರು :– ಎಲೇಬೇತೂರು

ಹೋಬಳಿ :– ಕಸಬಾ

ಹೆಸರು :– ಶ್ರೀ ಸವಗದ್ದಿಗೆ ಸಂಗಮೇಶ್ವರ ದೇವಾಲಯ

ಸ್ಥಳ :– ಊರಿನ ಮಧ್ಯಭಾಗದಲ್ಲಿದೆ.

ಅಭಿಮುಖ :– ಪೂರ್ವಾಭಿಮುಖವಾಗಿ

ಕಾಲ :– ತಿಳಿದುಬಂದಿಲ್ಲ

ಶಿಖರಶೈಲಿ :– ಶಿಖರಯಿದೆ.

ಈ ದೇವಾಲಯವು ಊರಿನ ಮಧ್ಯಭಾಗದಲ್ಲಿದೆ ಈ ದೇವಾಲಯದ ಗರ್ಭಗುಡಿಯು ಪೂರ್ವಾಭಿಮುಖವಾಗಿದೆ. ದೇವಾಲಯವು ಗರ್ಭಗುಡಿ ಅಂತರಾಳ ನವರಂಗವನ್ನು ಹೊಂದಿದೆ. ಈ ದೇವಾಲಯದ ಗರ್ಭಗೃಹ ಚೌಕಾಕಾರದಲ್ಲಿದ್ದು ಅದರಲ್ಲಿ ಲಿಂಗ ಮತ್ತು ನಂದಿ ವಿಗ್ರಹ ಕಾಣುತ್ತಾವೆ. ನವರಂಗದಲ್ಲಿ ಚೌಕ ಮತ್ತು ಅಷ್ಟಕೋನ ಹಾಗೂ ವೃತ್ತಾಕಾರದ ನಾಲ್ಕು ಕಂಬಗಳಿದ್ದು ಅವು ಸರಳವಾಗಿವೆ. ಈ ದೇವಾಲಯದ ಎಡಭಾಗ ಪಕ್ಕದಲ್ಲಿ ಜಿನ ತೀರ್ಥಂಕರ ವಿಗ್ರಹ ಕಾಣುತ್ತಾವೆ. ಬೇತೂರು ಗ್ರಾಮ ಬಹಳ ಹಿಂದಿನಿಂದಲೂ ಬೇತೂರು ಜೈನಮತ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಈ ತೀರ್ಥಂಕರ ಆಧಾರವ ಕಾಣುತ್ತಾವೆ.

ಬೇತೂರಿನಲ್ಲಿ ಬರುವಂತಹ ಶಾಸನದಲ್ಲಿ ಉಲ್ಲೇಖಯಿದೆ ಈ ಪ್ರದೇಶವನ್ನಾಳಿದ ಕೂಚರಾಜ ಅವನ ಗುರು ಶ್ರೀ ಮಜ್ಜಿನಭಟ್ಟಾದೇವರು ವೀರಸೇನ ಜಿನಾಸೇನಾಚಾರ್ಯ ಜೀನಸೇನಾಯೋಗಿ ಮಂತ್ರದಿಂದ ದೇವೆಂದ್ರ ಸುತ್ತಜೈನಮಾರ್ಗತಪದಿಂ ಪದ್ಮಸೇನಾಯತಿನಾಥ ಕೃತಾರ್ಥವೆಂದು ಚಟ್ಟನೃಪತಿ ಕೂಚರಾಜದಾಡೇಶನ ಮುಂತಾದವರು ವರ್ಣನೆಯು ಇದೇ ಬೇತೂರಿನ ಶಾಸನದಲ್ಲಿ ಉಲ್ಲೇಖಯಿದೆ.[೧೮]

“ಪಾಂಡ್ಯದೇಶ ಮಧ್ಯಧ್ಯಸಿತಮದ ಬೇತೂರು ಚಲುವೆಂತನೆ ॥ ನಿರುಪಮದೇವಾಗಾರಂ ಸುರಚಿತಮೆನಿಸಿರ್ದ ವಿಪಣಗಣಿ ಕಾವಾಟಂ ಕರಮೆ ಸೇವಾ ಪ್ರಕಾರಂ ಪರಿದೆಸೆದಾದ್ಯುನದಿಂದೆ ಬೇತೂರುರೆಸೆಗುಂ ॥ ಮತ್ಸಮಾಬೇತೂರು ಮನೆಯರ ಸೆಟ್ಟಗುತ್ತರ ಗೌಡುಗಳು ಊರೋಡೆಯರ ಮಹೋನ್ನತಿಯಂತಿದೆ.” ಎಂದು ಸುಂದರವಾಗಿ ವರ್ಣಿಸಲಾಗಿದೆ. ಈ ಎಲ್ಲಾ ವಿಚಾರಗಳನ್ನು ಗಮನಿಸಿದರೆ, ಈ ಪ್ರದೇಶದಲ್ಲಿ ಜೈನಮತ ಪ್ರಚಾರದಲ್ಲಿತ್ತು ಎಂದು ತಿಳಿಯಬಹುದು.

ಈ ದೇವಾಲಯದ ಶಿಖರದ ಮೇಲ್ಭಾಗದಲ್ಲಿ ಮೂರ್ತಿಶಿಲ್ಪಗಳು ಕಂಡು ಬಂದಿವೆ. ಶಿವ, ಪಾರ್ವತಿ, ನಂದಿ ಗಣೇಶ, ಮೂರ್ತಿ ಶಿಲ್ಪ ಸುತ್ತ ನಾಲ್ಕು ಮೂರ್ತಿಗಳಲ್ಲಿ ನಂದಿ ಶಿಲ್ಪ ಕಾಣುತ್ತಾ ಕಂಡುಬಂದಿವೆ.

೭. ಊರು :– ಆನುಗೋಡು

ಹೋಬಳಿ :– ಆನುಗೋಡು ಹೋಬಳಿಕೇಂದ್ರ

ಹೆಸರು :– ಮರುಳು ಸಿದ್ದೇಶ್ವರ ದೇವಾಲಯ

ಸ್ಥಳ :– ಗ್ರಾಮದ ಮಧ್ಯ ಭಾಗದಲ್ಲಿ.

ಅಭಿಮುಖ :– ಪೂರ್ವಾಭಿಮುಖವಾಗಿ

ಕಾಲ :– ಕ್ರಿ.ಶ.೧೧–೧೨ನೇ ಶತಮಾನ

ಶಿಖರಶೈಲಿ :– ಆಧುನಿಕ ಕಾಲದ್ದು

ದಾವಣಗೆರೆಯಿಂದ ಪಿ.ಬಿ.ಹೆದ್ದಾರಿಯಲ್ಲಿ ನಾಲ್ಕುರಲ್ಲಿ ಆನುಗೋಡು ಎಂಬ ಗ್ರಾಮವು ಉತ್ತರಭಾಗದಲ್ಲಿ ಬರುತ್ತಿದೆ. ಈ ಮರುಳು ಸಿದ್ದೇಶ್ವರ ಮೂಲ ದೇವಾಲಯವು ಶೀತಲಗೊಂಡನಂತರ ಹೊಸದಾಗಿ ನಿರ್ಮಾಣ ಮಾಡಲಾಗಿದೆ. ಈ ಗ್ರಾಮದ ಉತ್ತರದಲ್ಲಿ ಶ್ರೀ ಮರುಳು ಸಿದ್ದೇಶ್ವರ ದೇವಾಲಯವನ್ನು ಹನ್ನೊಂದನೆ ಶತಮಾನದಲ್ಲಿ ತ್ರಿಕೂಟಚಲಶೈಲಿಯಲ್ಲಿ ಕಟ್ಟಲಾಗಿತ್ತು. ಗೋಪುರವು ೧೭ನೇ ಶತಮಾನದಾಗಿತ್ತು ಈಗ ದೇವಾಲಯ ಜೀರ್ಣೋದ್ದಾರವಾಗಿದೆ.

ಕ್ರಿ.ಶ. ೧೧೨೩ರ ಶಾಸನದಲ್ಲಿ ಹೊಯ್ಸಳರ ಆರನೇ ವಿಕ್ರಮಾದಿತ್ಯನು ಈ ದೇವಾಲಯಕ್ಕೆ ದತ್ತಿ ಬಿಟ್ಟನೆಂದು ಬಂದು ಶಾಸನದಲ್ಲಿ ಉಲ್ಲೇಖವಿದೆ. ಇಲ್ಲಿಯ ಅನೇಕ ಶಾಸನಗಳಿಂದ ಆನುಗೋಡುದಲ್ಲಿ ಅನೇಕ ದೇವಾಲಯಗಳಿದ್ದು ಅವುಗಳಲ್ಲಿ ಮುಖ್ಯವಾದವುಗಳು ರಾಯಪಾಂಡ್ಯನ ರಾಣಿ ಸೋಮಲದೇವಿಯು ಕಟ್ಟಿಸಿದ ಸೋಮನಾಥ ದೇವಾಲಯ, ಅವಿಮುಕ್ತೇಶ್ವರ ಧರ್ಮೇಶ್ವರ ವಾಸುದೇವ ಜಗತೇಶ್ವರ ಮುಂತಾದ ದೇವಾಲಯಗಳು ಶಿತಲಗೊಂಡಿವೆ ಆದರೆ ಬಸವನ ಹಿಂದಿರುವ ಈಶ್ವರಲಿಂಗ ಸಿದ್ದೇಶ್ವರ ಇವುಗಳಲ್ಲಿ ಒಂದಾಗಿರಬಹುದು.[೧೯]

ಈ ದೇವಸ್ಥಾನವು ಪೂರ್ವಾಭಿಮುಖವಾಗಿದ್ದು, ಗರ್ಭಗುಡಿ, ನವರಂಗ, ಸುಕಾನಾಶಿ, ಶಿಖರ ನಾಲ್ಕು ಕಂಬಹೊಂದಿದೆ. ಹೊಯ್ಸಳ ವಾಸ್ತುಶಿಲ್ಪದ ಶೈಲಿ ಕಾಣುತ್ತೇವೆ. ಪಾರ್ವತಿ, ವೀರಭದ್ರ, ಈಶ್ವರ, ಸೂರ್ಯನಾರಾಯಣ, ಬಸವ ಅನೇಕ ವಿಗ್ರಹಗಳನ್ನು ಆವರಣದಲ್ಲಿ ಇಟ್ಟಿದ್ದಾರೆ. ಮರುಳಸಿದ್ದೇಶ್ವರ ದೇವಾಲಯ ಅಕ್ಕ ಪಕ್ಕದಲ್ಲಿ ಚಿಕ್ಕಗುಡಿಗಳಿವೆ. ಗರ್ಭಗುಡಿಯ ಮೇಲುಭಾಗದಲ್ಲಿ ಮರುಳಸಿದ್ದೇಶ್ವರನು ಆನೆ ಮೇಲೆ ಕುಳಿತುಕೊಂಡು ಬರುತ್ತಿರುವ ಪೋಟೊಯಿದೆ. ಮತ್ತು ಇನ್ನೊಂದು ಪೋಟೊದಲ್ಲಿ ಆನೆಗೆ ಮತು ಬರಿಸಿ ಮರುಳಸಿದ್ದೇಶ್ವರ ಮೇಲೆರಗುವಂತೆ ಮಾಡಿದ್ದರಿಂದ ಮದವೇರಿದ ಆನೆಯ ಕೊಂಬನ್ನು ಮುರಿಯುತ್ತಿರುವ ಮರುಳುಸಿದ್ದಶ್ವರು ಪೋಟೊಚಿತ್ರವನ್ನು ಕಾಣಬಹುದು. ಪ್ರಸ್ತುತ ದೇವಾಲಯದ ಪಕ್ಕದಲ್ಲಿ ಚಿಕ್ಕಗುಡಿಗಳು ಜಟ್ಟೆಪ್ಪ (ಜನಾರ್ಧನ) ಮತ್ತು ಗೌರಮ್ಮ ವಿಗ್ರಹಗಳು ಗುಡಿಗಳಿವೆ. ಜಟ್ಟೆಪ್ಪನ ಗರ್ಭಗುಡಿಯಲ್ಲಿ ಶಿವಲಿಂಗ,

ಶಾಸನ ಕಾಣುತ್ತಾವೆ ದುಂಡಾಕಾರ ಇರುವ ಕಲ್ಲುನ್ನು ಜಟ್ಟೆಪ್ಪ ಎಂದು ಊರಿನ ಗ್ರಾಮಸ್ಥರು ಕರೆಯುತ್ತಾರೆ ಈ ದೇವಾಲಯವು ಆಧುನಿಕ ಕಾಲದ ದೇವಾಲಯವಾಗಿದೆ ಈ ದೇವಾಲಯವನ್ನು ಜೀರ್ಣೋದ್ದಾರಗೊಳಿಸಲಾಗಿದೆ.

**ಶಾಕ್ತ ದೇವಾಲಯಗಳು**

ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯು ಆರಾಧಿಸುವ ಪಂಥವನ್ನು ಶಾಕ್ತ ಪಂಥವೆಂದು ಕರೆಯುತ್ತಾರೆ ಭಾರತದಲ್ಲಿ ಶಾಕ್ತ ಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಿದ್ದಾರೆ. ವೈದಿಕ ಕಾಲದ ನಂತರ ಶಕ್ತಿ ದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತಾವೆ. ಶಾಕ್ತರ ಆರಾಧ್ಯ ದೇವತೆಯೇ ಶಕ್ತಿ ದೇವತೆ ಈ ದೇವತೆಗಳಿಗೆ ಆದಿಶಕ್ತಿ ಪರಮಶಕ್ತಿ ಮಹಾಶಕ್ತಿ ಮಹಾದೇವಿ ಮುಂತಾದ ಹೆಸರು ಮೂಲಕ ಆರಾಧನೆ ಮಾಡುತ್ತಾರೆ. ಊರಮ್ಮ ಮಾರಮ್ಮ ಉಡ್ಸಸಮ್ಮ, ಉತ್ಸಾಂಬ ದುರ್ಗಮ್ಮ ಪಾರ್ವತಿ ಪ್ರಮುಖ ಶಾಕ್ತ ದೇವತೆಗಳಾಗಿವೆ. ಅಣಜಿ ಪ್ರದೇಶದಲ್ಲಿ ಇಂತಹ ಶಾಕ್ತ ದೇವರುಗಳು ಆರಾಧನೆಯು ಇತ್ತು ಎಂಬುದಕ್ಕೆ ಅನೇಕ ದೇವತ ಮೂರ್ತಿಗಳು ಮತ್ತು ದೇವಾಲಯಗಳು ಕಂಡುಬರುತ್ತವೆ.

೧. ಊರು :- ಅಣಜಿ

ಹೋಬಳಿ :- ಅಣಜಿ

ಹೆಸರು :- ಮಾರಮ್ಮ ದೇವಾಲಯ

ಸ್ಥಳ :- ಗ್ರಾಮದ ದಕ್ಷಿಣ ಭಾಗ

ಅಭಿಮುಖ :-ಪೂರ್ವಾಭಿಮುಖವಾಗಿ

ಕಾಲ :-ತಿಳಿದಿಲ್ಲ

ಶಿಖರಶೈಲಿ :- ಆಧುನಿಕ

ಈ ದೇವಾಲಯವು ಜಗಳೂರಿನಿಂದ ಹೋಗುವ ಮಾರ್ಗದಲ್ಲಿ ಎಡಭಾಗದಲ್ಲಿ ಕಂಡುಬರುತ್ತಿದೆ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಮೂರು ಗರ್ಭಗೃಹವು ಚೌಕಾಕಾರವಾಗಿದ್ದು ಗಣೇಶ, ಮಾರಮ್ಮ ಬೀರಲಿಂಗೇಶ್ವರ ಮೂರ್ತಿಗಳು ಕಾಣುತ್ತಾವೆ. ನವರಂಗ, ಶಿಖರ ಹಳೇ ಊರಿನ ಮಟ್ಟಿ ಮೇಲೆ ನರಸಿಂಹಸ್ವಾಮಿ ದೇವಾಲಯವಿದೆ. ಹಿಂದೆ ಇಲ್ಲಿ ಹಳೇ ಊರಿದ್ದಿತ್ತು ಕಲ್ಯಾಣ ಚಾಲುಕ್ಯ ಅಥವಾ ಯೊಯ್ಸಳರ ಶೈಲಿಯನ್ನು ಹೊಲುವ ದೇವಾಲಯವು ಭಗ್ನಾವಶೇಷಗಳು ಇವೆ ಇದರ ಸುತ್ತಮುತ್ತಲಿದ್ದು ಪ್ರಾಚೀನ ಭದ್ರತೆಯನ್ನು ಉಳಿಸಿಕೊಂಡಿಲ್ಲ. ಹಳೆಯ ದೇವಾಲಯದ ಕಂಬಗಳನ್ನು ಮಾರಮ್ಮ ದೇವಾಲಯಕ್ಕೆ ಉಪಯೋಗಿಸಿಕೊಂಡಿದ್ದಾರೆ ಹೀಗೆ ಹಳೆಯ ಊರಿನ ಸ್ಥಳವು ಸಶ್ಮಾವಾಗಿ ಕಾಣುತ್ತವೆ.[೨೦]

ಈ ದೇವಾಲಯವು ಮೂರು ಗರ್ಭಗೃಹಗಳಿಗೆ ಹೊಂದಿಕೊಂಡಂತೆ ಒಂದೇ ನವರಂಗವಿದೆ ನವರಂಗದ ಮಧ್ಯ ಬೃಹದಾಕಾರದ ನಾಲ್ಕು ಕಂಬಗಳಿವೆ. ಕಂಬಗಳು ಪೀಠ, ಪಾದ, ದಂಡ,

ಕಳಶ, ತಾಟಿಕಾ ಘಟ, ಮಂಡಿ ಫಲಕ, ಶಿರ, ಬೋಧಿಗೆಯಲ್ಲಿದೆ. ಈ ದೇವಾಲಯದ ಮೇಲು ಭಾಗದಲ್ಲಿ ನಾಲ್ಕು ಭಾಗದಲ್ಲಿ ಸಿಂಹಗಳು ಗಣೇಶ, ಶಿವ, ಪಾರ್ವತಿ, ಶಿಖರದ ಮಧ್ಯಭಾಗದಲ್ಲಿ ಸಿಂಹದ ಮೇಲೆ ಕುಳಿತಿರುವ ಶಕ್ತಿದೇವತೆಯನ್ನು ಕಾಣುತ್ತಾವೆ. ಈ ದೇವಾಲಯ ಗೋಡೆಯ ಮೇಲೆ ಮೂರ್ತಿಶಿಲ್ಪ ಕಂಡು ಬರುತ್ತಾವೆ. ದೇವಾಲಯವು ಆಧುನಿಕ ಕಾಲವೆಂದು ತಿಳಿಯಲಾಗಿದೆ.[೨೧]

೨. ಊರು :– ಅಣಜಿ

ಹೋಬಳಿ :– ಅಣಜಿ

ಹೆಸರು :– ಶ್ರೀ ಉಡಸಲಮ್ಮದೇವಿ ದೇವಾಲಯ

ಸ್ಥಳ :– ಊರಿನ ಮಧ್ಯ ಭಾಗದಲ್ಲಿ.

ಅಭಿಮುಖ :– ಪೂರ್ವಾಭಿಮುಖ

ಕಾಲ :– ತಿಳಿದುಬಂದಿಲ್ಲ

ಶಿಖರಶೈಲಿ :– ಶಿಖರ ಇಲ್ಲ

ಈ ದೇವಾಲಯವು ಶ್ರೀ ಉಡಸಮ್ಮ ದೇವಿಯು ಕುರಡಿ ಹೋಗು ಮಾರ್ಗದಲ್ಲಿ ಬರುತ್ತಿದೆ ಊರಿನ ಮಧ್ಯ ಭಾಗದಲ್ಲಿ ದೇವಾಲಯಯಿದೆ. ಇದರ ಗರ್ಭಗೃಹ ಪೂರ್ವಾಭಿಮುಖವಾಗಿರುವ ದೇವಾಲಯವಾಗಿದೆ. ಗರ್ಭಗೃಹ ನವರಂಗ ಮುಖಮಂಟಪಗಳನ್ನು ಹೊಂದಿದೆ ಆಧುನಿಕ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯ ಗರ್ಭಗುಡಿಯು ಚೌಕಾಕಾರವಾಗಿದೆ ಉಡಸಲಮ್ಮ ಮೂರ್ತಿ ಕಾಣುತ್ತಾವೆ. ಮುಂದೆ ವಿಶಾಲವಾದ ಅಂಗಳಯಿದೆ ದೇವಾಲಯದ ಗೋಡೆಯ ಮೇಲುಭಾಗದಲ್ಲಿ ಸಿಂಹ ಮೂರ್ತಿ ಶಿಲ್ಪಗಳು ಕಾಣುತ್ತಾವೆ. ಮುಂದೆ ಚಿಕ್ಕ ಶಿಖರದಲ್ಲಿ ಸಿಂಹದ ಮೇಲೆ ಕುಳಿತಿರುವ ಸ್ತ್ರಿ ಮೂರ್ತಿ ಶಿಲ್ಪ ಕಾಣುತ್ತಾವೆ. ಆದರೆ ಈ ದೇವಿಯ ಜಾತ್ರೆಯನ್ನು ಐದು ವರ್ಷಕ್ಕೆ ಒಂದು ಸಾರಿ ಜಾತ್ರೆಯನ್ನು ಮಾಡುತ್ತಾರೆ ಪ್ರಾಣಿ ಬಲಿ ಕೊಡುತ್ತಾರೆ. ಪ್ರಸ್ತುತ ಈ ದೇವಾಲಯವು ಆಧುನಿಕವಾಗಿ ನಿರ್ಮಾಣ ಮಾಡಿದ್ದಾರೆ ಎಂದು ಊರಿನ ಗ್ರಾಮಸ್ಥರು ಹಿರಿಯರು ಮಾಹಿತಿ ನೀಡಿದ್ದರು.

೩. ಊರು :– ಆನುಗೋಡು

ಹೋಬಳಿ :– ಆನುಗೋಡು

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ಗ್ರಾಮದ ಉತ್ತರ ಭಾಗ

ಅಭಿಮುಖ :– ದಕ್ಷಿಣಾಭಿಮುಖವಾಗಿ

ಕಾಲ :– ಕ್ರಿ.ಶ.೧೭–೧೮ನೇ ಶತಮಾನ

ಶಿಖರಶೈಲಿ :– ಶಿಖರ ಇಲ್ಲ

ಈ ದೇವಾಲಯವು ಗ್ರಾಮದ ಉತ್ತರ ದಿಕ್ಕಿನಲ್ಲಿ ಕಂಡು ಬರುತ್ತಿದೆ. ಆನುಗೋಡು ಪಿ.ಬಿ. ಹೆದ್ದಾರಿ ೪ರಲ್ಲಿ ಬರುವಂತಹ ಹೋಬಳಿ ಕೇಂದ್ರ ಮತ್ತು ಶ್ರೀ ಮರುಳಸಿದ್ದೇಶ್ವರ ಪವಾಡ ನಡೆಸಿದ ಲೀಲಾಕ್ಷೇತ್ರ ಎಂದು ಕೂಡ ಕರೆಯಲಾಗಿದೆ.

ಮರುಳುಸಿದ್ದೇಶ್ವರನು ಪಾಂಡ್ಯ ರಾಜ್ಯದ ಪುರೋಹಿತ ವರ್ಗದವರಿಗೆ ಕೋಪಕ್ಕೆ ತುತ್ತಾಗಿ ಶಿಕ್ಷೆಗೆ ಗುರಿಯಾಗಿತ್ತಿರುವಾಗ ತನ್ನನ್ನು ತಾನು ರಕ್ಷಿಸುತ್ತಾ ಮುಚ್ಚನೂರಿನಲ್ಲಿ ಮುಚ್ಚಿಟ್ಟುಕೊಂಡು ಉಳುಪನ ಕಟ್ಟೆಯಲ್ಲಿ ಉಳಿದುಕೊಂಡು ಈ ಊರಿಗೆ ಬಂದಾಗ ಮದಿಸಿದ ಆನೆಯ ಕೋಡುಗಳನ್ನು ಕಿತ್ತು ಹಿಮ್ಮೆಟ್ಟಿಸಿದ್ದರಿಂದ ಆನೆ + ಕೋಡು ಆನುಗೋಡು ಎಂದು ಹೆಸರು ಬಂದಿತು ಮರುಳಸಿದ್ದೇಶ್ವರ ಕಾವ್ಯದಲ್ಲಿ ಆಂಜನೇಯ ದೇವಾಲಯದ ಬಗ್ಗೆ ಉಲ್ಲೇಖವಿದೆ.

ಈ ದೇವಾಲಯವು ಗರ್ಭಗೃಹ ಚೌಕಾಕಾರಯಿದೆ ಗರ್ಭಗೃಹ ದಕ್ಷಿಣಾಭಿಮುಖವಾಗಿದ್ದು ಇದರಲ್ಲಿ ಸುಮಾರು ೩–೪ ಅಡಿ ಎತ್ತರ ಆಂಜನೇಯ ಮೂರ್ತಿಯಿದೆ ಮತ್ತು ಎರಡು ಕಂಬಗಳು ಕಾಣುತ್ತವೆ. ಕಂಬಗಳ ಮೇಲೆ ಅಥವಾ ಗೋಡೆಯ ಮೇಲುಭಾಗದಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಆಂಜನೇಯ ಮೂರ್ತಿಯು ತನ್ನಬಲ ಹಸ್ತವನ್ನು ಚಪಡಹಸ್ತವಾಗಿ ಮೇಲೆತ್ತಿದ್ದಾನೆ. ಎಡಹಸ್ತವು ಸೊಂಟದ ಮೇಲಿದ್ದು ಕೈಯಲ್ಲಿ ಗದೆಯನ್ನು ಹಿಡಿದಿದ್ದಾನೆ ಕೊರಳಿನಲ್ಲಿ ಹಾರ ಕಾಲು ಕಾಡಗವನ್ನು ಧರಿಸಿದ್ದಾನೆ. ಮತ್ತು ಆಂಜನೇಯ ದೇವಾಲಯ ಬಳಿ ಕೇಶಮೂರ್ತಿ ಚಿಕ್ಕ ಗರ್ಭಗುಡಿಯಿದೆ ಗರ್ಭಗೃಹ ಎಡ ಮತ್ತು ಬಲಭಾಗದಲ್ಲಿ ಚಿಕ್ಕ ಗೂಡುಗಳು ಇವೆ ದೀಪದ ಗೂಡುಗಳು ಎಂದು ಕರೆಯುತ್ತಾರೆ. ಅಂತರಂಗ ನವರಂಗ ಗೋಡೆಯು ಶೀತಲಗೊಂಡಿದೆ ಈ ದೇವಾಲಯವು ಚಿತ್ರದುರ್ಗದ ಪಾಳೆಯಗಾರ ಕಾಲದ್ದಾಗಿದೆ.

೪. ಊರು :– ಆಲೂರು

ಹೋಬಳಿ :– ಅಣಜಿ

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ಊರಿನ ಮಧ್ಯಭಾಗ.

ಅಭಿಮುಖ :–ದಕ್ಷಿಣಾಭಿಮುಖ

ಕಾಲ :– ತಿಳಿದು ಬಂದಿಲ್ಲ

ಶಿಖರಶೈಲಿ :– ಆಧುನಿಕ

ಪ್ರಸ್ತುತ ಈ ದೇವಾಲಯವು ದಾವಣಗೆರೆಯಿಂದ ಅಣಜಿ ಮಾರ್ಗದಿಂದ ಆಲೂರುಹಟ್ಟಿ ಕ್ರಾಸಿನಿಂದ ೪.ಕಿ.ಮೀ ದೂರದಲ್ಲಿ ಬರುವಂತಹ ಗ್ರಾಮವಾಗಿದೆ. ಗರ್ಭಗೃಹ ಅಂತರಾಳ ನಾಲ್ಕು ಕಂಬಗಳ ಇವೆ. ಗೋಡೆಯ ಮೇಲೆ ಭಾಗದಲ್ಲಿ ಮೂರ್ತಿ ಶಿಲ್ಪ ಕಾಣುತ್ತಾವೆ. ಈ ದೇವಾಲಯವು ಅತ್ಯಂತ ಸರಳವಾದ ವಾಸ್ತುನಿಂದ ಕೂಡಿದೆ. ಗರ್ಭಗೃಹವನ್ನು ಹೊಂದಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯವು ಸುಮಾರು ೩ ಅಡಿ ಎತ್ತರದ ಆಂಜನೇಯ ವಿಗ್ರಹವನ್ನು ಗರ್ಭಗೃಹದಲ್ಲಿ

ಕಾಣುತ್ತೇವೆ. ಮತ್ತು ಶಿಖರವು ಆಧುನಿಕವಾಗಿದೆ. ಗೋಡೆಯ ಮೇಲುಭಾಗದಲ್ಲಿ ಆಂಜನೇಯನ ಶಿಲ್ಪ ಈಶ್ವರ ಶಿಲ್ಪ ಗರ್ಭಗೃಹ ಅಂತರಾಳದಲ್ಲಿ ದೀಪಸ್ತಂಭ ಕಾಣುತ್ತೇವೆ. ಮತ್ತು ಆಂಜನೇಯ ದೇವಾಲಯದ ಪಕ್ಕದಲ್ಲಿ ಚಿಕ್ಕ ಗುಡಿಯಲ್ಲಿ ಈ ದೇವರ ವಿಶೇಷವೆಂದರೆ ಒಂದು ಜೊತೆ ದೊಡ್ಡಗಾತ್ರದ ಚರ್ಮದ ಜೋಡು (ಪಾದರಕ್ಷೆ)ಗಳಿವೆ. ಕೂಡು ಪೂಜೆ ನಡೆಯುತ್ತದೆ. ಇದೇ ಊರಿನ ಎಲ್ಲಾ ಶಾಸನಗಳು ವೀರಗಲ್ಲುಗಳನ್ನು ಜೋಡಿಸಿ ಈ ದೇವಾಲಯದ ಪಕ್ಕದಲ್ಲಿ ಇಟ್ಟಿದ್ದಾರೆ. ಈ ಆಂಜನೇಯ ದೇವಾಲಯವು ಊರಿನ ಬುರುಜಿನ ಬಳಿಯಿದೆ. ಇದು ಆಂಜನೇಯ ವೈಷ್ಣವ ದೇವಾಲಯವಾಗಿದೆ.[೨೨]

## ಮೂರ್ತಿ ಶಿಲ್ಪಗಳು

ಮೂರ್ತಿಶಿಲ್ಪವು ಪ್ರತಿಯೊಂದು ಗ್ರಾಮ ಹಳ್ಳಿಗಳಲ್ಲಿ ದೇವಾಲಯ ಗುಡಿಗಳು ಇದ್ದೇ ಇರುತ್ತವೆ. ಹಾಗಾಗಿ ಭಾರತದಲ್ಲಿ ಗುಡಿಗಳಿಲ್ಲದ ಗ್ರಾಮಗಳ ದೇವಾಲಯಗಳಿಲ್ಲದ ನಗರಗಳಿಲ್ಲ ಎನ್ನಬಹುದು. ಕನಿಷ್ಟ ಪಕ್ಷ ಪೂಜೆಯಿಲ್ಲದೆ ಪಾಳು ಬಿದ್ದ ಚಿಕ್ಕ ಗುಡಿಯಾದರು ಇದ್ದು ಸುಂದರವಾದ ಮೂರ್ತಿಶೀಲ್ಪಗಳು ಇರುತ್ತವೆ ಭಾರತೀಯರ ಜೀವನದಲ್ಲಿ ದೇವಾಲಯಗಳು, ಮೂರ್ತಿಶಿಲ್ಪಗಳು ಅಷ್ಟರಮಟ್ಟಿಗೆ ಬೆರೆತು ಹೋಗಿವೆ ಎನ್ನಬಹುದು. ಮಾನವನಿಗು ಶಿಲ್ಪಶಾಸ್ತ್ರಕ್ಕೂ ಬಹು ನಿಕಟವಾದ ಸಂಬಂಧವಿದೆ. ಬಹುಶಃ ಮಾನವನು ಹುಟ್ಟಿನಿಂದಲೇ ಈ ಶಿಲ್ಪವೂ ಹುಟ್ಟಿರುತ್ತದೆ. ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ಒಂದಕ್ಕೊಂದು ಅವಿನಾಭಾವ ಸಂಬಂಧವಿರುವುದನ್ನು ನಾವು ನೋಡಬಹುದು. ವಾಸ್ತುಶಿಲ್ಪದ ಜೊತೆಯಲ್ಲಿಯೇ ಮೂರ್ತಿಶಿಲ್ಪವು ಬೆಳೆದು ಬಂದಿದೆ.

ಪ್ರಾಚೀನ ಮಾನವನು ತನ್ನ ಸುತ್ತ ಮುತ್ತಲಿನ ಪರಿಸರದಲ್ಲಿ ಬದಲಾವಣೆಗಳ ಹಿಂದೆ ಯಾವುದೋ ಅಗೋಚರ ಶಕ್ತಿಯಿದೆ ಎಂದು ನಂಬಿ ಅವುಗಳನ್ನು ಸಾಂಕೇತಿಕವಾಗಿ ಮೂರ್ತಿಶಿಲ್ಪಗಳು ಪ್ರಾರಂಭಿಸಿದ ನಂತರ ಇದು ಅವನ ಕಣ್ಣಿಗೆ ಕಾಣದ ಶಕ್ತಿಯನ್ನು ಪ್ರತಿನಿಧಿಸಲು ಒಂದು ನೆಲೆಯನ್ನೊ ಒಂದು ವಸ್ತುವನ್ನೊ ಮಣ್ಣಿನ ಅಥವಾ ಕಲ್ಲಿನ ಗೊಂಬೆಯನ್ನು ಮಾಡಿಕೊಂಡು ಪೂಜಿಸಲು ಕಾರಣವಾಯಿತು. ಹರಪ ಸಂಸ್ಕೃತಿಯ ನಿವೇಶನಗಳಲ್ಲಿ ನಡೆದ ಉತ್ಖನನಗಳಲ್ಲಿ ಗೂಳಿ, ಶಿವ, ಪುರೋಹಿತನ ರುಂಡಭಾಗ ನರ್ತನ ಭಂಗಿಯಲ್ಲಿರುವ ಸ್ತ್ರಿ ಮೊದಲಾದ ಶಿಲ್ಪಗಳು ದೊರೆತಿವೆ.

ಐತಿಹಾಸಿಕ ಯುಗಕ್ಕೆ ಬಂದರೆ ಭಾರತದಲ್ಲಿ ಮೂರ್ತಿಶಿಲ್ಪಗಳು ದೊರೆಯುವುದು ಮೌರ್ಯರ ಕಾಲದಲ್ಲಿ ಲೋಹಿಯಾನಂದನ ಘರ್ ಸಾರನಾಥ ರಾಂಪೂರ್ವ ಲೋಮಸ್ ಋಷಿ ಗುಹಾಲಯ ಮೊದಲಾದ ಕಡೆಗಳಲ್ಲಿ ದೊರೆತ ಸಿಂಹ, ಗೂಳಿ, ಆನೆ ಮುಂತಾದ ಸುಂದರ ಶಿಲ್ಪಗಳನ್ನು ಈ ಕಾಲದ ಶಿಲ್ಪಗಳಿಗೆ ಉದಾಹರಿಸಬಹುದು.

ಪ್ರಸ್ತುತ ಈ ಅಧ್ಯಯನದ ಪ್ರದೇಶಗಳಲ್ಲಿ ಶೈವ ವೈಷ್ಣವ ಶಾಕ್ತ ಶಿಲ್ಪಗಳು ಕಂಡುಬಂದಿವೆ ಶೈವ ಶಿಲ್ಪದಲ್ಲಿ ಶಿವಲಿಂಗ ಭೈರವ ಸೂರ್ಯ ಗಣೇಶ ನಂದಿ ಶಿಲ್ಪಗಳು ಕಂಡು ಬರುತ್ತವೆ.

ವೈಷ್ಣವ ಶಿಲ್ಪಗಳಲ್ಲಿ ಗರುಡ ವಿಷ್ಣು ಬಾಲಕೃಷ್ಣ ಬಲರಾಮ ಆಂಜನೇಯ ನರಸಿಂಹ ಇತ್ಯಾದಿ ಶಿಲ್ಪಗಳು ಕಾಣಿಸುತ್ತವೆ. ಶಾಕ್ತ ಶಿಲ್ಪಗಳಲ್ಲಿ ಗಜಲಕ್ಷ್ಮಿ ಸಪ್ತಮಾತೃಕೆ ಮಹಿಷಮರ್ಧಿನಿ ಭೈರವಿ, ಮೊದಲಾದ ಶಿಲ್ಪಗಳನ್ನು ಗಮನಿಸಬಹುದು ಇವುಗಳನ್ನು ಅಧ್ಯಯನ ಮಾಡಿ ಕೆಳಗಿನಂತೆ ವಿವರಿಸಲಾಗಿದೆ.[೨೩]

## ಶೈವ ಶಿಲ್ಪಗಳು

ಅಣಜಿ ಪರಿಸರದಲ್ಲಿ ಒಳಗೊಂಡಂತೆ ಸಾಕಷ್ಟು ಸಂಖ್ಯೆಯ ಶೈವ ದೇವಾಲಯಗಳು ಕಾಣಿಸಿವೆ. ಈ ಶೈವ ದೇವಾಲಯಗಳಲ್ಲಿ ಪ್ರಮುಖವಾಗಿ ಕಾಣುವ ಶಿಲ್ಪಗಳೆಂದರೆ ಶಿವಲಿಂಗಗಳು, ನಂದಿಗಳು, ಶಿವ, ಉಮಾಮಹೇಶ್ವರ, ಭೈರವ, ವೀರಭದ್ರ, ಗಣೇಶ, ಕಾರ್ತಿಕೆಯ ಪ್ರಮುಖವಾಗಿ ಅಧಿಕವಾಗಿ ಕಂಡುಬಂದಿವೆ.

## ಶಿವಲಿಂಗಗಳು

ಈ ಪ್ರದೇಶದ ಶಿವಲಿಂಗಗಳಲ್ಲಿ ಕೆಲವು ವೃತ್ತಾಕಾರದ ಕೆಲವು ಚೌಕಾಕಾರದ ಪೀಠಗಳನ್ನು ಹೊಂದಿವೆ. ಕೆಲವು ಶಿವಲಿಂಗಗಳು ಪೀಠ ಪಟ್ಟಿಕೆ ಹಾಗೂ ಜಲಹರಿಗಳನ್ನು ಹೊಂದಿವೆ. ಆದರೆ ಕೆಲವು ಶಿಲ್ಪಗಳು ಯಾವುದೇ ಪೀಠ ಪಟ್ಟಿಕೆಗಳಿಲ್ಲದೆ ನಿರ್ಮಾಣಗೊಂಡಿವೆ. ಶಿವಲಿಂಗಗಳಲ್ಲಿ ಪೀಠ, ಪಟ್ಟಿಕೆ, ಜಲಾಹರಿ, ರುದ್ರ ಭಾಗಗಳು ಪ್ರಮುಖವಾಗಿ ಗೋಚರಿಸಿವೆ. ಕೆಲವು ಶಿವಲಿಂಗಗಳು ಬ್ರಹ್ಮಸೂತ್ರಗಳನ್ನು ಒಳಗೊಂಡಿವೆ. ಎಲೇಬೇತೂರು ಕಲ್ಲೇಶ್ವರ ದೇವಾಲಯ, ಅಣಜಿ, ಸೋಮೇಶ್ವರ ದೇವಾಲಯ, ಹೇಮ್ಮನ ಬೇತೂರಿನ ಸಿದ್ದೇಶ್ವರ ದೇವಾಲಯ, ತುಂಬಿಗೆರೆಯಲ್ಲಿ ಶ್ರೀ ರಾಮಶ್ವೇರ ದೇವಾಲಯ, ಬೇತೂರುನ ಶ್ರೀ ಸಂಗಮೇಶ್ವರ ದೇವಾಲಯಗಳಲ್ಲಿ ಸುಮಾರು ಒಂದು ಅಡಿ ಎತ್ತರದಿಂದ ಎರಡು ಎತ್ತರವಾದ ಸುಂದರವಾದ ಶಿವಲಿಂಗಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಈ ಲಿಂಗಗಳನ್ನು ಒಂದು ಅಡಿ ಎತ್ತರದ ಪೀಠದ ಮೇಲೆ ಪ್ರತಿಷ್ಠಾಪಿಸಿದ್ದಾರೆ. ಎಲ್ಲಾ ಶಿವಲಿಂಗಗಳು ಕಪ್ಪುಶಿಲೆಗಳಿಂದ ಹೊಂದಿವೆ.

## ನಂದಿಶಿಲ್ಪಗಳು

ಪ್ರಸ್ತುತ ಈ ಪ್ರದೇಶದಲ್ಲಿ ಕಾಣುವ ಪ್ರತಿ ಶೈವ ದೇವಾಲಯಗಳಲ್ಲಿ ನಂದಿ ಶಿಲ್ಪಗಳಿರುವುದನ್ನು ಕಾಣಬಹುದು. ಈ ಶಿಲ್ಪಗಳು ಗರ್ಭಗೃಹದಲ್ಲಿರುವ ಶಿವಲಿಂಗಕ್ಕೆ ಅಭಿಮುಖವಾಗಿ ಅಂತರಾಳ ಅಥವಾ ನವರಂಗಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿವೆ. ನಂದಿಯು ಶಿವನ ವಾಹನ, ಪುರಾಣಗಳಲ್ಲಿಯೂ ಶಿವನ ವಾಹನವಾದ ನಂದಿಯು ಪ್ರಸ್ತಾಪ ಕಂಡುಬರುತ್ತಿದೆ. ಕೆಲವುಗಳು ಪ್ರತ್ಯೇಕವಾಗಿ ದೇವಾಲಯಗಳ ಹೊರಗೆ ನಂದಿ ಮಂಟಪದಲ್ಲಿ ಪ್ರತಿಷ್ಠಪಿಸಲ್ಪಟ್ಟಿವೆ. ಸಾಮಾನ್ಯವಾಗಿ ಈ ಎಲ್ಲಾ ನಂದಿ ಶಿಲ್ಪಗಳನ್ನು ಪೀಠದ ಮೇಲೆ ಕುಳ್ಳಿರಿಸಿರುವಂತೆ ಕಾಣುತ್ತವೆ. ಇವುಗಳು ತನ್ನ ಮುಂದಿನ ಬಲಗಾಲನ್ನು ಹಿಂದಕ್ಕೆ ಮಡಚಿ ಎಡಗಾಲನ್ನು ಹೊಟ್ಟೆಯ ಕೆಳಗೆ ಎಳೆದುಕೊಂಡು ಮಡಚಿ ಮಲಗಿರುವಂತೆ ಚಿತ್ರಿಸಲಾಗಿದೆ.

ತನ್ನ ತಲೆಯನ್ನು ಮುಂದಕ್ಕೆ ನೇರವಾಗಿ ಚಾಚಿ ಕೊಂಡಿರುತ್ತವೆ. ನಂದಿಗಳಿಗೆ ಗಂಟಾಸರ ಗಗ್ಗರ ಕೊರಳಸರ ಹಣೆಪಟ್ಟಿ ಕಾಲ್ಗಡಗಗಳು ಮುಂತಾದ ಆಭರಣಗಳಿಂದ ಅಲಂಕರಿಸಲಾಗಿದೆ. ಹೇಮ್ಮನ ಬೇತೂರಿನಲ್ಲಿ ನಂದಿಗುಡಿಯು ನಂದಿಶಿಲ್ಪಗಳು ಬೃಹದಾಕಾರವಾಗಿ ಕಾಣಿಸುತ್ತದೆ ನಂದಿಗುಡಿಯಲ್ಲಿ ಪ್ರತ್ಯೇಕ ನಂದಿಮಂಟಪ ಅಳವಡಿಸಲಾಗಿದೆ.[೨೪]

## ಗಣೇಶ

ಪ್ರಸ್ತುತ ಅಧ್ಯಯನ ಪ್ರದೇಶದ ಅಣಜಿ ಊರಮ್ಮನ ದೇವಾಲಯ ಆನುಗೋಡು ಮರುಳುಸಿದ್ದೇಶ್ವರ ದೇವಾಲಯ ಬಳಿ ಚಿಕ್ಕಗುಡಿಯಿದೆ ಕೆಲವು ದೇವಾಲಯಗಳಲ್ಲಿ ಗಣೇಶ ಶಿಲ್ಪಗಳು ಕಾಣಿಸಿವೆ. ಗಣೇಶನು ಪಾರ್ವತಿ ಮತ್ತು ಪರಮೇಶ್ವರನ ಪುತ್ರ ಇಲಿಯನ್ನು (ಮೂಷಿಕ) ವಾಹನವನ್ನಾಗಿ ಹೊಂದಿದ್ದಾನೆ. ಆಗಮ ಬ್ರಾಹ್ಮಣ ಸೂತ್ರ ಧರ್ಮಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖವಿದೆ. ಗಣೇಶನು ಪ್ರಾಚೀನ ಪರಂಪರೆ ಹೊಂದಿದ್ದು ಆದಿ ದೇವತೆಗಳಲ್ಲಿ ಒಬ್ಬನಾಗಿದ್ದಾನೆ ಪರಮೇಶ್ವರನ ಪುತ್ರ ವಿನಾಯಕನಾಗಿ ಮೆರೆದು ಬುದ್ದಿಶೀಲ ಬೃಹಸ್ಪತಿ ಎನಿಸಿ ಕೊಂಡಿದ್ದಾನೆ. ವೈದಿಕ ದೇವತೆಗಳೇ ಪುರಾಣ ಕಾಲದ ಗಜಮುಖ ವಿನಾಯಕ ಎಂದು ವಿದ್ವಾಂಸರು ಅಭಿಪ್ರಾಯವಾಗಿದೆ.

ಗಣೇಶನ ವಿಗ್ರಹಗಳಲ್ಲಿ ಸಾಮಾನ್ಯವಾಗಿ ಚತುರ್ಭುಜಗಳಲ್ಲಿರುವಂತೆ ಕಾಣುತ್ತವೆ ಕುಳಿತ ಭಂಗಿಯಲ್ಲಿರುವ ಮೂರ್ತಿಗಳೇ ಹೆಚ್ಚು ಕಂಡುಬರುತ್ತವೆ ವಿವಿಧ ಅಲಂಕರಣಗಳಿಂದ ಕೂಡಿದ ಗಣೇಶನು ಸರಿ ಸುಮಾರು ಮೂರು ಅಡಿ ಎತ್ತರವುಳ್ಳವನಾಗಿದ್ದು ಅಗಲವಾದ ಕಿವಿ ಇಳಿಬಿದ್ದ ಹೊಟ್ಟೆ ಹೊಂದಿದ್ದು ಸುಖಾಸಿನ ಭಂಗಿಯಲ್ಲಿ ಕುಳಿತು ಕಾಲ್ಗಡಗ ಹಾರ, ಸರ, ೄದರಬಂದಿ ಕಂಕಣ, ಕಿಂಕೆಣಿ ಉದರದಲ್ಲಿ ನಾಗಬಂಧವನ್ನು ಧರಿಸಿರುತ್ತವೆ. ಸೊಂಡಿಲಿನ ವಿನ್ಯಾಸ ಬಲಗಡೆಗೆ ಬಾಗಿರುತ್ತದೆ ಗಿಡ್ಡಾ ಕೃತಿಯ ಸ್ಥೂಲಕಾಯ ದಪ್ಪ ತೋಳುಗಳು ಎದ್ದು ಕಾಣುವ ಡೊಳ್ಳು ಹೊಟ್ಟೆ ಕೆಳಭಾಗದಲ್ಲಿ ಪೀಠದ ಮೇಲೆ ಕೂರಿಸಲಾಗಿರುತ್ತದೆ. ಹೀಗೆ ಆಕರ್ಷಕವಾದ ಮೈಕಟ್ಟನ್ನು ಕಡೆದು ಉತ್ತಮ ಶಿಲ್ಪಕೃತಿಗಳಾಗಿ ಕಂಡುಬರುತ್ತವೆ. ತನ್ನ ಕೈಗಳಲ್ಲಿ ಅಂಕುಶಪಾಶ, ಮೋದಕ ಲೇಖನಿಯನ್ನು ಹಿಡಿದಿರುವುದು ಕಂಡುಬರುತ್ತದೆ.

## ಕಾರ್ತಿಕೆಯ ಶಿಲ್ಪ

ಕಾರ್ತಿಕೇಯ ಶಿಲ್ಪವು ಎಲೆಬೇತೂರಿನ ಕಲ್ಲೇಶ್ವರ ದೇವಾಲಯಗಳಲ್ಲಿ ಕಾಣಿಸಿವೆ. ಚತುರ್ಭುಜಧಾರಿ ಕಾರ್ತಿಕೇಯ ತನ್ನ ವಾಹನ ನವಿಲು ತನ್ನ ಕೈಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದಿರುವುದು ಷಡ್ ಮುಖಧಾರಿ ಷಣ್ಮುಖನಿಗೆ ಶಿಲ್ಪದಲ್ಲಿ ಮೂರು ಮುಖಗಳು ಕಾಣುವಂತೆ ತೋರಿಸಲಾಗಿದೆ. ಮೂರು ಮುಖಗಳಿಗೆ ಮೂರು ಕೀರಿಟ ಮೂರು ಮುಖಗಳಿಗೆ ಹೊಂದಿಕೊಂಡಂತೆ ಒಂದೇ ದೇಹವಿದ್ದು ವಿವಿಧ ಆಭರಣಗಳಿಂದ ಅಲಂಕೃತಗೊಂಡಿರುವನು. ಇದೊಂದು ದುಂಡಶಿಲ್ಪವಾಗಿದೆ. ತನ್ನ ವಾಹನವಾದ ನವಿಲಿನ ಮೇಲೆ ರಾಜಲೀಲಾಸನದಲ್ಲಿ ಕುಳಿತಂತೆ ಇದೆ.

ಚತುರ್ಭುಜಧಾರಿ ಕಾರ್ತಿಕೆಯ ಅಕ್ಷಮಾಲ ಅಂಕುಶ, ಪಾಶ, ಹಾಗೂ ಫಲಗಳನ್ನು ಹಿಡಿದಿರುವನು ಹಾರ, ಸರ, ಉಪವೀತ ಭುಜ ಬಂಧಿ ಕಾಲ್ಗಡಗ ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವನು. ಇದೊಂದು ಉಬ್ಬುಶಿಲ್ಪವಾಗಿದೆ. ಶೈಲಿಯಿಂದ ಸು.ಕ್ರಿ.ಶ.೧೨ನೇ ಶತಮಾನದ ರಚನೆ ಎನ್ನಬಹುದು.[೨೫]

## ವೀರಭದ್ರ ಶಿಲ್ಪ

ಆನುಗೋಡು ದಾವಣಗೆರೆ ಜಿಲ್ಲೆಯಿಂದ ೧೦.ಕಿ.ಮೀ ಪಿ.ಬಿ. ಹೆದ್ದಾರಿ ೪ರಲ್ಲಿ ಬರುವಂತಹ ಒಂದು ಹೋಬಳಿ ಕೇಂದ್ರವಾಗಿದೆ. ವೀರಭದ್ರ ಶಿಲ್ಪ ಆಂಜನೇಯ ದೇವಾಲಯದ ಪಕ್ಕದಲ್ಲಿ ಇಟ್ಟಿದ್ದಾರೆ. ವೈದಿಕ ಸಾಹಿತ್ಯ ಸ್ಕಂದ ಶಿವ ಮತ್ಸ್ಯ ವಿಷ್ಣು ವಾಯು ಬ್ರಹ್ಮಾಂಡ ಭಾಗವತ ಪುರಾಣಗಳಲ್ಲಿ ವೀರಭದ್ರನ ಉಲ್ಲೇಖ ಗೋಚರಿಸುತ್ತದೆ. ಈ ವಿಗ್ರಹ ನಿಂತಿರುವ ಭಂಗಿಯ ವೀರಭದ್ರ ನಾಲ್ಕು ಕೈಗಳಲ್ಲಿ ಒಂದು ಹಸ್ತದಲ್ಲಿ ಕುಂಬ ಒಂದು ಹಸ್ತದಲ್ಲಿ ಅಂಕುಶ ಮತ್ತೊಂದರಲ್ಲಿ ಬಿಲ್ಲುಬಾಣ ಇನ್ನೊಂದು ಕೈ ಹಸ್ತವನ್ನು ಕೆಳಭಾಗಕ್ಕೆ ಇಳಿಬಿಡಲಾಗಿದೆ. ವೀರಗಾಸೆಯನ್ನು ತೊಟ್ಟು ಕಿರೀಟ ಮುಕುಟ ಕರ್ಣಕುಂಡಲ ಯಜ್ಞೋಪವಿತ ಭುಜವಳಿಯ ಕಾಲಿಗೆ ದಪ್ಪನೆಯ ಕಾಡಗ ಧರಿಸಿರುವನು.

## ವೈಷ್ಣವ ಶಿಲ್ಪಗಳು

ಪ್ರಸ್ತುತ ಪ್ರದೇಶದಲ್ಲಿ ವೈಷ್ಣವ ಶಿಲ್ಪಗಳು ಶೈವ ಶಿಲ್ಪಗಳಷ್ಟೆ ಸಮ ಪ್ರಮಾಣದಲ್ಲಿ ಗೋಚರಿಸಿವೆ. ಸುಮಾರು ಕ್ರಿ.ಶ.೪ನೇ ಶತಮಾನದ ಅಂತ್ಯಭಾಗದಿಂದಲೂ ನಿರಂತರವಾಗಿ ವೈಷ್ಣವ ಶಿಲ್ಪಗಳು ಈ ಪ್ರದೇಶದಲ್ಲಿ ಕಾಣಿಸಿವೆ. ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರ ವರ್ಣನೆಯಿದೆ ವೈಷ್ಣವಿಗೆ ಹಲವಾರು ಹೆಸರುಗಳಿವೆ. ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು ವಾಮನ, ನರಸಿಂಹ, ಹರಿ ಮತ್ತು ಕೃಷ್ಣ ಇನ್ನೂ ಮುಂತಾದವು ವಿಷ್ಣುವನ್ನು ಚತುರ್ದಶಿ ಮೂರ್ತಿಗಳಿಂದಲೂ ಹಾಗೂ ಹತ್ತು ಅವತಾರಗಳಿಂದಲೂ ಪೂಜಿಸಲಾಗುತ್ತದೆ. ಈ ಅಧ್ಯಯನ ಪ್ರದೇಶಗಳಲ್ಲಿ ಕಂಡುಬರುವ ಶಿಲ್ಪಗಳನ್ನು ಕೆಳಕಂಡಂತೆ ಗಮನಿಸಬಹುದು.

## ಆಂಜನೇಯ ಶಿಲ್ಪಗಳು

ವೈಷ್ಣವ ಶಿಲ್ಪಗಳಲ್ಲಿ ಆಂಜನೇಯ ಶಿಲ್ಪಗಳು ತಮ್ಮದೇ ಆದ ವೈಶಿಷ್ಟತೆಯನ್ನು ಉಳಿಸಿಕೊಂಡಿದೆ. ಆಗ ಆಂಜನೇಯನನ್ನು ರುದ್ರಾಂಶ ಸಂಭೂತನೆಂದು ಸೂರ್ಯಪುತ್ರನೆಂದು ವಾಯು ಪುತ್ರನೆಂದು ರಾಮನ ಭಕ್ತನೆಂದು ಮುಖ್ಯ ಪ್ರಾಣನೆಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಜಾನಪದರು ಆಂಜನೇಯ ದೇವಾಲಯಗಳ ನಿರ್ಮಾಣ ಮಾಡುವುದು ಪ್ರತಿ ಗ್ರಾಮದಲ್ಲಿ ಕಂಡುಬರುತ್ತದೆ. ಅಣಜಿ ಪರಿಸರದಲ್ಲಿ ಹೆಚ್ಚು ಹೆಚ್ಚು ಆಂಜನೇಯ ಶಿಲ್ಪಗಳು ಕಂಡುಬರುತ್ತವೆ. ಅಣಜಿ ಆಲೂರು, ತುಂಬಿಗೆರೆ ಆನುಗೋಡು, ಐಗೂರು, ಹೆಮ್ಮನಬೇತೂರು, ಕುರುಡಿ, ಕಿತ್ತೂರು, ಮುಂತಾದ

ಪ್ರದೇಶಗಳಲ್ಲಿ ಆಂಜನೇಯ ಶಿಲ್ಪ ಕಾಣುತ್ತವೆ. ಆನುಗೋಡು ಆಂಜನೇಯನ ಮೂರ್ತಿಯು ಗರ್ಭಗೃಹ ಸುಂದರವಾಗಿದ್ದು ಬಲಹಸ್ತವನ್ನು ಮೇಲೆತ್ತಿದ್ದಾನೆ. ಮತ್ತು ಎಡಹಸ್ತವನ್ನು ಸೊಂಟದ ಮೇಲೆ ಇರಿಸಿದ್ದಾನೆ ಕೊರಳಲ್ಲಿ ಹೂವಿನ ಮಾಲೆಗಳನ್ನು ಧರಿಸಿದ್ದಾನೆ ಎಂದು ಕಾಣುತ್ತವೆ.

**ಶಾಕ್ತ ಶಿಲ್ಪಗಳು**

ಶಕ್ತಿ ದೇವತೆಗಳ ಆರಾಧನೆಯು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ ಇದರ ಪ್ರಾಚೀನತೆಯನ್ನು ಹರಪ್ಪ ಮಹೆಂಜೊದಾರೋ ನಾಗರೀಕತೆಯಿಂದಲೇ ಗುರುತಿಸಬಹುದು ಸಪ್ತಸತಿ ಅಥವಾ ಚಂಡ ಎಂಬ ಮಾರ್ಕಂಡೇಯ ಪುರಾಣದಲ್ಲಿ ೨೦೦ ಶ್ಲೋಕಗಳು ಮಹಾಮಾತೇಯ ಅವತಾರವನ್ನು ಪ್ರಾಸ್ತಪಿಸಿವೆ. ಶ್ರೀ ವಿದ್ಯಾವರ್ಣನ ತಂತ್ರದಲ್ಲಿ ೮೫ ದೇವತ ಶಿಲ್ಪಗಳು ಪ್ರತಿಮಾಲಕ್ಷಣಗಳಿವೆ. ಸಮಸ್ತ ಸೃಷ್ಟಿಗೆ ಮೂಲ ಕಾರಣ ಕರ್ತೃಶಕ್ತಿ ದೇವತೆ ಶಕ್ತಿಯು ವಿವಿಧ ಅವತರಗಳಾದ, ದುರ್ಗಿ ಊರಮ್ಮ ಲಕ್ಷ್ಮಿ ಪಾರ್ವತಿ, ಮಹಿಷಾಸುರಮರ್ದಿನಿ ಹೀಗೆ ನಾನ ಹೆಸರುಗಳಿಂದ ಪ್ರಖ್ಯಾತಿ ಪಡೆದಿದ್ದಾಳೆ. ಈ ಪಂಥ ಎಲ್ಲಾ ಕಾಲಾದಲ್ಲಿಯೂ ಜನ ಸಾಮಾನ್ಯರಲ್ಲಿ ಬೇರುಬಿಟ್ಟಿರುವ ಪಂಥವಾಗಿದೆ.

**ಪಾರ್ವತಿ ಶಿಲ್ಪ**

ಪ್ರಸ್ತುತ ಅಧ್ಯಯನ ಪ್ರದೇಶದ ಎಲೆಬೇತೂರಿನ ಕಲ್ಲೇಶ್ವರ ದೇವಾಯದಲ್ಲಿ ಪಾರ್ವತಿ ಶಿಲ್ಪ ಕಾಣಿಸಿದೆ. ಲಲಿತಾಸನದಲ್ಲಿ ಪೀಠದ ಮೇಲೆ ಆಸೀನವಾಗಿರುವ ಈ ಮೂರ್ತಿ ಕಿರೀಟ ಮಕುಟಧಾರಿಯಾಗಿದ್ದು ಕಿವಿಯಲ್ಲಿ ಪತ್ರ ಕುಂಡಲಗಳಿವೆ ತಲೆ ಹಿಂಬದಿಯಲ್ಲಿ ಶಿರಶ್ಚಕ್ರವಿದ್ದು ಕಂಠಾಭರಣ ಎದೆಹಾರ ಕುಚ ಬಂಧಗಳಿವೆ.ಹಾಗೂ ಯಜ್ಞೋಪವೀತ ವೈಜಯಂತಿ ಹಾರಗಳನ್ನು ಧರಿಸಿದ ಈ ಮೂರ್ತಿ ಚರ್ತುಭುಜಧಾರಿಯಾಗಿದ್ದು ಭುಜಕೀರ್ತಿ ಕೈಕಡಗಗಳನ್ನು ಧರಿಸಿದೆ ಕೆಳ ಎಡಗೈಯಲ್ಲಿ ಫಲ ಬಲಗೈಯಲ್ಲಿ ಪದ್ಮವಿದ್ದು ಮೇಲಿನ ಕೈಗಳಲ್ಲಿ ತ್ರಿಶೂಲ ಡಮರುಗಳಿವೆ ಕಾಲುಗಳಲ್ಲಿ ಕಾಲ್ಗಡಗ ಪಾದರಸಗಳಿದ್ದು ಹಿಂಬದಿಯಲ್ಲಿ ಸಾಧರಣ ರೀತಿಯ ಪ್ರಭಾವಳಿಯಿದೆ. ಮೂರ್ತಿ ಲಕ್ಷಣದ ಆಧಾರದ ಮೇಲೆ ಇದು ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು.[೨೬]

**ಗಜಲಕ್ಷ್ಮಿ ಶಿಲ್ಪ**

ಪ್ರಸ್ತುತ ಈ ಪ್ರದೇಶದ ಕಲ್ಲೇಶ್ವರ ದೇವಾಲಯದ ಅಂತರಾಳ ಮುಂದಿನ ಮರದ ಕೆಳಗೆ ಇಟ್ಟಿರುವ ಗಜಲಕ್ಷ್ಮಿ ಶಿಲ್ಪ ಕಾಣುತ್ತವೆ. ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿಗೆ ಬದಿಗಳಲ್ಲಿ ನಿಂತ ಆನೆಗಳೆರಡು ಸೊಂಡಿಲುಗಳಲ್ಲಿ ಮಗಿಗಳನ್ನು ಹಿಡಿದು ದೇವಿಯ ತಲೆಯ ಮೇಲೆ ಅವುಗಳಿಂದ ನೀರನ್ನು ಸುರಿಸುತ್ತ ಅಭಿಷೇಕ ಮಾಡುತ್ತಿರುವುದನ್ನು ಕಾಣುತ್ತೇವೆ. ಈ ಶಿಲ್ಪ ಫಲಕದ ಸುತ್ತಲೂ ಲತಾ ಸುರುಳಿ ನಡುವೆ ಕೀರ್ತಿ ಮುಖವಿದೆ. ಇದು ದೇವಾಲಯದ ಹೊರಗಡೆಯಿದೆ. ಮತ್ತು

ಎರಡು ಆನೆಗಳು ಸೊಂಡಿಲುಗಳನ್ನು ಮೇಲಕ್ಕೆ ಎತ್ತಿರುವುದನ್ನು ಕಾಣುತ್ತೇವೆ ಮತ್ತು ಎರಡು ಆನೆಯ ಪಕ್ಕದಲ್ಲಿರುವ ಆನೆಗಳು ಸೊಂಡಿಲನ್ನು ಕೆಳಗೆ ಇಳಿಸುರುವಂತೆ ಕಾಣುತ್ತವೆ. ಈ ಗಜಲಕ್ಷ್ಮಿ ಶಿಲ್ಪದಲ್ಲಿ ಒಟ್ಟು ನಾಲ್ಕು ಆನೆಗಳು ಕಾಣುತ್ತವೆ. ಈ ಶಿಲ್ಪವು ಪೀಠದ ಮೇಲೆಯಿದೆ.

**ಸರಸ್ವತಿ ಶಿಲ್ಪ**

ಪ್ರಸ್ತುತ ಈ ಪ್ರದೇಶದ ಎಲೆಬೇತೂರಿನ ಕಲ್ಲೇಶ್ವರ ದೇವಾಲಯದಲ್ಲಿ ಸರಸ್ವತಿ ಶಿಲ್ಪ ಕಾಣುತ್ತವೆ. ಶಿಲ್ಪಗಳಲ್ಲಿ ಸರಸ್ವತಿಯನ್ನು ಅರ್ಧ ಪದ್ಮಾಸನದಲ್ಲಿ ಪೀಠದ ಮೇಲೆರುವಂತೆ ತೋರಿಸಲಾಗಿದೆ. ಚತುರ್ಭುಜಧಾರಿ ಸರಸ್ವತಿ ತನ್ನ ಕೈಗಳಲ್ಲಿ ಅಕ್ಷಮಾಲ, ಪಾಶ, ಅಂಕುಶ, ಹಾಗೂ ಪುಸ್ತಕಗಳನ್ನು ಹಿಡಿದಿರುವಳು, ತೆಳುವಾದ ಮೈ ಮಾಟವನ್ನು ಹೊಂದಿರುವ ದೇವಿ ಉದ್ದನೆಯ ಕಿರೀಟ ಕುಂಡಲ ಹಾರ ಸರ, ಭುಜಭಂದಿ ತೋಳಭಂದಿ ಕಾಲ್ಗಡಗ ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿರುವಳು ಶಿಲ್ಪದ ಸುತ್ತಲೂ ಸ್ತಂಭ ಮಕರ ತೋರಣವಿದೆ ದೇವಿಯ ಪೀಠದಲ್ಲಿ ವಾಹನವಾದ ಹಂಸವನ್ನು ತೋರಿಸಲಾಗಿದೆ. ಶಿಲ್ಪ ನಿರೂಪಣಾ ಶೈಲಿ ಗಮನಿಸಿದರೆ ಸುಮಾರು ಕ್ರಿ.ಶ.೧೩ನೇ ಶತಮಾನದ ರಚನೆ ಎನ್ನಬಹುದು.

**ಜೈನ ಶಿಲ್ಪ**

ಅಣಜಿ ಪರಿಸರದಲ್ಲಿ ಕಂಡುಬರುವ ಜೈನಬಸದಿಗಳು ಬಹಳ ವಿರಳವಾಗಿವೆಯಾದರೂ ಅಲ್ಲಲ್ಲಿ ಜೈನ ಬಿಡಿ ಶಿಲ್ಪಗಳು ಗೋಚರಿಸುವವು. ಸಾಕಷ್ಟು ಪ್ರಮಾಣದ ಶಿಲ್ಪಗಳು ಭಗ್ನಗೊಂಡಿರುವುದರಿಂದ ಮೂಲತಃ ಅವು ಯಾವ ತೀರ್ಥಂಕರರ ಶಿಲ್ಪ ಎಂದು ಹೇಳಬಹುದು ಸ್ವಲ್ಪ ಮಟಿನ ಕಷ್ಟವೇ ಸರಿ ಹಾಗಾಗಿ ಅವುಗಳನ್ನು ತೀರ್ಥಂಕರರು ಎಂಬುದಾಗಿ ಮಾತ್ರ ಹೇಳಬಹುದು. ಅಧ್ಯಯನ ಪ್ರದೇಶ ಬೇತೂರು ಶಾಮನೂರು, ಬಸವಪಟ್ಟಣ, ಹೆಗ್ಗೆರೆ, ಹೊಳಲ್ಕೆರೆ, ದಾವಣಗೆರೆ ಜಿಲ್ಲೆಯಲ್ಲಿ ಜೈನ ಶಿಲ್ಪ ಗೋಚರಿಸಿವೆ. ಆದರೆ ನಾನು ಇಲ್ಲಿ ಅಧ್ಯಾಯನ ಮಾಡಿರುವುದರಿಂದ ಬೇತೂರು ಶಿಲ್ಪಗಳನ್ನು ಮಾತ್ರ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.[೨೭]

**ಜೈನತೀರ್ಥಂಕರರು ಶಿಲ್ಪ**

ಪ್ರಸ್ತುತ ಅಧ್ಯಯನದ ಪ್ರದೇಶದ ಬೇತೂರಿನ ಊರಿನ ಮಧ್ಯಭಾಗದ ಬಯಲು ಕಟ್ಟೆಯಲ್ಲಿವೆ. ಬೇತೂರು ಜೈನಮತ ಬಹಳ ಹಿಂದಿನಿಂದಲೂ ಬೇತೂರಿನಲ್ಲಿ ಜೈನಮತ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಧಾರಗಳಿವೆ. ರೇವಣಸಿದ್ದೇಶ್ವರ ಮತ್ತು ಸಮಗದ್ದುಗೆ ಸಂಗಮೇಶ್ವರ ದೇವಾಲಯದ ಹಿಂಭಾಗದಲ್ಲಿ ನೆಲ ಅಗೆದಾಗ ಮೂರು-ಮೂರುವರೆ ಅಡಿ ಎತ್ತರದ ಮೂರು ಸುಂದರ ತೀರ್ಥಂಕರರು ಕಲ್ಲಿನ ವಿಗ್ರಹಗಳು ದೊರೆತಿದ್ದು, ಈ ದೇವಾಲಯದ ಪಕ್ಕದಲ್ಲಿಟ್ಟಿದ್ದಾರೆ.

ಈ ಮೂರು ಮೂರ್ತಿಗಳು ತಲೆಯಮೇಲಿನ ಕೂದಲು ಗುಂಗುರಾಗಿ ಸುರಳಿಯೋಪಾದಿಯಲ್ಲಿ ಸುತ್ತಲ್ಪಟ್ಟಿದ್ದು ಆ ಕೂದಲುಗಳು ಭುಜಗಳ ಮೇಲೆ ಇಳಿಬಿದ್ದಿವೆ ಮುಚ್ಚಿದ ಕಣ್ಣುಗಳು ಮಂದಾಹಾಸ ಬೀರುತ್ತಿರುವ ಮುಖಭಾವಯಿದೆ.

ದ್ವಿಭುಜಧಾದಿಯಾದ ಈ ಮೂರ್ತಿ ಧ್ಯಾನಸಕ್ತನಾಗಿ ಪದ್ಮಸನದಲ್ಲಿ ಕುಳಿತು ರೀತಿಯಲ್ಲಿ ಈ ಮೂರು ಮೂರ್ತಿಗಳು ಸಮಾನ ಎತ್ತರ ಮತ್ತು ಸಮಾನ ಅಳತೆಯನ್ನು ಹೊಂದಿರುವಂತಹ ಮೂರ್ತಿಗಳು ಆಗಿವೆ. ಇವುಗಳ ಶೈಲಿಯ ಮೇಲೆ ಮಧ್ಯಯುಗೀನ ಕಾಲಕ್ಕೆ ಸೇರುತ್ತವೆಯೆಂದು ಹೇಳಬಹುದು.

ಪ್ರಸ್ತುತ ಬೇತೂರಿನಲ್ಲಿ ಮೂರ್ತಿಗಳು ಹಿಂದಿನ ಕಾಲಕ್ಕೆ ಅಂದ್ರೆ ಪ್ರಾಚೀನ ಯುಗಕ್ಕೆ ಸೇರಿದವುಗಳಾಗಿರಬಹುದೆಂದು ಅವುಗಳ ಶೈಲಿಯನ್ನು ಆಧಾರವಾಗಿಟ್ಟಕೊಂಡು ಹೇಳಬಹುದು ಆದರೆ ಕೆಲವು ಕಡೆ ಜೈನ ಬಸದಿಗಳು ಇವೆ ಹಾಗೆಯೇ ಈ ಮೇಲಿನ ಸ್ಥಳಗಳಲ್ಲಿ ದೊರೆತ ಜೈನ ಮೂರ್ತಿಗಳು ಈ ಭಾಗದಲ್ಲಿ ಜೈನಧರ್ಮ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು ಆಗಿದೆ. ಬೇತೂರಿನಿಂದ ಆಳ್ವಿಕೆ ಮಾಡಿದ ಚಾವುಂಡರಸನು ಜೈನ ಮತಾವಲಂಬಿಯಾಗಿದ್ದ ಎಂಬ ಅಂಶ ಶಾಸನವೊಂದರಿಂದ ತಿಳಿದುಬರುತ್ತದೆ. ಆದ್ದರಿಂದ ದಾವಣಗೆರೆ ಸುತ್ತಮುತ್ತಿನಲ್ಲಿ ಜೈನಧರ್ಮರ ನೆಲೆಯು ಕಾಣಬಹುದಾಗಿದೆ.[೨೮]

**ಕೋಟೆಗಳು**

ಕೋಟೆಯು ರಾಜ ಮನೆತನಗಳ ರಕ್ಷಣೆಯಲ್ಲಿ ಪಾತ್ರವಹಿಸುವುದಲ್ಲದೇ ಪ್ರಮುಖವಾಗಿ ಜೀವಿಸಲಿಕ್ಕೆ ಮತ್ತು ರಕ್ಷಣೆಗೋಸ್ಕರ ಕೋಟೆಗಳು ಆಧಾರಗಳಾಗಿದ್ದವು ಆಯಾ ಕಟ್ಟಿನ ಪ್ರದೇಶಗಳಲ್ಲಿ ವಿಶಾಲವಾಗಿ ಹಾಗೂ ಬಲಿಷ್ಠವಾಗಿ ನಿರ್ಮಾಣಗೊಂಡ ಗೋಡೆಗಳು ಆವರಣಕ್ಕೆ ಕೋಟೆಗಳೆಂದು ಕರೆಯಲಾಗಿದೆ. ಅರಸರು ವಾಸ ಮಾಡುವ ಮತ್ತು ಆತನ ಸಂಬಂಧಿಕರು ಸರದಾರರು ರಾಜ ಪುರೋಹಿತರು ವಾಸ ಮಾಡುವ ಸ್ಥಳವೆಂದು 'ಪುರ' ಎಂದರೆ ಅರಸುರುವಾಸ ಮಾಡುವ ಸ್ಥಳಕ್ಕೆ ಪುರ ಎಂದು ಕರೆಯುತ್ತಾರೆ.

ಪ್ರಸ್ತುತ ಈ ಪ್ರದೇಶದಲ್ಲಿ ಚಿತ್ರದುರ್ಗ ಜಿಲ್ಲಾ ಪರಿಸರದಲ್ಲಿ ಚಿತ್ರದುರ್ಗದ ಪಾಳೆಯಗಾರರು ಕಾಲದಲ್ಲಿ ಕೋಟೆ, ಕೋತ್ತಲಗಳು ಕಟ್ಟಿಸುತ್ತಾರೆ. ಹರತಿ ಸಿರಿ ಪಾಳೆಯಗಾರರು, ಹರಪನಹಳ್ಳಿ ಪಾಳೆಯಗಾರರು ಬಳ್ಳಾರಿ ಪಾಳೆಯಗಾರರು ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ಒಂಭತ್ತು ಪಾಳೆಯ ಪಟ್ಟುಗಳಿದ್ದುವು. ರಾಯದುರ್ಗ, ಬೇಲೂರು, ಸಂತೆಬೆನ್ನೂರು, ತರೀಕೆರೆ, ಹರತಿ, ನಾಯಕನಹಟ್ಟಿ, ಮತ್ತಿನಾಡು, ಬೂದಿಹಾಳು ಮತ್ತು ಚಿತ್ರದುರ್ಗ ಎಂದು ಹೇಳುತ್ತಾರೆ. ಚಿತ್ರದುರ್ಗ ಪಾಳೆಯಗಾರರು ಅಣಜಿ ಮತ್ತು ಅಲೂರು ಕೋಟೆಯು ಆಯ ಕಟ್ಟಿನ ಸ್ಥಳವಾಗಿರುವುದರಿಂದ ಕೋಟೆಯನ್ನು ನಿರ್ಮಾಣ ಮಾಡಿದ್ದಾರೆ.

## ಆಲೂರುಕೋಟೆ

ದಾವಣಗೆರೆಯಿಂದ ಅಣಜಿ ಮಾರ್ಗದಲ್ಲಿ ಆಲೂರು ಹಟ್ಟಿಯಿಂದ ನಾಲ್ಕು ಕೀ.ಮಿ ದೂರದಲ್ಲಿ ಬರುವಂತಹ ಮತ್ತು ಪಾಳೆಯಗಾರರ ಕಾಲದಲ್ಲಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿರುವಂತಹ ಗ್ರಾಮವಾಗಿದೆ. ಈ ಗ್ರಾಮವು ಅಣಜಿ ಹೋಬಳಿಗೆ ಸೇರಿದೆ. ಈ ಪ್ರಸ್ತುತ ಈ ಗ್ರಾಮವು ಪ್ರಾಚೀನತೆಯನ್ನು ಹೊಂದಿತ್ತೆಂದು ಈಗಾಗಲೇ ತಿಳಿದುಕೊಳ್ಳಲಾಗಿದೆ ಇತಿಹಾಸ ಕಾಲಾವಧಿಯಲ್ಲಿ ಕೋಟೆಯು ಅವಶೇಷಗಳು ಆಲೂರುನಲ್ಲಿ ಕಾಣುತ್ತವೆ.

ಈ ಕೋಟೆಯನ್ನು ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ ಕಟ್ಟಿಸಿದ್ದಾನೆ. ಯಾಕು ಎಂದರೆ ಈ ಊರಿನ ಸುತ್ತ ಮುತ್ತಲು ಅನೇಕ ಮಟ್ಟಿಗಳಿದ್ದುದರಿಂದ ತುಂಬ ಆಯಕಟ್ಟಿನ ಸ್ಥಳವೆಂದು ಕೋಟೆ ಬುರುಜು ಕಟ್ಟಿಸಿದ್ದ ಕಾವಲಿನ ಸ್ಥಳವಾಗಿತ್ತು. ಹರಪನಹಳ್ಳಿಯವರಿಗೆ ಆಲೂರು ಅಣಜಿ ಬಿಳಿಚೋಡುಗಳು ಹತ್ತಿರ ಇರುವುದರಿಂದ ದುರ್ಗದವರು ಇಲ್ಲಿನ ದಂಡಿನ ದಾಳಿಗೆ ಅನುಕೂಲವಾಗಲ್ಲೆಂದು ಕೋಟೆಯ ಮೇಲೆ ತೋಪುಗಳನ್ನಿಟ್ಟಿದ್ದರು ಚಿಕ್ಕಣ್ಣ ನಾಯಕರ ಕಾಲದಲ್ಲಿ ಕಣುಕುಪ್ಪೆ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿಯಿತ್ತು ಆಲೂರು ಕಣುಕುಪ್ಪೆಯು ಆಡಳಿತಕ್ಕೆ ಒಳಪಟ್ಟಿತ್ತು ಈ ಕೋಟೆಯನ್ನು ೧೭ನೇ ಶತಮಾನದಲ್ಲಿ ನಿರ್ಮಾಣ ಮಾಡಿದ್ದು ಸ್ಥಳ ಆಲೂರುವಾಗಿದೆ. ಕೋಟೆಯು ೬೫ ? ೬೫ ಚ.ಮೀ ವಿಸ್ತೀರ್ಣ ಅಂದಾಜು ಚೌಕಾಕಾರವಾಗಿ ನಿರ್ಮಾಣಗೊಂಡಿದೆ.

ಈ ಒಂದು ಸುತ್ತಿನ ಕೋಟೆಯಲ್ಲಿ ಪೂರ್ವ ಭಾಗಕ್ಕೆ ಬಾಗಿಲುಯಿದೆ ಆದರೆ ಪ್ರಸ್ತುತ ಇತ್ತೀಚಿಗೆ ನಿರ್ಮಾಣಗೊಂಡಿರುವ ಮನೆಗಳು ಕೋಟೆಯ ಸುತ್ತ-ಮುತ್ತಿನಲ್ಲಿ ಕಾಣುತ್ತೇವೆ. ಕೋಟೆಯ ಉತ್ತರಭಾಗದಲ್ಲಿ ಅಥವಾ ಪಕ್ಕದಲ್ಲಿ ಕಲ್ಲುನಿಂದ ನಿರ್ಮಾಣಕೊಂಡಿರುವಂತಹ ಬಾವಿಯನ್ನು ಕಾಣುತ್ತೇವೆ ಊರಿನ ಮಧ್ಯೆ ಸುರಕ್ಷಿತವಾದ ದೊಡ್ಡ ಬುರುಜುಯನ್ನು ಈಗ ಸ್ವಲ್ಪ ಬದಲಾವಣೆಮಾಡಿದೆ. ಬುರುಜಿನ ಮೇಲಿನ ಚೌಡಮ್ಮನಿಗೆ ದಿನನಿತ್ಯ ಪೂಜೆ ನಡೆಯುತ್ತದೆ. ಕೋಟೆಯು ಗೋಡೆಯು ಸುಮಾರು ೨೫-೩೦ ಅಡಿ ಎತ್ತರಯಿದೆ ಇದಕ್ಕಿಂತ ೫ ಅಡಿ ಎತ್ತರದಲ್ಲಿ ಬುರುಜುಯಿದೆ. ಆಯುಧೋಪಕರಣಗಳನ್ನು ಸಂಗ್ರಹಿಸಲು ಬುರುಜುಗಳ ಮೇಲೆ ಸ್ಥಳವಕಾಶಯಿದೆ ಹಾಗೂ ಕಾವಲು ಕಾಯಲು ಅನುಕೂಲಕರವಾದ ವ್ಯವಸ್ಥೆಯಿದೆ ಕೋಟೆಯು ಗೋಡೆಗಳನ್ನು ಕಲ್ಲು ಚೆಕ್ಕೆಗಳಿಂದ ಮತ್ತು ಮಣ್ಣಿನ ನೀರು ಬಳಕೆಯಿಂದ ನಿರ್ಮಾಣ ಮಾಡಿದ್ದು ಆರು ಅಡಿ ದಪ್ಪದಿಂದ ಗೋಡೆ ಕೂಡಿದೆ ಈ ರೀತಿಯು ವ್ಯವಸ್ಥೆ ಅನುಕೂಲ ಆಲೂರು ಕೋಟೆಯು ಚಿತ್ರದುರ್ಗ ಪಾಳೆಯಗಾರರಿಗೆ ತುಂಬ ಒಂದು ಉಪಯುಕ್ತವಾದ ಕೋಟೆಯಾಗಿದೆ. ಈ ಕೋಟೆಯು ತುಂಬ ಸುಂದರವಾಗಿ ಕಾಣುತ್ತದೆ.[೨೯]

## ಅಣಜಿ ಕೋಟೆ

ಅಣಜಿ ಗ್ರಾಮದ ಪ್ರಾಚೀನ ಕೋಟೆಯ ನಿರ್ಮಾಣದ ಬಗ್ಗೆ ಖಚಿತತೆ ಇಲ್ಲ ಕದಂಬರ ಕಾಲಕ್ಕಾಗಲೇ ಚಾರಿತ್ರಿಕ ಮಹತ್ವ ಪಡೆದಿದ್ದು ಆನಂತರದಲ್ಲಿ ಸ್ಥಳೀಯ ಅರಸರು ಈ ಕೋಟೆಯನ್ನು

ನಿರ್ಮಿಸಿರುವ ಸಂಭವಯಿದೆ. ಚಿತ್ರದುರ್ಗದ ಭಿಚ್ಚುಗತ್ತಿ ಭರಮಣ್ಣನಾಯಕ ಇಲ್ಲಿನ ಅಲ್ಪಭಾಗವನ್ನು ಕಟ್ಟಿಸಿ ಮತ್ತು ಜೀರ್ಣೋದ್ಧಾರ ಮಾಡುವ ಸಾಹಸ ಮಾಡಿದ್ದ ಹಳೇ ಊರಿನ ಪ್ರದೇಶದಲ್ಲಿ (ದಿಬ್ಬ) ಬೆಟ್ಟಗಳನ್ನು ಕಾಣಬಹುದು ಆದರೆ ಇಲ್ಲಿಯಾವುದೇ ಮನೆಗಳು ಇಲ್ಲ ಮತ್ತು ಈ ಪ್ರದೇಶದಲ್ಲಿ ಭಗ್ನಗೊಂಡ ಶಿಲ್ಪಗಳು ಮತ್ತು ಕಲ್ಲುಬಂಡೆಗಳು ರಸ್ತೆಯ ಬದಿಯಲ್ಲಿ ಬಿದ್ದಿದ್ದರಿಂದ ಸ್ಥಳೀಯರು ಕಲ್ಲನ್ನೆ ಊರಿನ ದೇವಾಲಯಕ್ಕೆ ಮಾರಮ್ಮ ದೇವಾಲಯದ ವಾಸ್ತುಶಿಲ್ಪಕ್ಕೆ ಬಳಸಿಕೊಂಡಿರುವುದು ಗಮನಾರ್ಹ ಮಾಹಿತಿಯನ್ನು ತಿಳಿಯಲಾಗಿದೆ ಊರಿನ ಗ್ರಾಮಸ್ಥರಿಂದ.

**ಶಾಸನಗಳು**

ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಇತಿಹಾಸದ ಪುನಾರಚನೆಗೆ ವಿವಿಧ ಆಕಾರ ಸಮಾಗ್ರಿಗಳನ್ನು ಬಳಸುವ ಅವಶ್ಯಕತೆ ಇರುವುದು ಆಕಾರಗಳು ಶಾಸನಗಳಿಗೆ ಪ್ರಮುಖ ಸ್ಥಾನಯಿದೆ. ಶಾಸನಗಳು ಕಲ್ಲು, ಲೋಹ, ಗಟ್ಟಿಯಾದ ಸಾಮಾಗ್ರಿಗಳ ಮೇಲೆ ಲಿಖಿತವಾಗಿರುತ್ತವೆ. ರಾಜಕೀಯ ಧಾರ್ಮಿಕ, ಸಾಮಾಜಿಕ, ದಾನ ದತ್ತಿಗಳನ್ನು ದಾಖಲಿಸುವ ಶಾಸನಗಳೇ ಹೆಚ್ಚು ಕಾಣುತ್ತವೆ. ಯಾವುದೇ ಒಂದು ಸ್ಥಳೀಯ ಪ್ರದೇಶದ ಪಾರಂಪರಿಕ ಸಾಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ಪ್ರತಿಯೊಂದು ಶಾಸನವು ಧರ್ಮಸ್ತೋತ್ರಗಳಿಂದಲೇ ಪ್ರಾರಂಭಗೊಳ್ಳುತ್ತವೆ ಶಾಸನಗಳಲ್ಲಿ ಸೂರ್ಯ, ಚಂದ್ರ ಕಂಡು ಬರುತ್ತವೆ ಅಂದರೆ ಕೊಟ್ಟಿರುವ ದಾನವು ಸೂರ್ಯ ಚಂದ್ರರರು ಇರುವ ತನಕ ಇರಲಿ ಎಂಬ ಉದ್ದೇಶವಾಗಿತ್ತು. ಕರ್ನಾಟಕದಲ್ಲಿ ಮೌರ್ಯರ ಕಾಲದಿಂದ ಹಿಡಿದೂ ಪಾಳೆಯಗಾರರ ನಂತರದ ಕಾಲದವರೆಗೂ ಶಾಸನಗಳು ಲಭ್ಯವಾಗಿದ್ದು, ಆಯಾಕಾಲದ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ಚರಿತ್ರೆಯಲ್ಲಿ ದೇವಾಲಯಗಳ ನಿರ್ಮಾಣ ವಾಸ್ತುಶಿಲ್ಪ ಕೆರೆಗಳ ನಿರ್ಮಾಣ ಮುಂತಾದ ವಿಚಾರಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾವೆ.

ಪ್ರಸ್ತುತ ಈ ಪ್ರದೇಶದಲ್ಲಿ ಕಂಡುಬರುವ ಶಾಸನಗಳು ಅಣಜಿ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳ ಸಾಂಸ್ಕೃತಿಕ ಪರಂಪರೆಯನ್ನು ಬಿಂಬಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

**ಅಣಜಿ ಗ್ರಾಮದ ಉತ್ತರಕ್ಕೆ ಗುಡ್ಡಪ್ಪರ ಹೊಲದಬಳಿ ಇರುವ ಶಾಸನ**

ಈ ಅಣಜಿ ಗ್ರಾಮದ ಇದರ ಆರಂಭಿಕ ಚರಿತ್ರೆ ಕಂಡು ಬರುವುದು ಶಾಸನದಿಂದ, ಕೇಕಯ ಶಿವಸ್ಕಂದವರ್ಮನ ಮೂಲಕ ಇಲ್ಲಿನ ಶಾಸನವು ಇದನ್ನು ದೃಡಪಡಿಸುತ್ತದೆ ಭಾಷೆ ಸಂಸ್ಕೃತಿ ಕ್ರಿ.ಶ.೪೫೦ರ ನೊಳಂಬರ ಶಾಸನದಿಂದ ನೊಣ್ಣಕ್ಕಂಸ ಪಲ್ಲವನಿಗೂ ಕದಂಬ ಸಾಮ್ರಾಜ್ಯದಲ್ಲಿ ಸಾಮಂತನಾಗಿ ಆಳುತ್ತಿದ್ದ ಕೃಷ್ಣವರ್ಮನಿಗೂ ಘೋರ ಯುದ್ಧನಡೆದು ಈತನಿಗೆ ಯುದ್ಧದಲ್ಲಿ ಸೋಲುಂಟಾಗಿ, ಯುದ್ಧದಲ್ಲಿ ಕೃಷ್ಣವರ್ಮನಿಗೂ ಸಹಾಯ ಮಾಡಿದ ಶಿವಸ್ಕಂದವರ್ಮನು ಭಗ್ನ ಹೃದಯನಾಗಿ ಮರಣ ಹೊಂದುತ್ತಾನೆ. ಈತನು ಕೇಕಯ ಕುಲದವನು ಸೋಮವಂಶನಾಗಿ ವೀರ ಪ್ರತಾಪಗಳಿಂದ ಕೂಡಿದ್ದ ಕೃಷ್ಣವರ್ಮನು ಕೇಕಯ ರಾಜಕೂಮಾರಿಯನ್ನು ಮದುವೆಯಾಗಿದ್ದರಿಂದ

ಶಿವಸ್ಕಂದನು ಈತನಿಗೆ ಯುದ್ಧದಲ್ಲಿ ಸಹಾಯಮಾಡಿದ್ದ. ಕೃಷ್ಣವರ್ಮನು ಶಾಂತಿವರ್ಮನ ಸೋದರನೆಂದು ಮಹಾವೀರನೆಂದು ತ್ರಿಪರ್ವತದಿಂದ ಆಳುತ್ತಿದ್ದ ಪೂರ್ವ ಕದಂಬ ಶಾಖೆಗೆ ಸೇರಿದವನೆಂದು ತಿಳಿಯುತ್ತದೆ. ನನ್ನಕ್ಕರಸರನ ಹೆಸರು ಸಂಸ್ಕೃತದಲ್ಲಿರುವ ಈ ಶಾಸನದಲ್ಲಿ ಮಾತ್ರ ಉಲ್ಲೇಖಗೊಂಡಿದೆ. ಕ್ರಿ.ಶ.೧೧೨೫ರಲ್ಲಿಯ ಶಾಸನದಲ್ಲಿ ಅರಸನನ್ನು ವಾರಣಾಂಕುಶ, ತೆಲುಂಗರಾಯ, ಭುಜಬಲಭೀಮ ಮುಂತಾದ ಬಿರುದುಗಳಿಂದ ವರ್ಣಿಸಿದೆ. ಇಲ್ಲಿ ಅಳಿದ ಕದಂಬರು ನೊಳಂಬರು ಸೇವುಣರು ಪಲ್ಲವರ ವಿಚಾರ ತಿಳಿಯುತ್ತದೆ.

**"ಅಣಜಿ ಗ್ರಾಮದ ಪೂರ್ವದಿಕ್ಕಿನಲ್ಲಿ ಸೋಮೇಶ್ವರ ದೇವಾಲಯದ ಮೂಲೆಯಲ್ಲಿ ಶಾಸನ"**

ಈ ಶಾಸನವು ಕ್ರಿ.ಶ.೧೧೮೨ರಲ್ಲಿ ಹೆಮ್ಮಡಿ ದೇವರಸರ ಕುಮಾರ ವಿಠ್ಠಲ ದೇವರಸರು ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವಾಗಿ ದಾನ ನೀಡುರುವುದನ್ನು ಉಲ್ಲೇಖಯಿದೆ. ಸ್ಥಳೀಯರು ಈ ದೇವಾಲಯವನ್ನು ಹೊನ್ನಮ್ಮನ ಗುಡಿಯೆಂದು ಕರೆಯುತ್ತಾರೆ.

**"ಅಣಜಿ ಗ್ರಾಮದ ಮಧ್ಯ ಭಾಗದಲ್ಲಿ ಬಳಿ ಇರುವ ಶಾಸನ"**

ಅಣಜಿ ಒಂದು ಪ್ರಮುಖ ಗ್ರಾಮವಾಗಿರುವುದರಿಂದ ಈ ಶಾಸನವು ಅಣಜಿಯ ಮಠದ ಬಗ್ಗೆ ಉಲ್ಲೇಖಯಿದೆ ಆದರೆ ಅಣಜಿಯಲ್ಲಿ ಮಠವನ್ನು ಕಾಣುವುದಿಲ್ಲ. ಈ ಶಾಸನ ಕ್ರಿ.ಶ.೧೫೭೮ರಲ್ಲಿ ಕೊಮ್ಮನಾಯಕನ ಮಗ ಚಿಕ್ಕನಾಗಪ್ಪ ನಾಯಕನು ತನ್ನ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು, ಅಣಜಿಯ ಮಾಚಪ್ಪ ದೇವರ ಮಠಕ್ಕೆ ದತ್ತಿ ಬಿಟ್ಟನೆಂದು ತಿಳಿದು ಬರುತ್ತದೆ. ಈ ಶಾಸನದಲ್ಲಿ ಮಾಚಪ್ಪ ದೇವರ ಮಠಕ್ಕೆ ದತ್ತಿ ಬಿಟ್ಟನೆಂದು ತಿಳಿದುಬರುತ್ತದೆ. ಶಾಸನದಲ್ಲಿ ಮಾಚಪ್ಪ ದೇವರ ಮಠದ ಉಲ್ಲೇಖವಿದ್ದರೂ ಕೂಡ ಇಂದು ಅಂಥ ಮಠವನ್ನು ಕಾಣಲಾಗುವುದಿಲ್ಲ. ಕೆರೆಯ ಹತ್ತಿರ ಮಾತ್ರ ದಿಗಂಬರ ಸ್ವಾಮಿಗಳ ಮಠವುಂಟು ಈಗಾಗಲೇ ತಿಳಿದು ಬರುವಂತೆ ೭೦೦ ವರ್ಷಗಳ ಹಿಂದೆ ಸ್ವಾಮಿಯೊಬ್ಬರು ಹಳೆಯ ಊರಿನಲ್ಲಿ ವಾಸವಾಗಿದ್ದು, ಶಿವಭಕ್ತರಾಗಿ, ನಿರ್ವಾಣವಾಗಿದ್ದು ಆತನು ಸಮಾಧಿ ಹೊಂದಿದ್ದರಿಂದ ಗದ್ದುಗೆಯ ಮೇಲೆ ಮಠ ಕಟ್ಟಿದ್ದಾರೆ.

**"ಹೆಮ್ಮನ ಬೇತೂರು ಗ್ರಾಮದ ಸಿದ್ದೇಶ್ವರ ದೇವಾಲಯ ಪೂರ್ವ ಕಡೆ ನಿಲ್ಲಿಸಿರುವ ಶಾಸನ"**

ಈ ಶಾಸನ ಕ್ರಿ.ಶ.೧೨೬೬ರಲ್ಲಿ ಹೆಮ್ಮಾಡಿ ದೇವರಸನ ಮಗ ವಿಠ್ಠಲ ದೇವರಸ ಈತ ಹೆಮ್ಮನ ಬೇತೂನಿನ ಶಾಸನೋಕ್ತಧಾನಿ ಅಣಜಿಯ ಶಾಸನ ಒಂದರಲ್ಲಿ ಈ ವಿಠ್ಠಲ ದೇವರಸನು ಅಣಜಿ ದೇವರಿಗೆ ಹೆಮ್ಮನಬೇತೂರನ್ನು ದಾನ ನೀಡಿದನೆಂದು ಮೂಲ ಕಲದೇವರಿಗೆ ಅಗ್ರಹಾರವನ್ನಾಗಿ ದಾನ ಮಾಡಿದನೆಂದು ತಿಳಿಯುತ್ತದೆ.

ಹೆಮ್ಮನ ಬೇತೂರಿನ ಸಿದ್ದೇಶ್ವರ ದೇವಾಲಯದ ಶಾಸನದಲ್ಲಿ ಡಿಂಗರ ಮಲ್ಲಯ್ಯ ದೇವರಿಗೆ ಕಲ್ಲುಗುರುಗಳ ಕಾಲುತೊಳೆದು ಛತ್ರಕ್ಕೆ ಭೂದಾನಕೊಟ್ಟು ವಿವರ ಮತ್ತು ಇದೇ ದೇವರಿಗೆ 'ಹಾಲುಮಂಡಿಗೆ' ನೈವೇದ್ಯಕ್ಕೆಂದು ಭೂದತ್ತಿ ಕೊಟ್ಟ ವಿಚಾರ ತಿಳಿಯುತ್ತದೆ.[೩೦]

### ಕೆರೆ

ನೀರು ಭೂಮಿಯ ಮೇಲಿನ ಜೀವಿಗಳಿಗೆ ಅತ್ಯಂತ ಅಮೂಲ್ಯವಾದ ವಸ್ತು. ನೀರಿಲ್ಲದೆ ಪ್ರಪಂಚದ ಯಾವ ಜೀವಜಂತುಗಳು ಬದುಕುಳಿಯಲು ಸಾಧ್ಯವಿಲ್ಲ ಹಾಗಾಗಿ ನೀರನ್ನು ಪಂಚಭೂತಗಳಲ್ಲಿ ಒಂದೆಂದು ಹೇಳಲಾಗುತ್ತದೆ. ಮಾನವನು ಭೂಮಿಯು ಮೇಲೆ ಕಾಣಿಸಿಕೊಂಡಾಗಿನಿಂದಲೂ ಅವನು ಹೆಚ್ಚಾಗಿ ನೀರಿನ ಆಸರೆಗಳಲ್ಲಿ ಬಾಳಿ ಬದುಕಿದ್ದಾನೆ. ಇದಕ್ಕೆ ಆ ಭಾಗದಲ್ಲಿ ದೊರೆತಿರುವ ಮಾನವ ನೆಲೆಯ ಕುರುಹುಗಳೇ ಸಾಕ್ಷಿಗಳಾಗಿವೆ. ನೂತನ ಶಿಲಾಯುಗದ ಮಾನವನು ಮಳೆಯ ನೀರಿನ ಉಪಯೋಗವನ್ನು ಮಾಡಲು ಮೊದಲಿಗೆ ಅರಿತನು ಭೂಮಿಯ ಮೇಲೆ ಉಂಟಾದ ತಗ್ಗುಗಳಲ್ಲಿ ಮಳೆಗಾಲದಲ್ಲಿ ನೀರು ನಿಲ್ಲುವುದನ್ನು ಕಂಡು ಮಾನವನು ಮಳೆ ಇಲ್ಲದ ಸಮಯದಲ್ಲಿ ಅದನ್ನು ಉಪಯೋಗಿಸಲು ಪ್ರಾರಂಭಿಸಿದನು. ಹೀಗೆ ನೀರಿನ ಬಳಕೆ ತಂತ್ರವನ್ನು ಅರಿತು ಇವನು ತಾಮ್ರಯುಗ ಹಾಗೂ ಬೃಹತ್ ಶಿಲಾಯುಗದಲ್ಲಿ ಪ್ರಾಕೃತಿಕವಾಗಿ ಬೆಟ್ಟಗುಡ್ಡಗಳಿಂದ ಬರುವ ಮಳೆಯ ನೀರಿಗೆ ಕೆಳಭಾಗದಲ್ಲಿ ಅಡ್ಡಗಟ್ಟಿ ನೀರನ್ನು ಸಂಗ್ರಹಿಸಿ ನಿತ್ಯ ಬಳಕೆಗೆ ಹಾಗೂ ವ್ಯವಸಾಯಕ್ಕೆ ಬಳಸಿರುವ ಹಲವಾರು ಉದಾಹರಣೆ ಕಾಣುತ್ತೇವೆ. ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಯಲ್ಲಿ ಕಂಡುಬಂದಿರುವ ಕೆರೆ ಎಂದರೆ ಅಣಜಿ ಕೆರೆ, ತುಂಬಿಗೆರೆ ಕೆರೆ, ಆನುಗೋಡು ಕೆರೆ, ಕಾಣುತ್ತೇವೆ ಆದರೆ ನನ್ನ ಅಧ್ಯಯನಕ್ಕೆ ಮಾತ್ರ ಮುಖ್ಯವಾಗಿ ಅಣಜಿ ಕೆರೆಯನ್ನು ಆಯ್ಕೆ ಮಾಡಿಕೊಂಡಿದ್ದಾನೆ ಇದು ಈ ಕೆರೆಯು ಕೂಡು ಇತಿಹಾಸ ಮತ್ತು ಜನಪದರು ಕಥೆಯನ್ನು ಒಳಗೊಂಡಿರುವಂತಹ ಕೆರೆಯಾಗಿದೆ.

### ಅಣಜಿ ಕೆರೆ

ದಾವಣಗೆರೆ ಜಿಲ್ಲೆ ಮತ್ತು ದಾವಣಗೆರೆ ತಾಲ್ಲೂಕಿನಲ್ಲಿ ಬರುವಂತಹ ಅಣಜಿ ಗ್ರಾಮ ದಾವಣಗೆರೆಯಿಂದ ೨೦ ಕಿ.ಮೀ ಯಿದೆ. ಜಗಳೂರು ಹೋಗುವ ಮಾರ್ಗದಲ್ಲಿ ಪೂರ್ವದಿಕ್ಕೆ ಬರುತ್ತದೆ. ಈ ಕೆರೆಯನ್ನು ಕೆರೆ ಹೊನ್ನಮ್ಮ ಎಂತಲೂ ಕರೆಯುತ್ತಾರೆ.

ಅಣಜಿ ಕೆರೆಯು ೨೫೬.೫೦ ಎಂ.ಸಿ.ಎಫ್.ಟಿ ನೀರಿನ ಸಾಮಾರ್ಥ್ಯವನ್ನು ಹೊಂದಿದ್ದು ೨೯೫.೦೦ ಹೆಕ್ಟರ್ ದೇಶವನ್ನು ಒಳಗೊಂಡಿದೆ. ಸ್ಥಳೀಯರು ಮಾಹಿತಿ ಪ್ರಕಾರ ಊರಿನ ಗೌಡ ಮಲ್ಲನಗೌಡ ಕಟ್ಟಿಸಿದ್ದಾನೆ ಎಂದು ಹೇಳುತ್ತಾರೆ. ಆದರೆ ಚಿತ್ರದುರ್ಗದ ಅರಸ ಬಿಚ್ಚುಗತ್ತಿ ಭರಮಣ್ಣ ನಾಯಕ ಇದನ್ನು ನಿರ್ಮಿಸಿದ್ದು ವಾಸ್ತವ ಪೂರ್ವ ಪಶ್ಚಿಮವಾಗಿ ಹೆಬ್ಬಂಡೆಗಳ ಬಳಸಿ ಕಟ್ಟಿದ ಏರಿಯು ಎತ್ತರವು – ಉದ್ದವೂ ಆಗಿದ್ದು ದಾವಣಗೆರೆ ಜಗಳೂರು ರಸ್ತೆ ಮಾರ್ಗದ ಬಸ್ಸುಗಳು ಇದರ ಮೇಲೆ ಚಲ್ಲಿಸುತ್ತವೆ. ವಿಶಾಲವಾದ ಕೆರೆ ಅಂಗಳದಲ್ಲಿ ಜಾಲಿ ಮರಗಳು ಬೆಳೆದಿವೆ. ಮಳೆಇಲ್ಲದ ಕಾರಣ ನೀರು ಅಲ್ಪ ಸ್ವಲ್ಪ ಕಾಣುತ್ತವೆ. ಕೆರೆಯ ಬಗ್ಗೆ ಜನರಲ್ಲಿ ಅಪಾರ ಕಥೆಗಳು ಪ್ರಚಲಿತದಲ್ಲಿವೆ.[೩೦]

## ವೀರಗಲ್ಲುಗಳು

ಅಣಜಿ ಪರಿಸರದಲ್ಲಿ ಕಂಡುಬರುವ ವೀರಗಲ್ಲುಗಳು ವಿವಿಧ ಕಾರಣಗಳಿಗೆ, ತ್ಯಾಗ, ಬಲಿದಾನ ಮಾಡಿದ ಅನೇಕ ಅಧಿಕಾರಿಗಳ ಆರಾಧಕರ ಸತಿಯರ ಸ್ಮಾರಕ ಶಿಲ್ಪಗಳು ಇಲ್ಲವೆ. ನನ್ನ ಅಧ್ಯಯನಕ್ಕೆ ಪ್ರಮುಖವಾದವು ವೀರಗಲ್ಲುಗಳು ಮಾತ್ರ ಇಲ್ಲಿ ಪರಿಚಯಿಸಲಾಗಿದೆ.

ಮೂಲತಃ ಸಂಸ್ಕೃತ ಭಾಷೆಯ ಪದವಾದ 'ವೀರ' ಎಂಬುದು ಅನೇಕ ಇಂಡೋಆರ್ಯನ್ ಭಾಷೆಗಳಲ್ಲಿ ಬಳಕೆಯಲ್ಲಿ ಇರುವುದನ್ನು ತಿಳಿದು ಬರುತ್ತದೆ. ವೀರ ಎಂಬ ಪದಕ್ಕೆ ಪದವನ್ನು ಬಳಸುವುದು ರೂಢಿಯಾಗಿದೆ ಮೂಲತಃ ಗ್ರೀಕ್ ಭಾಷೆಯಿಂದ ಇಂಗ್ಲೀಷ್ ಭಾಷೆಗೆ ಅನುವಾದಗೊಂಡಿರುವ ಪದವಾಗಿದೆ. ಕಾಲದಿಂದ ಕಾಲಕ್ಕೆ ಹೆಚ್ಚು ಅರ್ಥವ್ಯಾಪ್ತಿಯು ಪಡೆದಿದೆ. ವೀರ ವೀರತ್ವ, ಶೌರ್ಯ, ಪರಾಕ್ರಮವನ್ನು ಬಿಂಬಿಸುವ ಪದ ಮತ್ತು ವೀರನ ಪೌಡುಷ, ಕೆಚ್ಚು ಸ್ವಾಭಿಮಾನ, ತ್ಯಾಗ, ಕನ್ನಡಿಗರ ಪಾತ್ರವಾಗಿದೆ. ಪಾರಂಪರಿಕ ಸಮಾಜದಲ್ಲಿ ದಾನ, ವೀರ, ಅದರೊಂದಿಗೆ ಅವಿಭಾಜ್ಯ ಅಂಗಗಳಾಗಿ ಬರುವ ಗುಣಗಳು ಮಹತ್ವದ ಮೌಲ್ಯಗಳಾಗಿದ್ದವು ಪತ್ನಿಯರು ಕೂಡು ತಮ್ಮ ಪತಿಯರ ಜೊತೆ ವೀರತ್ವವನ್ನು ಮರೆಯಲು ಪ್ರೇರಣೆ ನೀಡುತ್ತಿದ್ದರು. ಧಾರ್ಮಿಕ ಮತ್ತು ಲೌಕಿಕತೆಯಿಂದ ಮುಕ್ತಿ ಕೈಸೇರುವುದೆಂಬ ನಂಬಿಕೆಯ ಜೊತೆಗೆ ವೀರ ಮರಣ ಪಡೆಯುವುದರಿಂದಲೂ ಮುಕ್ತಿ ದೊರಕುವುದೆಂಬ ಮೌಲ್ಯವು ಸಾಮ್ರಾಜ್ಯದಲ್ಲಿ ಪ್ರಸಾರವಾಯಿತು. ಇದರಿಂದ ಧರ್ಮಕ್ಕಾಗಿ ದೇಹತ್ಯಾಗ ಮಾಡಿದ ವೀರನ ಸ್ಥಾನ ದೇಶಕ್ಕಾಗಿ ದೇಹತ್ಯಾಗ ಮಾಡಿದ ವೀರನ ಸ್ಥಾನ ಒಂದೇ ಮಾಲಿಕೆಯಲ್ಲಿ ಬರತೊಡಗಿದವು.

"ನೌವಿವತಾ ಪುರುಷಾಲೋಕೆ ಸೂರ್ಯಮಂಡಲ ಭೇದಿಸಾ ಪರಿವಾಟ ಯೋಗಯುಕ್ತಶ್ವರಣೇ ಭೌಭೀ ಮುಖೇಹತ"

ಈ ಲೋಕದಲ್ಲಿ ಇಬ್ಬರೆ ಯೋಗ ಸಾಮ್ರಾಜ್ಯದಲ್ಲಿ ನಿಜವಾದ ನೀಲವನ್ನು ಸಂಪಾದಿಸಿ ಸಮುಆಸೊಉಪಬ್ಬ ಯುದ್ದರಂಗದಲ್ಲಿ ವೀರತ್ವವನ್ನು ಬೆಳಗಿದ ಯುದ್ಧ ವೀರನೊಬ್ಬ ಎಂದು ಈ ಮಹಾಭಾರತ ಪಧ್ಯದ ಅರ್ಥ ಇದರ ಹಿನ್ನೆಲಯಲ್ಲಿ "ಜೀತೇನ ಲಭ್ಯತೆ ಲಕ್ಷ್ಮಿ ಮೃತೆನಾಪಿಸುರಾಂಗನಾ ಕ್ಷಣ ವಿಧ್ವಂಸಿಗಿ ಕಾಯಕಾ ಚಿಂತಾಮರಣೇ ಕಣೇ"

ಎಂಬ ಯುದ್ಧ ಮಂತ್ರ ಜನತೆ ಮನದಲ್ಲಿ ಬಲವಾಗಿ ಬೇರೂರಿತು ಗೆಲ್ದವನಂ ಶ್ರೀವದು ಪತ್ತುಗಂ ಮಡಿದನಂ ದೇವಾಂಗ ನಾಗೀಕ ಮುಕ್ದವದಿಂ ದುಯ್ಗಂ, ಅರ್ಥವುಳ್ಳಿನಂ ಈ ಮದಜೀವ ಮುಳ್ಳಿನಂ ಇರಿವುದು ಎಂಬ ಧ್ಯೇಯಗಳು ಪ್ರಜೆಗಳಿಗೆ ಆದರ್ಶಗಳಾಗಿ ತೊಡಗಿದವು. ಈ ವೀರ ಮರಣದ ಸಂಧರ್ಭದಲ್ಲಿ ರನ್ನ ಕವಿ ವಿವರಿಸಿದ್ದಾನೆ. ವೀರಗಲ್ಲುಗಳು ಯುದ್ಧದಲ್ಲಿ ಸತ್ತವರ ವಿಷಯವನ್ನೇ ಹೇಳುತ್ತವೆ ಎಂದು ಭಾವಿಸಬಾರದು. ಯುದ್ಧದಲ್ಲಿ ಹೋರಾಡಿ ಜಯಶೀಲರಾಗಿ ಹಿಂದೆ ಬಂದ ಅನೇಕ ವೀರರು ತಾವೇ ಸ್ವತಃ ದತ್ತಿಗಳನ್ನು ಸ್ವೀಕರಿಸಿದ್ದಾರೆ. ಕನ್ನಡದ ಮೊದಲನೇಯ ಶಾಸನವೆಂದು ನಂಬಲಾದ ಹಲ್ಮಿಡಿ ಶಾಸನದಲ್ಲಿ ವಿಜಯ ಅರಸ ಎಂಬಾತ

ಕದಂಬರ ಪರವಾಗಿ ಕೇಕಯ ಪಲ್ಲವರ ಜೊತೆ ಹೋರಾಡಿ "ಬಾಳ್ಗಳ್ಚು' ಎಂಬ ಹೆಸರಿನ ದಾನವನ್ನು ಸ್ವೀಕರಿಸಿ ಅದರ ಅಂಗವಾಗಿ ಎರಡು ಗ್ರಾಮಗಳನ್ನು ದತ್ತಿಯಾಗಿ ಪಡೆದನೆಂದು ಎಂದು ವಿವರ ಇದೆ.[೩೨]

ವೀರಗಲ್ಲುಗಳು ವೀರರ ಪರಾಕ್ರಮ ಇವೆ ಲೋಕಕ್ಕೆ ತಿಳಿಯಲಿ, ಆತನಿಗೆ ಸ್ವರ್ಗ, ಪ್ರಾಪ್ತವಾಗಲಿ, ಮುಂದಿನ ತಲೆಮಾರಿನ ಜನರಿಗೆ ಉತ್ತೇಜನಗೊಳ್ಳಲಿ ಮತ್ತು ಪ್ರೀತಿ, ವಿಶ್ವಾಸ, ಕೃತಜ್ಞತೆಯನ್ನು ವ್ಯಕ್ತಪಡಿಸುವ ಉದ್ದೇಶದಿಂದ ಇಂತಹ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು, ಸ್ಮಾರಕವಾಗಿ ನಿಲ್ಲಿಸಿದ ಶಿಲೆಯ ವೀರನೊಬ್ಬನ ವೀರಗಲ್ಲು, ವ್ಯಕ್ತಿಯೊಬ್ಬ ತನ್ನ ಪ್ರಾಣ ರಕ್ಷಣೆಗಾಗಿ ಸಮಾಜದ ರಕ್ಷಣೆಗಾಗಿ ಆಸ್ತಿ ಸ್ರೀ ದನಕರುಗಳು ಗಡಿಗಳ ಊರಳೆವುಗಳ ರಕ್ಷಣೆಗಾಗಿ ಶತ್ರುಗಳೊಡನೆ ಹೋರಾಡಿ ಮರಣ ಹೊಂದಿರುವಂತಹ ವಿವಿಧ ರೀತಿಯ ವೀರಗಲ್ಲುಗಳು ಕಾಣುತ್ತವೆ.

ರನ್ನನು ತನ್ನ ಪ್ರಮುಖ ಕೃತಿಯಾದ 'ಗದಾಯುದ್ಧ ಅಥಾವ ಸಾಹಸಭೀಮ ವಿಜಯದಲ್ಲಿ ಈ ರೀತಿ ವಿವರಿಸಿದ್ದಾನೆ "ತುರುಗಳೋಳ್ ಪೆಣ್ಬಯ್ಯಲೊ

ಳೆರೆವೆಸದೋಳ್ ನಂಡನೆಡರೋಳ್ ಊರಳಿವಿನೆಳೇಂ

ತರಿಸುಂದು ಗಂಡುತನ ಮನೆ

ನೆರಪದವಂ ಗಂಡನಲ್ಲನೆಂತು ಷಂಡಂ"

ಈ ಮೇಲಿನ ಪದ್ಯದಿಂದ ಅಂದಿನ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು. ಸ್ತ್ರೀಯರನ್ನು ಕಾಪಾಡುವುದು ಊರುಗಳನ್ನು ರಕ್ಷಿಸುವುದು, ಗಂಡಸರ ಪರಮ ಕರ್ತವ್ಯವಾಗಿತ್ತೆಂಬುದು ರಕ್ಷಿಸುವುದು, ಗಂಡಸರ ಪರಮ ಕರ್ತವ್ಯವಾಗಿತ್ತೆಂಬುದು ತಿಳಿದುಬರುತ್ತದೆ. ದನಗಳನ್ನು ಅಪಹರಿಸಿದಾಗ ಅವುಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಹೋರಾಟದಲ್ಲಿ ಮರಣ ಹೊಂದಿದ ನೆನಪಿಗಾಗಿ ಆತನ ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿಯರು ಸಾರ್ವಜನಿಕರು ಊರಿನ ಪ್ರಮುಖ ವ್ಯಕ್ತಿಗಳು ಇಂತಹ ವೀರಗಲ್ಲನ್ನು ಹಾಕಿಸುತ್ತಿದ್ದರು ಒಟ್ಟಾರೆಯಾಗಿ ಹೋರಾಟದಲ್ಲಿ ಮಡಿದ ವೀರರ ದ್ಯೋತಕವಾಗಿ ನಿಲ್ಲಿಸಿ ಶೀಲೆಯು ಕೆಲವು ವೀರಗಲ್ಲುಗಳಲ್ಲಿ ಶಿಲ್ಪಗಳ ಜೊತೆಗೆ ಶಾಸನಗಳು ಕಂಡುಬರುತ್ತವೆ. ಸಾಮಾನ್ಯವಾಗಿ ವೀರಗಲ್ಲುಗಳು ಕೆರೆಯ ಏರಿಯ ಬಳಿ ಸಾರ್ವಜನಿಕ ಓಡಾಡುವ ದಾರಿಯ ಪಕ್ಕದಲ್ಲಿ ಹೊಲಗದ್ದೆಗಳಲ್ಲಿ ದೇವಾಲಯದ ಪಕ್ಕದಲ್ಲಿ ಇನ್ನೂ ಹಲವಾರು ಕಡೆ ವೀರಗಲ್ಲುಗಳು ಕಾಣುತ್ತವೆ.

ಪ್ರಸ್ತುತ ಅಣಜಿ ಪರಿಸರದಲ್ಲಿ ವೀರಗಲ್ಲುಗಳು ಕಾಣುತ್ತವೆ. ಅಣಜಿಯ ಸೋಮೇಶ್ವರದೇವಾಲಯ ಪಕ್ಕದಲ್ಲಿ ಕಾಣುತ್ತವೆ. ಮತ್ತು ಆನಗೋಡು, ಎಲೇ ಬೇತೂರು ಗ್ರಾಮದಲ್ಲಿ ಆಲೂರು, ಹೆಮ್ಮನಬೇತೂರು ಗ್ರಾಮಗಳಲ್ಲಿ ಕಾಣುತ್ತವೆ.[೩೩]

## ತುರುಗೋಳ್ (ಗೋಗ್ರಹಣ)

ಕರ್ನಾಟಕದ್ಲಲಿ ದೊರೆಯುವ ಅಸಂಖ್ಯೆ ಸ್ಮಾರಕ ಶಿಲೆಗಳಲ್ಲಿ ತುರುಗಳಾಗದ ಸ್ಮಾರಕ ಶಿಲೆಗಳು ಪ್ರಮುಖ ಪಾತ್ರವಹಿಸುತ್ತವೆ. ಪ್ರಾಚೀನ ಕಾಲದಿಂದಲೂ ಜನರು ದನಗಳನ್ನು ಮುಖ್ಯ ಸಂಪತ್ತು ಮತ್ತು ಗೌರವ ಸಂಕೇತವೆಂದು ನಂಬಿದ್ದರು, ಪ್ರಾಚೀನ ಆಡಳಿತ ವ್ಯವಸ್ಥೆಯಲ್ಲಿ ಯುದ್ಧಗಳು ಅನಿವಾರ್ಯದ ಸಂಗತಿ ವೈರಿಗಳು ದಾಳಿ ಮಾಡುವಾಗ ಊರಿನ ಸಂಪತ್ತು ಆದ ದನಗಳನ್ನು ಅಪಹರಿಸಿದಾಗ ದನಗಳನ್ನು ರಕ್ಷಿಸಲು ಪ್ರಾಣವನ್ನು ಲೆಕ್ಕಿಸದೇ ಹೋರಾಡುತ್ತಿದ್ದರು ಇಂತಹ ವೀರರು ಮಡಿದಾಗ ಅವರ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲುಗಳನ್ನು ತೋರುಗೋಳ್ ಎಂದು ಕರೆಯುತ್ತಾರೆ. ತುರುಗೋಳ್ ವೀರಗಲ್ಲುಗಳನ್ನು ಗುರುತಿಸಲು ಸುಲಭ ವೀರಗಲ್ಲುಗಳ ಹೋರಾಟದ ಹಂತದಲ್ಲಿ ಯಾವುದಾದರು ಒಂದು ಕಡೆ ದನಗಳು ನಿಂತಿರುವಂತೆ ಚಿತ್ರಿಸಿರುತ್ತಾರೆ. ಈ ರೀತಿಯಾಗಿ ತುರುಗೋಳ್ ಶಿಲ್ಪವು ಒಂದು ಹಂತದಿಂದ ಹಿಡಿದು ನಾಲ್ಕು ಹಂತದವರೆಗು ಚಿತ್ರಣಗೊಂಡಿರುವ ವೀರಗಲ್ಲುಗಳು ಕಾಣುತ್ತವೆ. ಅಣಜಿ ಪರಿಸರದಲ್ಲಿ ಅನೇಕ ವೀರಗಲ್ಲುಗಳು ಅಣಜಿ, ಅನುಗೋಡು, ಎಲೆಬೇತೂರು, ಹೆಮ್ಮನಬೇತೂರು ಗ್ರಾಮಗಳಲ್ಲಿ ಶಿಲ್ಪಗಳು ಕಂಡುಬರುತ್ತವೆ.

## ಪೆಣ್ಬುಯ್ಯಲ್

ಪೆಣ್ಬಯ್ಯಲ್ ಎಂದರೆ ಹೆಣ್ಣಿನ ಆರ್ತಧ್ವನಿ ಎಂಥರ್ಥ, ನೆರೆ ರಾಜ್ಯದ ಮತ್ತು ನೆರೆ ಗ್ರಾಮದ ದಾಳಿಕಾರರು, ಕಳ್ಳರು ತುರುಗಳನ್ನು ಕದಿಯಲು ಬಂದಾಗ ಕವಿಯುವುದರ ಜೊತೆಗೆ ಆ ಊರಿನ ಸ್ತ್ರೀಯರನ್ನು ಅವಮಾನಗೊಳಿಸುತ್ತಿದ್ದರು. ಕೆಲವು ಸಾರಿ ತುರುಗಳ ಜೊತೆಗೆ ಅವರನ್ನು ಸ್ತ್ರೀಯರನ್ನು ಅಪಹರಿಸುತ್ತಿದ್ದರು. ಆಗ ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು ಅಥವಾ ಕೂಗಿಕೊಳ್ಳುತ್ತಿದ್ದರು ಆದ್ದರಿಂದಲೇ ಅದನ್ನು ಪೆಣ್ಬುಯಲ್ ಎಂದು ಕರೆದಿರುವುದು. ಇಂಥ ಪ್ರಸಂಗದಲ್ಲಿ ಅರಿಪ್ಪನಾಗಿರಕೂಡದು ಮೌಲ್ಯಕ್ಕೆ ಕಟ್ಟುಬಿದ್ದು ಪ್ರಾಚೀನ ಸ್ತ್ರೀ ವಿಮೋವನೆಗೆ ಹೋರಾಡುತ್ತಿದ್ದನು. ಇವರ ನೆನಪಿಗೆ ವೀರಗಲ್ಲುಗಳನ್ನು ಅಥವಾ ಸ್ಮಾರಕಗಳು ನೆಡುತ್ತಿದ್ದರು.

## ಎಳಿವೆಸ

ಎಳಿವೆಸ ಎಂದರೆ ಒಡೆಯನ ಅಪ್ಪಣೆ, ಆತನ ಉಪ್ಪಿನ ಋಣಕ್ಕಾಗಿ ಹೋರಾಡುವುದು ಇಲ್ಲಿಯ ಧ್ಯೇಯವಾಗಿದೆ. ಈ ಯುದ್ಧದಲ್ಲಿ ತರಬೇತಿ ಪಡೆದು ಸೈನ್ಯ ನಿರ್ವಹಿಸುವ ಈ ಸಂಘರ್ಷಣೆ ರಾಜ್ಯದ ಹಗೆ ಬರಹವನ್ನು ನಿರ್ಧರಿಸುತ್ತಿದ್ದಿತು. ಇಂಥ ಯುದ್ಧಗಳಲ್ಲಿ ಹೋರಾಡಿ ಮಡಿದವರ ನೆನಪಿಗೆ ನಿಲ್ಲಿಸಿದ ವೀರಗಲ್ಲುಗಳು ನಮ್ಮ ನಾಡಿನ ತುಂಬ ಕಾಣುತ್ತವೆ. ಅಣಜಿ ಪ್ರದೇಶದಲ್ಲಿ ಇಂಥ ಒಂದು ವೀರಗಲ್ಲುಗಳನ್ನು ಕಾಣುತ್ತೇವೆ.[೩೪]

## ಮಹಾಸತಿ ಕಲ್ಲುಗಳು

ಒಬ್ಬ ಪತಿವ್ರತೆಯಾದ ಹೆಣ್ಣು ತನ್ನ ಗಂಡನು ಮರಣ ಹೊಂದಿದರೆ ಗಂಡನ ಸುಡುವಂತಹ

ಬೆಂಕಿಯಲ್ಲಿ ಹಾರಿ ಸಹಗಮನ ಹೊಂದುತ್ತಾಳೆ ಈ ಪದ್ದತಿಯು ಭಾರತದ ದೇಶದ ಅಷ್ಟೆ ಅಲ್ಲ ಸಹಗಮನ ಪದ್ದತಿಯು ಎಲ್ಲಾ ದೇಶಗಳಲ್ಲಿ ಪ್ರಚಲಿತಯಿತ್ತು. ಸಹಗಮನ ಎಂದರೆ ಗಂಡನ ಶವದೊಂದಿಗೆ ಚಿತೆಯೇರುವುದು ಸಹಗಮನ ಪದ್ದತಿ ಧಾರ್ಮಿಕ ನಂಬಿಕೆಯಾಗಿತ್ತು. ಸತ್ತ ಗಂಡನ ಹಿಂದೆ ಹೆಂಡತಿ ಸತ್ತು ಇನ್ನೊಂದು ಲೋಕದಲ್ಲೂ ಸಹಭಾಗಿಯಾಗಬೇಕು ಎನ್ನುವುದು ಈ ಮುಖ್ಯ ಅಂಶವಾಗಿತ್ತು.

ಐದು ಅಥವಾ ಆರನೇಯ ಶತಮಾನದ ಕವಡಿ ಶಾಸನ ಬಹುಶಃ ಕಾದಂಬ ರವಿ ವರ್ಮನ ರಾಣಿಯ ಸಹಗಮನವನ್ನು ಸೂಚಿಸುತ್ತಿದ್ದು. ನಮ್ಮ ನಾಡಿನಲ್ಲಿಯ ಈ ಪದ್ದತಿಯನ್ನು ಕುರಿತು ಪ್ರಥಮ ದಾಖಲೆಯಾಗಿದೆ. ಪಾರಂಪರಿಕ ಸಮಾಜದಲ್ಲಿ ಯುದ್ಧ ಪ್ರಧಾನ ದಿನಗಳಾದ ಅಂದು ಬಹುತೇಕ ರಾಜರು ಮತ್ತು ರಾಜಪರಿವಾರದವರು ಅಧೀನದಲ್ಲಿದ್ದ ಸಾವಿರಾರು ಸಂಖ್ಯೆ ಹೆಣ್ಣುಗಳು ಯಾವ ಕಾರಣಕ್ಕೂ ವಿಮುಕ್ತರಾಗಿ ಬದುಕಲು ಸಾಧ್ಯವಿಲ್ಲ, ಇದನ್ನು ಮನಗಂಡು ಪುರುಷರು ಇಂತಹ ಪದ್ದತಿಯನ್ನು ತಪ್ಪಿಸಿ ಹೆಣ್ಣುಗಳು ಕೇವಲ ಸುಖ, ಕಷ್ಟ, ಸಂತೋಷಕ್ಕೆ ಬಳಕೆಯಾಗುವ ಆಸ್ತಿಯಂತೆ ರೂಪಿಸಿಕೊಳ್ಳಲು ಹೆಣ್ಣಿಗೆ ಮಹಾಸತಿ ಕಲ್ಪನೆಯನ್ನು ರೂಪಿಸಿದ್ದರು. ತಮ್ಮ ಮರಣದ ನಂತರ ಚಿತೆಯೇರುವ ಈ ಸತಿಯರು ಮಹಾಸತಿಯರಾಗತ್ತಾರೆ. ಮರಲೋಕದಲ್ಲಿ ತಮ್ಮ ಗಂಡನ ಜೊತೆ ಕೊಡುತ್ತಾರೆ. ಎನ್ನುವ ಪರಲೌಕಿಕ ಕಲ್ಪನೆಯಾಗಿದೆ. ಇಂತಹ ವೀರಗಲ್ಲುಗಳು ಕೂಡ ಕಾಣೂತ್ತವೆ.[೩೫]

**ನಿಷಧಿಕಲ್ಲುಗಳು**

ಒಂದು ಪ್ರದೇಶದ ಸಂಸ್ಕೃತಿಯ ಪುನರಚನೆಯಲ್ಲಿ ನಿಷಧಿಕಲ್ಲುಗಳು ಕೂಡ ಪ್ರಮುಖ ಪಾತ್ರವಹಿಸುತ್ತವೆ. ಇವುಗಳು ಜೈನಧರ್ಮದ ವಲಯಕ್ಕೆ ಸಂಬಂಧಿಸಿದ ಸ್ಮಾರಕಗಳಾಗಿವೆ. ಸಂಪ್ರದಾಯ ಪ್ರಾಚೀನ ಕಾಲದಿಂದಲೂ ನಡೆದು ಬಂದ ಪದ್ದತಿಯಾಗಿದೆ. ವೀರತನವನ್ನು ಮಡಿದವರ ಸ್ಮಾರಕವಾಗಿ ವೀರಗಲ್ಲುಗಳನ್ನು ಸ್ಥಾಪಿಸುತ್ತಾರೆ. ಮಾನವ ತನ್ನ ಜೀವಿತ ಕಾಲಾವಧಿಯಲ್ಲಿ ಸಲ್ಲೇಖನ ವ್ರತದಿಂದ ಮರಣ ಹೊಂದಿದ ಸ್ಮರಣೆಗಾಗಿ ನಿಲ್ಲಿಸಿದ ಸ್ಮಾರಕ ಕಲ್ಲುಗಳೇ ನಿಷದ ಕಲ್ಲುಗಳು ಎಂದು ಕರೆಯುತ್ತಾರೆ.

ಚಿದಾನಂದ ಮೂರ್ತಿಯವರು ಹೇಳುವಂತೆ ಜೈನ ಮುನಿಗಳಲ್ಲದೆ ಸಾಮಾನ್ಯರು ಸಹ ಜೈನ ಧರ್ಮದ ದೀಕ್ಷೆಯನ್ನು ಹೊಂದಿ ಸನ್ಯಾಸ ವಿಧಿಯಿಂದ ಅಸುನೀಗುತ್ತಿದ್ದರು. ಅಂತಹವರಿಗು ನಿಷದಿಕಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ನಿಷದಿ ಎಂಬ ದ ನಿಷತ್ ನಿಂದ ಬಂದಿದೆ. ನಿಷತ್ ಎಂದರೆ ಕುಳಿತಿರುವುದು. ಅಂದರೆ ನಿಷ್ಧಿ ಕಲ್ಲುಗಳಲ್ಲಿ ಸಲ್ಲೇಖನ ವೃತವನ್ನು ಆವರಿಸುವ ವ್ಯಕ್ತಿಗುರುವಿನ ಬಳಿ ಕುಳಿತು ಧರ್ಮ ಶ್ರವಣದಲ್ಲಿ ನಿರತನಾಗಿರುವ ಚಿತ್ರವಿರುತ್ತದೆ. ಮತ್ತು ಚಿತ್ರವುಳ್ಳ ಬರವಣಿಗೆಯುಳ್ಳ ನಿಷದಿ ಶಿಲೆಗಳು ಕಂಡುಬರುತ್ತವೆ. ಜೀನಸ್ತೋತ್ರವನ್ನು ಭೋಧಿಸುವ ಗುರು, ಗುರುವಿನ ಮುಂದೆ ಪುಸ್ತಕವನ್ನು ಹೊತ್ತಿರುವ ವ್ಯಾಸಪೀಠ ಇನ್ನೊಂದು ಕಡೆ ಪಾತ್ರದಾರಿಯಾಗಿ ಜಿನಸ್ತೋತ್ರವನ್ನು ಆಲಿಸುತ್ತಿರುವ ಚಿತ್ರಗಳು ಕಂಡುಬರುತ್ತವೆ.[೩೬]

ನಿಷಧಿಕಲ್ಲುಗಳಲ್ಲಿ ಗಮನ ಸೆಳೆಯುವ ಅತ್ಯಂತ ಪ್ರಮುಖವಾದಂತಹ ಅಂಶವೆಂದರೆ ಬರವಣಿಗೆ, ಧರ್ಮ, ಸಮಾಜ, ಸಂಸ್ಕೃತಿ, ಮತ್ತು ಸಾಹಿತ್ಯಗಳಿಗೆ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ಒದಗಿಸುತ್ತದೆ. ಒಟ್ಟಾರೆ ನಿಷಧಿ, ಶಾಸನಗಳು ಜೈನಧರ್ಮದ ತತ್ವ ಮತ್ತು ಆಚರಣೆಗಳು ವ್ಯವಹಾರಿಕ ಮೂಲಗಳು, ಜೈನ ಪರವಾಗಿದ್ದಾರೆ. ಸನ್ಯಾಸಿಗಳು ಹೆಸರಿನ ಹಿಂದೆ ಸಂಘ, ಗಣ, ಗಚ್ಚ, ಅನ್ವಯಗಳ ಉಲ್ಲೇಖ ಕಂಡುಬರುತ್ತವೆ.[೬]

ಪ್ರಸ್ತುತ ಅಧ್ಯಯನ ಅಣಜಿ ಪ್ರದೇಶದಲ್ಲಿ ವೀರಗಲ್ಲುಗಳು, ಅನುಗೋಡು, ವಗೂರು ಮತ್ತು ಎಲೆಬೇತೂರು, ಹಲವಾರು ಕಡೆ ಗ್ರಮಗಳಲ್ಲಿ ಕಾಣುತ್ತವೆ.

### ಅಡಿ ಟಿಪ್ಪಣೆ

೧. ರಾಜಾರಾಂ ಹೆಗಡೆ. ೧೯೯೨ ಭಾರತೀಯ ಮೂರ್ತಿಶಾಸ್ತ್ರ, ಧರ್ಮ ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯ ಐತಿಹಾಸಿಕ ವಿಶ್ಲೇಷಣೆ ಅರಿವು ಬರಹ (ಸಂ) – ೨ ಭಾಗ – ೧ ಪುಟ – ೩೫–೩೬

೨. ಫಣೀಂದ್ರನಾಥಬೋಸ್, ೧೯೭೮ ಪ್ರಿನ್ಸಿಪಲ್ ಆಫ್ ಇಂಡಿಯನ್ ಶಿಲ್ಪಶಾಸ್ತ್ರ – ಪುಟ – ೮

೩. ರಾಮಯ್ಯಂಗಾರ್ ಹೆಚ್.ಕೆ. ಕೆಲವು ಧಾರ್ಮಿಕ ಕರ್ತವ್ಯಗಳು ಪುಟ – ೮೦

೪. ಅದೇ ಪುಟ – ೭೭

೫. ಅಪರ್ಣ ಕೂ.ಸ ೧೯೯೯ ದೇವಾಲಯ ವಾಸ್ತುಶಿಲ್ಪ ಪರಿಚಯ ಪುಟ –೧

೬. ಚಿದಾನಂದಮೂರ್ತಿ ಎಂ ೨೦೦೨ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ – ೧೯೭

೭. ಸತೀಶ ಕೆ. ೨೦೦೪ ವಿಜಯನಗರ ಕಾಲದ ಶೈವದೇವಾಲಯಗಳು (ಅ ಪ್ರಕಟಿತ ಪಿ.ಎಚ್.ಡಿ ಪ್ರಬಂಧ) ಪು–೮೦

೮. ಗೋಪಾಲ ಬಾ.ರಾ ೧೯೯೩ ಕರ್ನಾಟಕದ ಕಲೆಗಳು (ಸಂ)–೪ ಪುಟ – ೨೧

೯. ಗಿರಿಜ ಟಿ ೧೯೯೧ ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ – ೫೭೪

೧೦. ಸುರೇಶ ಬಿ ಚಿತ್ರದುರ್ಗ – ದಾವಣಗೆರೆ ಜಿಲ್ಲೆಗಳ ದೇವಾಲಯಗಳು ಪುಟ – ೧೩೧–೧೩೨

೧೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬ ಚಿನ್ಮಹಗರಿ ಸಿರಿ ಪುಟ – ೫೪

೧೨. ಗಿರಿಜ ಟಿ ಪೂರ್ವಕ್ತ ಪುಟ – ೫೨೫

೧೩. ಕೂ.ಸ.ಅಪರ್ಣ, ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ ಪುಟ – ೬

೧೪. ಅದೇ ಪುಟ – ೭

೧೫. ರಾಜಶೇಖರಪ್ಪ ಬಿ. ೨೦೦೧ ಮಾರ್ಗಶೋಧನೆ ಪುಟ – ೬

೧೬. ಚಿದಾನಂದಮೂರ್ತಿ ಎಂ. ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ – ೧೬

೧೭. ಬಾ.ರಾ. ಗೋಪಾಲ್ ಪೂರ್ವೋಕ್ತ ೧೯೬೩ ಪುಟ – ೧೫೨

೧೮. ತಿಪ್ಪೇರುದ್ರಸ್ವಾಮಿ ಹೆಚ್. ೨೦೦೭ ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ ಪುಟ – ೫೨೩

೧೯. ತಿಪ್ಪೇಸ್ವಾಮಿ. ಎಸ್. ೨೦೦೪ ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾ ಪ್ರಬಂದ ಪುಟ – ೧೧೧

೨೦. ಅದೇ ಪುಟ – ೧೧೩

೨೧. ಗಿರಿಜಾ.ಟಿ ೨೦೦೧ ದಾವಣಗೆರೆ ಇದು ನಮ್ಮ ಜಿಲ್ಲೆ ಪುಟ – ೨೯೮

೨೨. ಅದೇ ಪುಟ – ೨೯

೨೩. ಅದೇ ಪುಟ – ೩೬೧

೨೪. ಷಡಕ್ಷರಯ್ಯ ರು.ಮ ಮತ್ತು ಜಯಮ್ಮ ೨೦೦೭ ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು ಪುಟ – ೯೮

೨೫. ಅದೇ ಪುಟ – ೮೩

೨೬. ಸುರೇಶ ಬಿ. ಪೂರ್ವೋಕ್ತ ಪುಟ – ೨೩೮–೨೪೦

೨೭. ಶ್ಯಾಮಲ ಸಿ.ಆರ್.೨೦೦೮ ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ ಪುಟ – ೪೧

೨೮. ಅದೇ ಪುಟ – ೨೮–೭೨

೨೯. ವಿರೂಪಾಕ್ಷಿ ಪೂಜಾರಹಳ್ಳಿ ಪೂರ್ವೋಕ್ತ ಪುಟ – ೫೪

೩೦. ಗಿರಿಜಾ. ಓ. ಪೂರ್ವೋಕ್ತ ಪುಟ – ೫೨

೩೧. ಅದೇ ಪುಟ – ೫೬

೩೨. ಅದೇ ಪುಟ – ೫೨೫–೫೨೬

೩೩. ಸಂತೇಬೆನ್ನೂರು ಸುಮಂತ್ರಿದ್ರನಾಡಿಗ್, ೨೦೧೦ ದಾವಣಗೆರೆ ಜಿಲ್ಲೆ ಇತಿಹಾಸ ಕೆಲವು ಹೆಜ್ಜೆಗಳು, ಪುಟ – ೧೨೪

೩೪. ಷಡಕ್ಷರಯ್ಯ ರು.ಮ. ಮತ್ತು ಜಯಮ್ಮ.ಬಿ., ಪೂರ್ವೋಕ್ತ, ಪು.ಸಂ, ೧೦೦

೩೫. ಚೆನ್ನಕ್ಕ ಎಲಿಗಾರ, ೧೯೭೭: ಮಾಸ್ತಿಕಲ್ಲು, ಪು.ಸಂ, ೧೬

೩೬. ಶೇಷಶಾಸ್ತ್ರಿ ಆರ್, ೨೦೦೪: ಕರ್ನಾಟಕದ ವೀರಗಲ್ಲುಗಳು ಪು.ಸಂ, ೧೬೫

೩೭. ಚೆನ್ನಕ ಎಲಿಗಾರ, ೧೯೭೭: ಪೂರ್ವೋಕ್ತ, ಪು.ಸಂ, ೧೬

# ಅಧ್ಯಾಯ – ೫

## ಸಾಂಸ್ಕೃತಿಕ ಆಚರಣೆಗಳು

ಸಾಂಸ್ಕೃತಿ ಮಾನವನ ಅವಿಭಾಜ್ಯ ಅಂಗ. ಇದರ ಅರ್ಥ ಮತ್ತು ವ್ಯಾಪ್ತಿ ವಿಶಾಲವಾದದ್ದು ಮತ್ತು ಬಹುಮುಖಿ ಆಯಾಮಗಳಿಂದ ಕೂಡಿರುವಂಥದ್ದು. ನಿರಂತರ ಬೆಳವಣಿಗೆ ಇದರ ವಿಶೇಷತೆ ಸಂಸ್ಕೃತಿಯ ಕುರಿತು ವಿದ್ವಾಂಸರು ಬಹು ಹಿಂದಿನಿಂದಲೇ ತಮ್ಮ ದೃಷ್ಟಿಕೋನಗಳಲ್ಲಿ ವ್ಯಾಖ್ಯಾನಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. ಜನಪದರ ಪ್ರಾಚೀನ ನಡುವಳಿಕೆ, ಆಚಾರ–ವಿಚಾರ ಹಾಗೂ ಜೀವನ ವಿಧಾನದ ಪ್ರತಿಬಿಂಬವೇ ಸಂಸ್ಕೃತಿ ಎನ್ನಬಹುದು. ಸಂಸ್ಕೃತಿಯಲ್ಲಿ ಜನರ ರೂಢಿ ಸಂಪ್ರದಾಯ ವೇಷ ಭಾಷೆ ಆಚರಣೆ, ನಂಬಿಕೆ, ಐತಿಹ್ಯಗಳು, ಜನಸಮುದಾಯಗಳ ಸಹಭಾಗಿತ್ವವು ಸೇರಿದಂತೆ ಅನೇಕ ಅಂಶಗಳು ಸಮ್ಮಿಳಿತಗೊಂಡಿರುತ್ತವೆ. ಜಾಗತೀಕರಣದ ಪರಿಕಲ್ಪನೆ ಇಂದು ಹೆಮ್ಮರವಾಗಿ ಬೆಳೆದು ಜಗತ್ತಿನ ಎಲ್ಲಾ ರಂಗಗಳನ್ನು ತನ್ನಡೆಗೆ ಸೆಳೆಯುತ್ತಿರುವಾಗ ಸಂಸ್ಕೃತಿಯನ್ನು ಪರಿವರ್ತಿಸುವ ನಿಟ್ಟಿನಲ್ಲಿ ಇದು ತೀವ್ರತರವಾದ ಪರಿಣಾಮವನ್ನು ಬೀರುತ್ತಿರುವುದು ಸ್ಪಷ್ಟ ಈ ಹಿನ್ನೆಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಸಾಂಸ್ಕೃತಿಕ ಆಚರಣೆಯ ವಿವರಗಳು ಹೆಚ್ಚಾಗಿ ಮೌಖಿಕ ಪರಂಪರೆಗಳಲ್ಲಿಯೇ ನೆಲೆಗೊಂಡಿರುತ್ತಾವೆ.[೧] ಅವುಗಳಲ್ಲಿ ಚಾರಿತ್ರಿಕ ಇದ್ದರೂ ಅದೂ ಕಾಲಾನುಕ್ರಮದ ಬದ್ಧತೆಯಲ್ಲಿ ರೂಪಗೊಂಡಿರುವುದಿಲ್ಲ ಹಾಗಾಗಿ ಭೂತದಿಂದ ಭವಿಷ್ಯಕ್ಕೆ ವರ್ತಮಾನದಿಂದ ಭೂತಕ್ಕೂ ಪಯಣಿಸಿದ ಹೆಜ್ಜೆ ಗುರುತುಗಳನ್ನು ನಿರ್ದಿಷ್ಟವಾಗಿ ಗುರುತಿಸುವುದು ಸಹ ತುಂಬಾ ಕಷ್ಟವಾಗಿದೆ.

ಪ್ರಸ್ತುತ ಈ ಅಧ್ಯಯವು ಅಣಜಿ ಪರಿಸರದಲ್ಲಿ ಬರುವಂಥ ಸಾಂಸ್ಕೃತಿಕ ಆಚರಣೆಗಳು ರೂಪಗೊಂಡಿರುವ ಕೆಲವು ಮಹತ್ವದ ನೆಲೆಗಳ ಕುರಿತು ಚರ್ಚಿಸುವ ಉದ್ದೇಶ ಹೊಂದಲಾಗಿದೆ. ಇಲ್ಲಿ ಪ್ರಕಟಿಸಿರುವ ನೆಲೆಗಳ ಕುರಿತು ಜಾನಪದ ಅಧ್ಯಯನ ಶಿಸ್ತುಗಳ ಹಿನ್ನೆಲೆಯಲ್ಲಿ ಚರ್ಚೆಗೆ ಒಳ ಪಡಿಸಬಹುದಿಂದ ಸನ್ನಿವೇಶಗಳಿದ್ದರೂ ಆ ತರಹದ ಪ್ರಯತ್ನವು ಸಹ ಈ ಅಧ್ಯಾಯನದ ಉದ್ದೇಶ ಬಹುಸಂಖ್ಯಾತ ಹಾಗೂ ವಿವಿಧ ಜಾತಿ–ಜನಾಂಗಗಳ ಗುಡಿಗಳಿಲ್ಲದೇ ಆಚರಣೆಗೊಳ್ಳತ್ತಿರುವ ಕೆರೆ ಹೊನ್ನಮಜಾತ್ರೆ ಉಡ್ಸಲನಮ್ಮ ಜಾತ್ರೆ, ಆಂಜನೇಯ, ರಾಮನವಮಿಯನ್ನು ಅಣಜಿ ಈ ಪ್ರದೇಶದಲ್ಲಿ ಆಚರಣೆಯ ಹೆಚ್ಚಿನ ಪ್ರಸಿದ್ದ ಪಡೆದಿವೆ. ಅಂಥ ಪ್ರಮುಖ ವಿವರಗಳ ಕುರಿತು ಹಾಗೂ ಆ ಸ್ಥಳಗಳೆಲ್ಲ ನಿರ್ಮಾಣಗೊಂಡು ಇತಿಹಾಸ ಮತ್ತು ಪುರಾತತ್ವ ಆಕಾರಗಳನ್ನು ಪರಿಗಣಿಸಿ ಪ್ರಸ್ತುತ

ವಿವರಗಳನ್ನು ಚರ್ಚಿಸುವ ಪ್ರಯತ್ನಮಾಡಲಾಗಿದೆ. ಅಲ್ಲದೇ ಸಂಬಂಧಿಸಿದ ಮಾಹಿತಿಗಳನ್ನು ಬೇರೆ ಬೇರೆಯಾಗಿ ನೋಡದೇ ಒಟ್ಟು ಸಮಗ್ರತೆಯಿಂದ ಕೂಡಿರುವ ಹಾಗು ಧ್ವನಿಯನ್ನು ಒಟ್ಟಾರೆ ರೂಪದಲ್ಲಿ ಪ್ರಸ್ತಾಪಿಸಲಾಗಿದೆ. ಸಾಂಸ್ಕೃತಿಕ ಆಚರಣೆಗಳು ಭೌತಿಕ ಆಕರಗಳ ಹಿನ್ನೆಲೆಯಲ್ಲಿ ಕೆಲವು ಮಾಹಿತಿಗಳನ್ನು ಸೀಮಿತ ಚೌಕಟ್ಟಿನಲ್ಲಿ ಮಾತ್ರ ಚರ್ಚಿಸಲಾಗಿದೆ. ಪ್ರಸ್ತುತ ನನ್ನ ಅಧ್ಯಾಯನ ವ್ಯಾಪ್ತಿಯಲ್ಲಿ ಅನೇಕ ಸಾಂಸ್ಕೃತಿಕ ಆಚರಣೆಗಳು ಕಂಡುಬರುತ್ತಾವೆ.[೨]

### ಜಾತ್ರೆಗಳು

ಅತ್ಯಂತ ಆಕರ್ಷಕವಾದ ಜನಪದೀಯ ಆಚರಣೆಯೇ ಜಾತ್ರೆ, ಜಾತಿ ವರ್ಗಗಳ ಮೇಲು ಕೀಳು, ಮಡಿಮೈಲಿಗೆಯನ್ನು ಮೀರಿ ಜನಸಮುದಾಯ ಮತೀಯ ವಿಧಿಯಾಚರಣೆಯ ನೆಪದಲ್ಲಿ ದೈವವೊಂದರ ಸುತ್ತ ನಿರ್ದಿಷ್ಟ ದಿನಗಳೆಂದು ನೆರೆಯುವುದನ್ನು ಜಾತ್ರೆ ಎನ್ನಬಹುದು. ಜನ ಜನ ಸೇರಿದರೆ ಜಾತ್ರೆ ಎಂಬ ಮಾತಿನಂತೆ ಜನತೇಯೇ ಪ್ರಮುಖ ಆಕರ್ಷಣೆ 'ಯಾತ್ರೆ' ಎಂಬ ಸಂಸ್ಕೃತಿ ಪದದ ತದ್ಭವವಾಗಿ ಜಾತ್ರೆ ಹುಟ್ಟಿದೆ.

ಜಾತ್ರೆ ಎಂಬ ಪದವನ್ನು ಪರೀಷೆ ಎಂಬ ಪದವು ಕೂಡ ಕರೆಯುತ್ತಾರೆ. ಪರೀಷೆ ಪರ್ಷೆ ಪದಗಳು ಸಂಸ್ಕೃತದ ಪರಿಷತ್ ಎಂಬ ಪದದಿಂದ ಬಂದಿದೆ. ಜಾತ್ರೆಗಳು ಜನಪದದಲ್ಲಿ ಭಾವನಾತ್ಮಕ ಏಕತೆಯನ್ನು ತರುತ್ತದೆ. ಭಾವೈಕ್ಯತೆಗೆ ನಾಂದಿಹಾಡುತ್ತವೆ ಎಂದು ಹೇಲಬಹುದು. ಜಾತ್ರೆಗಳ ಮೂಲಕ ಗ್ರಾಮೀಣರ ಜನರ ಜೀವನವು ಸಾಮಾಜಿಕ ಧಾರ್ಮಿಕ, ಸಾಂಸ್ಕೃತಿಕ ಬದುಕನ್ನು ಅರಿಯುವುದರ ಜೊತೆಗೆ ಗ್ರಾಮ ಸಂಸ್ಕೃತಿಯ ಅಧ್ಯಯನಕ್ಕೆ ಪ್ರಬಲ ಭೂಮಿಕೆಯಾಗುತ್ತದೆ. ಜಾತ್ರೆಯೂ ಭಿನ್ನ ಭಿನ್ನ ಆಶಯವನ್ನೊಂದಿದ್ದು ಆಯಾಯ ಗ್ರಾಮ ಸಂಸ್ಕೃತಿಯನ್ನು ಅಚ್ಚುಕಟ್ಟಾಯಾಗಿ ಹೇಳುತ್ತಾವೆ. ಅಣಜಿ ಕೆರೆ ಹೊನ್ನಮ ಜಾತ್ರೆ ಉಡ್ಸಾಲಂಭಿಕೆ ಜಾತ್ರೆ, ಇನ್ನೊಂದ ಈ ಪ್ರದೇಶಗಳಲ್ಲಿ ಜಾತ್ರೆಗಳು ನಡೆದುಕೊಂಡು ಬಂದಿವೆ.[೩]

### ಕೆರೆಹೊನ್ನಮ್ಮನ ಜಾತ್ರೆ

ಅಣಜಿ ಗ್ರಾಮದಲ್ಲಿ ಜರುಗುವ ಪ್ರಸಿದ್ದವಾದ ಹೊನ್ನಮ್ಮನ ಜಾತ್ರೆ ಈ ಭಾಗದಲ್ಲಿ ಅತ್ಯಂತ ದೊಡ್ಡ ಹಾಗೂ ಐದು ವರ್ಷಕ್ಕೆ ಒಮ್ಮೆ ಜಾತ್ರೆಯನ್ನು ಮಾಡುತ್ತಾರೆ. ಈ ಜಾತ್ರೆಯನ್ನು ಫೆಬ್ರವರಿ ತಿಂಗಳಲ್ಲಿ ಐದು ದಿನ ಕಾಲ ಆಚರಣೆಯನ್ನು ಮಾಡುತ್ತಾರೆ.

ಮೊದಲು ದಿನ ಮಂಗಳವಾರ, ಗಂಗೆ ಪೂಜೆ ಕೆರೆ ಪಕ್ಕದಲ್ಲಿ ಎರಡನೇಯದಿನ ಬುಧವಾರ ದಿನದ್ದು ಊರಿನ ಎಲ್ಲಾ ದೇವರುಗಳು ಮಾರಮ್ಮನ ದೇವಸ್ಥಾನ ಹತ್ತಿರ ಇಟ್ಟು ಶ್ರೀ ಕೆರೆ ಹೊನ್ನಮ್ಮ ಕೇಲುಗಳು ಪೂಜೆ ಮಾಡುತ್ತಾರೆ.

ಮೂರನೇ ದಿನ ಗುರುವಾರ ಜಾತ್ರೆಯಲ್ಲಿ ಕುಸ್ತಿ ಪಂದ್ಯವಳಿಗಳು ಮತ್ತು ಇಲ್ಲಿಗೆ ಕೆಲವು ಭಾಗದ ರಾಜ್ಯ ಕುಸ್ತಿಪಟ್ಟಿಗಳು ಭಾಗವಹಿಸುತ್ತಾರೆ.

ನಾಲ್ಕನೇ ದಿನ ಶುಕ್ರವಾರ ಊರಿನ ಎಲ್ಲಾ ಗ್ರಾಮಸ್ಥರು ಮತ್ತು ಅಕ್ಕ ಪಕ್ಕದ ಹಳ್ಳಿ ಎಲ್ಲಾ ಜನ ಸಮುದಾಯದವರು ಬಂದು ಪೂಜೆ ಕಾರ್ಯಕ್ರಮ ಇರುತ್ತದೆ.

ಐದನೇ ದಿನ ಶನಿವಾರದ್ದು ಹೊನ್ನಮ್ಮನ ದೇವಿಯನ್ನು ಪಲ್ಲಕಿಯಲ್ಲಿ ಹೊತ್ತುಕೊಂಡು ಅಣಜಿ ಗ್ರಾಮ ಮನೆ ಮನೆಗೆ ಹೋಗಿ ನಂತರ ಗುಡಿತುಂಬಿಸುವ ಸಂಪ್ರದಾಯ ಕಾಣುತ್ತವೆ. ವಿಶೇಷತೆ ಎಂದರೆ ಕೆರೆಯಲ್ಲಿ ನೀರು ಇದ್ದರೆ ಮಾತ್ರ ಜಾತ್ರೆ ಮಾಡುತ್ತಾರೆ ಎಂದು ಹೇಳಿದ್ದರು.

ಪ್ರಸ್ತುತ ಎಂದರೆ ಪ್ರತಿ ವರ್ಷ ಗೌರಿ ಹುಣ್ಣಿಮೆಯ ಸಮೀಪ ಬರುವಾಗ ದೀಪಾವಳಿಯಲ್ಲಿ ಹಾಲು ಬೀಡುವ ಹಬ್ಬ ಆಚರಿಸಲಾಗುತ್ತದೆ. ಶುಕ್ರವಾರ ಮನೆಯಲ್ಲಿ ಹಿರಿಯರ ಪೂಜೆ ನಡೆಯುತ್ತಿದೆ ಮತ್ತು ಶನಿವಾರ ಬೆಳಿಗ್ಗೆ ಕೆರೆ ಹೇರಿ ಮೇಲೆ ಹಾಲುಬೀಡುವ ಶಾಸ್ತ್ರ ಕೆರ್ನಹಳ್ಳಿ ಈ ಊರು ಅಣಜಿ ಕೆರೆಯ ಕೆಳಭಾಗದಲ್ಲಿ ಅಥವಾ ಪಕ್ಕದಲ್ಲಿ ಬರುವಂತಹ ಗ್ರಾಮವಾಗಿದೆ. ಹೊನ್ನಮ್ಮ ಕೆರ್ನಹಳ್ಳಿ ಸಿದ್ಧನಗೌಡನ ಮಗಳು ತವರುಮನೆ ಆಗಿರುವುದರಿಂದ ಹೊನ್ನಮ್ಮನಿಗೆ ತವರುಮನೆಯಾಗಿರುವುದರಿಂದ ಈ ಗ್ರಾಮದ ಅವರು ಹಾಲು ಕೋಡಹೊತ್ತುಕೊಂಡು ಅಣಜಿ ಗ್ರಾಮಕ್ಕೆ ಗಂಡನ ಮನೆ ಆಗಿರುವುದರಿಂದ ಎರಡು ಊರಿನ ಗ್ರಾಮಸ್ಥರು ಸೇರಿ ಹಾಲುಬೀಡುವಶಾಸ್ತ್ರ ಹಬ್ಬವನ್ನು ಆಚರಿಸುತ್ತಾರೆ. ಆದರೆ ನೊಡಲು ಅಣಜಿ ಪ್ರದೇಶದ ಸುತ್ತ-ಮುತ್ತಲಿನ ಜನಾಂಗದವರು ಆಗಮಿಸಿರುತ್ತಾರೆ.

**ಉಡ್ಸಲಾಂಭಿಕದೇವಿ ಜಾತ್ರೆ**

ಈ ದೇವಾಲಯವು ಗ್ರಾಮದ ಮಧ್ಯ ಭಾಗದಲ್ಲಿ ಬರುವಂತಹ ಕುರುಡಿ ಮತ್ತು ಕಿತ್ತೂರು ಹೋಗುವ ಮಾರ್ಗದಲ್ಲಿ ಈ ದೇವಾಲಯವನ್ನು ಎಡಭಾಗಕ್ಕೆ ಕಾಣುತ್ತವೆ. ಈ ಗ್ರಾಮದೇವತೆಯನ್ನು ಕೂಡು ಐದು ವರ್ಷಕ್ಕೆ ಒಂದು ಬಾರಿ ಜಾತ್ರೆಯನ್ನು ಮಾಡುತ್ತಾರೆ. ಜಾತ್ರೆಯು ಮಡವುದಕ್ಕಿಂತ ಮುಂಚೆ ಗ್ರಾಮದ ಗೌಡವರು, ತಳವಾರು, ಊರಿನ ಹಿರಿಯರು ಒಂದು ಕಡೆ ಸೇರಿ ಈ ಜಾತ್ರೆಯ ವಿಷಯ ಬಗ್ಗೆ ಮಾತುನ್ನಾಡುತ್ತಾರೆ. ನಂತರ ಊರಿನಲ್ಲಿ ಇರುವ ಆದಿ ಕರ್ನಾಟಕದ ಜನಾಂಗದವರಿಗೆ ಗೌಡರು ಎಲ್ಲಾರಿಗೆ ವಿಷಯ ತಿಳಿಯಲ್ಲಿ ಎಂದು ಟಂ, ಟಂ. ಅಥವಾ (ಡಂಗುರ) ಬಡಿಸುತ್ತಾರೆ. ಹಾಗ ಮಾರ್ಚ್ ತಿಂಗಳಲ್ಲಿ ಮಂಗಳವಾರದಿಂದ ಗುರುವಾರದವರೆಗೆ ಮೂರು ದಿನಗಳ ಜಾತ್ರೆಯನ್ನು ಮಾಡುತ್ತಾರೆ. ಮೊದಲನೇಯ ದಿನ ಮಂಗಳವಾರ ಗಂಗೆ ಪೂಜೆಗೆ ದೇವರು ಹೋಗುತ್ತಾರೆ. ರಾತ್ರಿ ೧೨ ಗಂಟೆಗೆ ಸುಮಾರಿಗೆ ಕೋಣವನ್ನು ಬಲಿ ಕೊಡುತ್ತಾರೆ. ಹಾಗ ಬೆಳಿಗ್ಗೆ ೪-೫ಗಂಟೆ ಸಮಯದಲ್ಲಿ ಊರಿನ ಸುತ್ತಲು ಸರಗವನ್ನು ಚೆಲ್ಲುತ್ತಾರೆ. ಗ್ರಾಮ ಶಾಂತಿ ಎಂದು ಹೇಳುತ್ತಾರೆ. ಮತ್ತು ಬುಧವಾರ ದಿನ ಕೆಲವು ಜನಾಂಗದವರು ಮಾತ್ರ ಪ್ರಾಣಿ ಬಲಿ ಕೊಡುತ್ತಾರೆ. ಇನ್ನೂ ಕೆಲವು ಜನಾಂಗದವರು ಸಿಹಿ ಊಟವನ್ನು ಅಡಿಗೆ ಮಾಡುತ್ತಾರೆ. ಗುರುವಾರದಿನ ಉಡ್ಸಲಾಂಭಿಕೆದೇವಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ ನಡೆಮಡಿ ಹಾಸುತ್ತಾ ಊರು ತುಂಬಾ ವಿಜೃಂಭಣೆಯಿಂದ ದೇವಿಯನ್ನು ಮೆರಸುತ್ತಾರೆ. ಮತ್ತು ದೇವಿಯನ್ನು ಗುಡಿ ತುಂಬಿಸುತ್ತಾರೆ.[೪] ಈ ಜಾತ್ರೆಯನ್ನು ತುಂಬ ಚನ್ನಾಗಿ ಮಾಡುತ್ತಾರೆ.

## ಆನುಗೋಡು ಮರುಳು ಸಿದ್ದೇಶ್ವರ ಜಾತ್ರೆ

ಈ ಗ್ರಾಮ ದಾವಣಗೆರೆ ತಾಲ್ಲೂಕಿನಿಂದ ಪಿ.ಬಿ ಹೆದ್ದಾರಿ ೪ರಲ್ಲಿ ಪಕ್ಕದಲ್ಲಿ ಬರುವಂತಹ ಗ್ರಾಮವಾಗಿದೆ. ಈ ದೇವಾಲಯವು ಗ್ರಾಮದ ದಕ್ಷಿಣಭಾಗಕ್ಕೆ ಬರುತ್ತದೆ. ಈ ಮೂಲ ದೇವಾಲಯ ಶೀತಲಗೊಂಡ ನಂತರ ಹೊಸದಾಗಿ ಜೀರ್ಣೋದ್ದಾರ ಮಾಡಿದ್ದಾರೆ ಎಂದು ಕಾಣುತ್ತವೆ. ಈ ದೇವಾಲಯದ ಜಾತ್ರೆಯು ಒಂದು ವರ್ಷಕ್ಕೆ ಒಂದು ಸಾರಿ ಚೈತ್ರಶುದ್ದ ಪೂರ್ಣಿಮ ಹಂಪೆ ಹುಣ್ಣಿಮೆ ಎಂದು ಈ ಜಾತ್ರೆ ಮಾಡುತ್ತಾರೆ.

ಯಗಾದಿ ಆಗಿ ಐದು ದಿನದ ನಂತರ ತೇರುಗಾಲಿ ಪೂಜೆ ಮಾಡಿ ಹೊರಗಡೆ ಹಾಕುತ್ತಾರೆ. ತೇರನ್ನು ಎಳೆಯುವ ಒಂದು ದಿನದ ಮುಂಚೆ ಮರುಳಸಿದ್ದೇಶ್ವರನಿಗೆ ಪೂಜೆ ಮತ್ತು ಅಭಿಷೇಕ ಕಾರ್ಯಗಳನ್ನು ಮಾಡಿ ಕಂಕಣವನ್ನು ಕಟ್ಟಲಾಗುತ್ತದೆ. ಹೀಗೆ ಅನೇಕ ಕಾರ್ಯಕ್ರಮಗಳು ನಡೆದ ನಂತರ ಹುಣ್ಣಿಮೆ ದಿನದಂದು ತೇರನ್ನು ಎಳೆಯಲಾಗುತ್ತದೆ. ಆ ದಿನ ಬೆಳಿಗ್ಗೆ ಮರುಳಸಿದ್ದೇಶ್ವರನಿಗೆ ಪಂಚಾಮೃತದಿಂದ ಅಭಿಷೇಕ ಮಾಡಿ ಮೂರ್ತಿಯನ್ನು ವಿವಿಧ ರೀತಿಯಿಂದ ಅಲಂಕರಿಸಲಾಗುತ್ತದೆ. ಗ್ರಾಮದ ಜನರು ಡೊಳ್ಳು ವಾದ್ಯಗಳ ಮೂಲಕ ಪಡೆವುಗಳನ್ನು ತರಲಾಗುತ್ತದೆ. ಹಾಗ ಮರುಳು ಸಿದ್ದೇಶ್ವರ ಮತ್ತು ಊರಿನ ಪರಿವಾರ ದೇವರುಗಳಿಗೆ ಪೂಜಾಕಾರ್ಯಗಳನ್ನು ಸಲ್ಲಿಸಲಾಗುತ್ತದೆ. ಎಲ್ಲಾ ಪೂಜಾ ಕಾರ್ಯಗಳು ಮುಗಿದ ನಂತರ ದೀಡ್ ನಮಸ್ಕಾರ ಕಾಣಿಕೆಯನ್ನು ಸಲ್ಲಿಸುವುದು. ಹೂ ಹಣ್ಣುಗಳನ್ನು ಅರ್ಪಿಸುವುದರ ಮೂಲಕ ಜನರು ತಮ್ಮ ಹರಕೆಯನ್ನು ತೀರಿಸುತ್ತಾರೆ ಈ ಪದ್ದತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ಸಾಯಂಕಾಲ ಐದು ಗಂಟೆಗೆ ದೇವಾಲಯದಿಂದ ತೇರಿನ ಕಳಸವನ್ನು ಅರ್ಚಕರು (ಪೂಜಾರಿ) ಆವೇಶಭರಿತರಾಗಿ ಹೊತ್ತುಕೊಂಡು ಬಂದು ತೇರಿನ ಸುತ್ತ ಪ್ರದಕ್ಷಿಣೆ ಹಾಕಿ ತೇರಿನ ಮುಂಭಾಗದಲ್ಲಿ ಇರಿಸುತ್ತಾರೆ ಕಳಸಕ್ಕೆ ಪೂಜೆಯನ್ನು ಸಲ್ಲಿಸಿ ತೇರಿನ ಮೇಲೆ ಆರೋಹಣ ಮಾಡಲಾಗುತ್ತದೆ. ತೇರಿನ ಸಿದ್ದತೆ ಕಾರ್ಯವೆಲ್ಲವೂ ಬಡಗಿಗಳದು. ಕಳಸಾರೋಹಣದ ನಂತರ ತೇರನ್ನು ಎಳೆಯಲಾಗುತ್ತದೆ. ಮತ್ತು ಊರಿನ ಎಲ್ಲಾ ಜನಾಂಗದವರು ಸೇರಿ ಅರಿಸಿಣ ಎಣ್ಣೆ ಪೂಜೆ ಮಾಡಿಸುತ್ತಾರೆ. ತೇರು ಸಾಗುವಾಗ ಮುಂಭಾಗದಲ್ಲಿ ಡೊಳ್ಳುವಾದ್ಯಗಾರರು ಬಾಜ, ಭಜಂತ್ರಿಯವರು ಸನಾಯಿ, ಊದುವವರು, ಹಲಗೆ ಡ್ರಮ್‌ಸೆಟ್ ಬಾರಿಸುವವರು ಇರುತ್ತಾರೆ.[೫]

ಹಾಗೆಯೇ ಛತ್ರಿ ಪಲ್ಲಕ್ಕಿ ಹೊತ್ತಿರುವವರು ಮತ್ತು ತೇರು ಸಾಗುವ ಹೊತ್ತಿಗೆಲ್ಲ ಸುತ್ತಮುತ್ತಲಹಳ್ಳಿಗಳಿಂದ ದೂರದ ಪ್ರದೇಶಗಳಿಂದ ಬಂದ ಸಾವಿರಾರು ಭಕ್ತರು ಸೇರಿರುತ್ತಾರೆ ತೇರು ಮುಗಿದನಂತರ ದಾಸಹೊಕೂಡು ನಡೆಯುತ್ತಿದೆ. ನಂತರ ಸಿದ್ದನೂರುನಲ್ಲಿ ಇರುವ ಮರುಳುಸಿದ್ದೇಶ್ವರನು ಕೂಡು ಆನುಗೋಡಿಗೆ ಬರುತ್ತದೆ ಎಂದು ಹೇಳುತ್ತಾರೆ.

## ಕೃಷಿಗೆ ಸಂಬಂಧಿಸಿದ ಆಚರಣೆಗಳು

ಅಣಜಿ ಪರಿಸರದ ವ್ಯಾಪ್ತಿಯಲ್ಲಿ ಜನರು ಮುಖ್ಯ ಕಸುಬು, ಕೃಷಿ, ವ್ಯವಸಾಯ, ಒಕ್ಕಲುತನ ಹೀಗೆ ಹಲವಾರು ಹೆಸರುಗಳಿಂದ ಕರೆಯಲ್ಪಡುವ ಕೃಷಿ ಬದುಕನ್ನು ತಮ್ಮ ಜೀವಂತನ್ನಾಗಿಸಿ ಕೊಂಡಿದ್ದಾರೆ. ಇದು ಸಕಲ ಜೀವರಾಶಿಗೆ ಅನ್ನ ನೀಡುವ ಪವಿತ್ರ ಕಾಯಕವಾಗಿದೆ. ರಾಗಿ, ಭತ್ತ, ಜೋಳ, ಮುಂತಾದ ಬೆಳೆಯು ಜನರ ನೀರಾವರಿ ಸೌಲಭ್ಯ ಮತ್ತು ಮಳೆಯ ನೀರನ್ನ ಅವಲಂಬಿಸಿರುವ ರೈತರು ಭೂಮಿ ತಾಯಿಯನ್ನು ನಂಬಿ ಬದುಕುವ ಅನುವಂಶೀಯತೆ ಈ ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತವೆ. ಇಲ್ಲಿ ಕೃಷಿಗೆ ಸಂಬಂಧಿಸಿದ ಹಲವಾರು ಆಚರಣೆಗಳು ಕಂಡುಬರುತ್ತವೆ.[೬]

## ಮೊದಲು ಮಾಡುವ ಪದ್ಧತಿ

ಸಾಮಾನ್ಯವಾಗಿ ಬೇಸಿಗೆ ಕಾಲ ಕಳೆದು ಮಳೆಗಾಲ ಪ್ರಾರಂಭವಾಗಿ ಮೊದಲ ಮಳೆಯು ನೆಲಕ್ಕೆ ಬಿದ್ದು ಮಳೆಯು ಚೆನ್ನಾಗಿ ಬಂದರೆ ಉಳುಮೆ ಮಾಡಲು ಪ್ರಾರಂಭಿಸುವ ಮುನ್ನ ರೈತರು ಹಲವು ಆಚರಣೆಗಳನ್ನು ಮಾಡುತ್ತಾರೆ. ಮೊದಲು ರೈತನು ಮಡಿಯಿಂದ ಮಡಿಬಟ್ಟೆ ಉಟ್ಟು, ನೇಗಿಲು, ನೊಗ, ಕುಂಟೆ ಮುಂತಾದ ವ್ಯವಸಾಯಕ್ಕೆ ಬೇಕಾಗುವ ಪರಿಕರಗಳನ್ನು ತೊಳೆದು ಮತ್ತು ಎತ್ತು ತೊಳೆದು ಇವೆಲ್ಲವುಗಳನ್ನು ಪೂಜೆ ಮಾಡುತ್ತಾರೆ. ನಂತರ ತಮ್ಮ ತಮ್ಮ ಜಮೀನುಗಳಿಗೆ ಹೋಗಿ ಅಲ್ಲಿ ಮತ್ತೊಮ್ಮೆ ಪೂಜೆಗೆ ಬೇಕಾಗುವ ಅನ್ನ ಕುಂಕುಮ, ವಿಭೂತಿ, ಇತ್ಯಾದಿ ಹಚ್ಚಿದ ನಂತರ ನೇಗಿಲನ್ನು ಹೂಡಿ ವರ್ಷದ ಮೊದಲ ಬೇಸಾಯವನ್ನು ಪ್ರಾರಂಭಿಸುತ್ತಾರೆ. ಇದು ಹಿಂದಿನಿಂದಲೂ ನಡೆದುಕೊಂಡು ಬಂದ ರೀತಿಯ ಆಚರಣೆಯಾಗಿದೆ.

## ಬಿತ್ತನೆಯ ಪೂಜೆ

ರೈತರು ಭೂಮಿಯಲ್ಲಿ ಬೀಜವನ್ನು ಬಿತ್ತುವ ಮೊದಲು ಬಿದಿರಿನಿಂದ ತಯಾರಿಸಿದ ಗೂಡೆಗಳಲ್ಲಿ (ಬಬುನಲ್ಲಿ) ಬಿತ್ತುವ ಬೀಜಗಳನ್ನು ತುಂಬಿ ವಿಭೂತಿ, ಅರಿಶಿನ ಕುಂಕುಮ ಇಟ್ಟು ಹೊಲದ ಮೂಲೆಯಲ್ಲಿ ಪೂಜೆ ಮಾಡಿ ರೈತರು ಚನ್ನಾಗಿ ಮಳೆನೀರಿನಿಂದ ಪಸಲುಬರಲಿ ಎಂದು ಬಿತ್ತನೆ ಕಾರ್ಯವನ್ನು ಪ್ರಾರಂಭ ಮಾಡುತ್ತಾರೆ.[೭]

## ಕೊಯ್ಯಲು ಪೂಜೆ

ಭೂಮಿಯಲ್ಲಿ ಬಿತ್ತಿದ ನಂತರ ಸಮೃದ್ಧಿಯಾಗಿ ಬೆಳೆದ ಬೆಳೆಯನ್ನು ಕಟಾವಿನ ಹಂತಕ್ಕೆ ಬಂದಾಗ ಕೊಯ್ಯಲೆ ಮಾಡುವ ಮೊದಲು ಒಳ್ಳೆಯ ದಿನವನ್ನು ನೋಡಿ ಕಟಾವು ಮಾಡುವ ಪದ್ದತಿ ಇಂದಿಗೂ ಕಾಣುತ್ತಾವೆ. ಕುಡುಗೋಲನ್ನು ಹೊಲದ ಬದುವಿನಲ್ಲಿಟ್ಟು ಪೂಜೆ ಮಾಡಿ ಬೆಳೆಯನ್ನು ಕಟಾವು ಮಾಡುತ್ತಾರೆ ನಂತರ ರಾಶಿ ಹಾಕಿ ಬಣವೆ ಮೂಲಕ ಹೊಲದಲ್ಲಿರುವಂತ ಪಸಲುಯನ್ನು ಒಂದು ಕಡೆ ಗೂಡಿನ ತರಹ ಹಾಕುತ್ತಾರೆ ರೈತರು ಇಂತಹ ಕೆಲಸವನ್ನು ಮಾಡುತ್ತಾರೆ.

### ಕಣ ಮಾಡುವ ಪೂಜೆ

ಪ್ರಸ್ತುತ ಈ ಪ್ರದೇಶದಲ್ಲಿ ರೈತರು ಸಮೃದ್ಧಿಯಾಗಿ ಬೆಳೆದಿರುವ ಆಹಾರ ಧಾನ್ಯಗಳನ್ನು ಹುಲ್ಲಿನಿಂದ ಬೇರ್ಪಡಿಸಿ ಕಾಳುಗಳನ್ನು ಪ್ರತ್ಯೇಕಗೊಳಿಸುವುದಕ್ಕೆ ಕಣ ತುಂಬ ಅತ್ಯಾವಶ್ಯಕ. ಗಟ್ಟಿಯಾಗಿರುವ ಒಂದು ನಿರ್ದಿಷ್ಟ ಸ್ಥಳದಲ್ಲಿ ಕಳೆಯನ್ನು ಕೆತ್ತಿ ವೃತ್ತಕಾರವಾಗಿ ಕಣವನ್ನು ಮಾಡುತ್ತಾರೆ. ಬೆಳೆದ ಪಸಲುಯನ್ನು ಹೊಲದಿಂದ ತಂದು ರೈತರಿಗೆ ಹತ್ತಿರುವಂತಹ ಸ್ಥಳವನ್ನು ಕಣ ಮಾಡಿ ಕೊಳ್ಳುತ್ತಾನೆ. ನಂತರ ಕಣವನ್ನು ಗಟ್ಟಿಗೊಳಿಸಿ ಸಗಣಿಯಿಂದ ಸಾರಿಸಿ ಎರಡು-ಮೂರು ದಿನಗಳ ಕಾಲ ಬಿಟ್ಟು ಒಣಗಿದ ಮೇಲೆ ಹುಲ್ಲಿನ ರಾಶಿಯನ್ನು ಅದರ ಮೇಲೆ ಹಾಸಿ ರೋಣುಕಲ್ಲುಯನ್ನು ಹೊಡೆಯುವ ಮುನ್ನ ಅದನ್ನು ಪೂಜೆ ಮಡುತ್ತಾರೆ.[೮] ಕಣದ ಸುತ್ತಲು ಮುಳ್ಳಿನ ಗಿಡದ ರಂಬೆಗಳನ್ನು ತಂದು ಸುತ್ತಲು ಇಡುತ್ತಾರೆ ರಕ್ಷಣೆಗೋಸ್ಕರ ರೈತರು ಇದು ಕೂಡು ಅಣಜಿ ಪ್ರದೇಶದ ಸುತ್ತಮುತ್ತಿನಲ್ಲಿ ಇಂತಹ ಪದ್ದತಿಯನ್ನು ಕಾಣುತ್ತಾವೆ.

### ರಾಶಿ ಪೂಜೆ

ಅಣಜಿ ಪ್ರದೇಶದಲ್ಲಿ ಕಂಡು ಬರುವಂತಹ ರಾಶಿ ಪೂಜೆಯು ತುಂಬ ಆಚರಣೆಯಲ್ಲಿ ಕಾಣುತ್ತಾವೆ. ಆದರೆ ರೈತರು ಬೆಳೆದಿರುವಂತಹ ಬೆಳೆಯನ್ನು ಹುಲ್ಲಿನಿಂದ ಬೇರ್ಪಟ್ಟು ಧಾನ್ಯಗಳು ಜೋಳ, ರಾಗಿ, ಇತ್ಯಾದಿಗಟ್ಟಿಯಾದ ಧಾನ್ಯಗಳನ್ನು ಒಂದು ಕಡೆ ರಾಶಿ ಹಾಕುತ್ತಾರೆ. ನಂತರ ರಾಶಿಯ ಸುತ್ತಲು ಧಾನ್ಯ ಮಾಡಲು ಅಥವಾ ಕಾಳು ಎಂದು ಕರೆಯುತ್ತಾರೆ. ಧಾನ್ಯ ಮಾಡಲು ಬಳಸಿದ್ದ ಕೋಲು, ಮರಗೋಲು, ಇತ್ಯಾದಿ ಸಾಮಾಗ್ರಿಗಳನ್ನು ರಾಶಿಗೆಯಿಟ್ಟು ಮಾವಿನ ಎಲೆ, ಹೂಗಳನ್ನು ರಾಶಿಗೆ ಮತ್ತು ರೋಣುಕಲ್ಲುಗೆ ಮುಡಿಸಿ ಪೂಜೆ ಮಾಡುತ್ತಾರೆ. ಪೂಜೆ ಸಂದರ್ಭದಲ್ಲಿ ಕಾಳುಗಳ ಪಲ್ಲಾರ ಅಥವಾ ಮಂಡಕ್ಕಿವೆಲ್ಲವನ್ನು ಒಟ್ಟಿಗೆ ಸೇರಿಸಿ ರಾಶಿಯ ಮುಂದೆಯಿಟ್ಟು ನೈವೇದ್ಯ ಮಾಡುತ್ತಾರೆ. ನಂತರ ಅಲ್ಲಿಗೆ ಬಂದಂತಹ ಜನರ ಎಲ್ಲರಿಗೂ ನೀಡಿ ಧಾನ್ಯ (ಕಾಳು)ನ್ನು ಚೀಲುಗಳಿಗೆ ತುಂಬುತ್ತಾರೆ. ಈ ರೀತಿಯು ಕೂಡು ಅಣಜಿ ಪರಿಸರದಲ್ಲಿ ಕೃಷಿಗೆ ಸಂಬಂಧಿಸಿದಂತೆ ತುಂಬ ಆಚರಣೆಗಳನ್ನು ಮಾಡುತ್ತಾರೆ. ಮತ್ತು ಈ ಆಚರಣೆಗಳನ್ನು ಮಾಡುವುದರ ಮೂಲಕ ಕೃಷಿ ಚಟುವಟಿಕೆ ಸುಗಮವಾಗಿ ನಡೆಯುತ್ತಿದೆ ಎಂದು ನಂಬಿದ್ದಾರೆ.[೯]

### ಹಬ್ಬಗಳು

ಭಾರತೀಯ ಪರಂಪರೆಯಲ್ಲಿ ಹಬ್ಬಗಳು ವಿಶಿಷ್ಟ ಸ್ಥಾನಯಿದೆ. ಹಿಂದೂ ಮುಸ್ಲಿಂ ಕ್ರೈಸ್ತ ಧರ್ಮೀಯರು ತಮ್ಮ ತಮ್ಮ ಧರ್ಮದ ನಿಯಮಗಳಿಗನುಗುಣವಾಗಿ ಹಬ್ಬಗಳನ್ನು ನಡೆಸಿಕೊಂಡು ಬಂದಿರುವರು. ಹಬ್ಬಗಳಿಗೆ ವಿಶೇಷ ಮೆರುಗು ತಂದು ಕೊಡುವವರೆಂದರೆ ಜನಪದರು. ಜನಪದರ ಬದುಕಿನಲ್ಲಿ ಹಬ್ಬಗಳು ಹಾಸುಹೊಕ್ಕಾಗಿ ಬೆಳೆದುಕೊಂಡು ಬಂದಿವೆ. ಜನರು ತಮ್ಮ ದಿನನಿತ್ಯದ ಬದುಕಿನಲ್ಲಿ ನಿರಂತರವಾಗಿ ದುಡಿಮೆ ಜೀವನದ ಏಳು-ಬೀಳುಗಳಿಂದ ಹಗಲಿರುಳು ಕಷ್ಟದ

ಕಾಲವನ್ನು ನೂಕುತ್ತಿದ್ದಾರೆ. ದುಡಿಮೆ ಕೆಲಸಗಳಿಂದ ದಣಿದ ಜನರಿಗೆ ಹಬ್ಬಗಳು ಪುನಶ್ಚೇತನ ನೀಡುತ್ತವೆ. ಪ್ರಸ್ತುತ ಈ ಪ್ರದೇಶದಲ್ಲಿ ಜನಪದರು ತಮ್ಮ ಬದುಕಿನಲ್ಲಿ ಹಬ್ಬಗಳಿಗೆ ಮಹತ್ವ ನೀಡಿರುವಂತೆ ಅವುಗಳ ವಿಭಜನೆಯಾಗಿರುವುದು ಕಂಡುಬರುತ್ತದೆ. ಯುಗಾದಿ, ಕಾರಹುಣ್ಣಿಮೆ, ನಾಗರಪಂಚಮಿ, ಶ್ರಾವಣ ಗಣೇಶ ಚತುರ್ಥಿ, ದೀಪಾವಳಿ, ಮಕರಸಂಕ್ರಾಂತಿ, ಪ್ರಮುಖ ಹಬ್ಬಗಳಾಗಿವೆ. ಮುಸ್ಲಿಂರು ಮತ್ತು ಹಿಂದೂಗಳು ಸೇರಿ ಮೊಹರಾಂ ಹಬ್ಬವನ್ನು ಪ್ರಸಿದ್ದವಾಗಿದೆ.[೧೦]

**ಯುಗಾದಿ**

ಚೈತ್ರಮಾಸದ ಶುದ್ಧಪೌರ್ಣಿಮಿ ದಿನದಿಂದ ಮೂರು ದಿನಗಳ ಕಾಲ ಈ ಹಬ್ಬವನ್ನು ಆಚರಿಸಲಾಗುತ್ತಿದೆ. ಯುಗಯುಗಾದಿ ಕಳೆದರು ಯುಗಾದಿ ಮರಳಿಬರುತಿದೆ ಹೊಸ ವರುಷಕ್ಕೆ ಹೊಸ ಹರುಷವ ಹೊಸತು ಹೊಸತು ತರುತ್ತಿದೆ ಎಂಬ ಕವಿ ಬೇಂದ್ರೆಯವರ ವಾಣಿಯಂತೆ ಹೊಸ ವರ್ಷ ಹರ್ಷದಾಯಕವಾಗಲೆಂದು ಒಳ್ಳೆಯ ಇಚ್ಛೆಯಿಂದ ಆಚರಿಸುವ ಹಬ್ಬವೇ ಯುಗಾದಿ 'ಯುಗ' ಎಂದರೆ ನೂತನವರ್ಷ 'ಆದಿ' ಎಂದರೆ ಆರಂಭ ಎಂದರ್ಥ ಅಂದರೆ ಹೊಸವರ್ಷದ ಆರಂಭದ ದಿನ ಎಂದರ್ಥ. ರೈತರಿಗೆ ಹೊಸ ವರ್ಷವಾಗಿ ಚಂದ್ರಮಾನ ಯುಗಾದಿ ಆಚರಣೆಯಲ್ಲಿದೆ. ಈ ಸಮಯದಲ್ಲಿ ರೈತರು ಹೊಸದಾಗಿ ಕುಂಟೆ – ನೇಗಿಲು ಮುಂತಾದ ಸಾಮಾಗ್ರಿಗಳಿಗೆ ಹೊಲದಲ್ಲಿ ಮೊದಲು ಮಾಡುವ ಪದ್ದತಿಯನ್ನು ಕಾಣುತ್ತಾವೆ.

ಮೊದಲನೆ ದಿನ ಅಥವಾ ಅಮವಾಸ್ಯೆಯ ದಿನ ಮನೆಯಲ್ಲಿ ಎಲ್ಲರು ಮನೆ ಬಾಗಿಲುಗೆ ಪೂಜೆ, ಮತ್ತು ಕೆಲವು ಭಾಗದಲ್ಲಿ ಅಮವಾಸ್ಯೆಯ ದಿನ ಭೇಟೆ ಆಡುವುದಕ್ಕೆ ಕಾಡುಗೆ ಹೋಗುತ್ತಾರೆ. ನಂತರದ ದಿನದಲ್ಲಿ ಮೈಗೆ ಹರಳೆಣ್ಣೆ ಹಚ್ಚಿಕೊಂಡು ಅಭ್ಯಂಜನ ಮಾಡಿ ಮನೆಯನ್ನೆಲ್ಲಾ ಶುದ್ಧಿ ಮಾಡಿ ಶುಭ್ರವಾಗಿ ಎಲ್ಲಾರೂ ಕೂಡಿ ದೇವಾಲಯಗಳಿಗೆ ಹೋಗಿ ಪೂಜೆ ಅಥವಾ ಅಭಿಷೇಕವನ್ನು ಮಾಡಿಸುತ್ತಾರೆ. ಮೂರನೇ ದಿನ ಚಿಗುರಿದ ಬೇವಿನ ಎಲೆ ಹೂ, ಮಾವಿನ ಕಾಯಿ ಹಾಗೂ ವಿವಿಧ ಹಣ್ಣುಗಳನ್ನು ಬೆರೆಸಿ ಹೊಸ ಮಡಿಕೆಯಲ್ಲಿ ಬೇವು ಮಾಡಿ ಹಂಚಲಾಗುತ್ತದೆ. ನಂತರ ಸಾಯಂಕಾಲ ಚಂದ್ರನ ದರ್ಶನ ನೋಡಿ ಹಾಗೆಯೇ ಮನೆಯಲ್ಲಿ ಹಿರಿಯರಿಗೆ ಅವರ ಕಾಲುಗೆ ಮುಗಿಯುವುದು. ಇದು ಆಯಾ ಗ್ರಾಮದ ಸಂಸ್ಕೃತಿಯಂತೆ ವಿವಿಧ ತೆರನಾಗಿ ನಡೆಯುತ್ತದೆ.ಒಟ್ಟಿನಲ್ಲಿ ಈಗಲೂ ಜನಪ್ರಿಯಾ ಹಬ್ಬವಾಗಿ ಆಚರಣೆಯಲ್ಲಿದೆ.[೧೧]

**ಕಾರಹುಣ್ಣಿಮೆ**

ಕನ್ನಡ ನಾಡಿನ ಹಬ್ಬಗಳನ್ನು ಹೆಚ್ಚಾಗಿ ಹುಣ್ಣಿಮೆಯ ದಿನದಂದು ಆಚರಿಸಲಾಗುತ್ತದೆ. ನಮ್ಮ ನಾಡಿನಲ್ಲಿ ಹಬ್ಬ ಹುಣ್ಣಿಮೆಗಳನ್ನು ಏರ್ಪಡಿಸಿಕೊಂಡು ಬಂದವರು ಒಕ್ಕಲಿಗರೆಂದೇ ಹೇಳಬಹುದು. ಕಾರಹುಣ್ಣಿಮೆಗೆ ವರ್ಷಾರಂಭದ ಮಳೆಯನ್ನು ಸ್ವಾಗತಿಸಿ ಕೃಷಿ ಆರಂಭದ ಪೂಜೆಯನ್ನುವಂತೆ ಎತ್ತುಗಳನ್ನು ಸಿಂಗರಿಸುವುದು ಸಾಮಾನ್ಯ ಈ ಭಾಗದಲ್ಲಿ ಕಾರಹುಣ್ಣಿಮೆ ದಿನ ಎತ್ತುಗಳ

ಕೊಂಬುಗಳಿಗೆ ಬಣ್ಣ ಹಚ್ಚಿ ಎತ್ತುಗಳಿಗೆ ಘಂಟೆ ಗೆಜ್ಜೆ ಹಣೆ ಪಟ್ಟಿ ಹಣೆಕಟ್ಟು, ಗೊಂಡೇವು, ಗಗ್ರಿ, ಜೂಲು, ಮುಂತಾದ ವಸ್ತುಗಳಿಂದ ಅಲಂಕರಿಸಲಾಗುತ್ತದೆ. ಬಂಡಿಯನ್ನು ಸಹ ನಾಡಿನಗೌಡ, ಮುಖ್ಯಸ್ಥರು ಮನೆಯ ಎತ್ತುಗಳಿಗೆ ಬಾಸಿಂಗವನ್ನು ಕಟ್ಟಿಕೊಂಡು ವಾದ್ಯಗಳೊಂದಿಗೆ ಮೆರವಣಿಗೆ ಮೂಲಕ ಅಗಸೆಯ ಹತ್ತಿರ ಬರಲಾಗುತ್ತದೆ. ಉಳಿದಂತೆ ಗ್ರಾಮದ ಇತರರ ಎತ್ತುಗಳನ್ನು ಹೊಡೆದುಕೊಂಡುಬಂದು ನಿರ್ದಿಷ್ಟ ಸ್ಥಳದಲ್ಲಿ ಸಾಲಾಗಿ ನಿಲ್ಲಿಸಲಾಗುವುದು. ಪ್ರಸ್ತುತ ಈ ಪ್ರದೇಶದಲ್ಲಿ ಕಾರಹುಣ್ಣಿಮೆ ಹಬ್ಬವು ಇದು ಹಳ್ಳಿಗರ ಸಾಂಪ್ರದಾಯಿಕೆ ನಂಬಿಕೆ ತಮ್ಮೊಂದಿಗೆ ಅನ್ಯೋನ್ಯತೆಯಿಂದ ಜೊತೆಗೂಡಿರುವ ಎತ್ತುಗಳ ಬಗ್ಗೆ ಅಭಿಮಾನವೂ ಈ ಸಮಯದಲ್ಲಿ ವ್ಯಕ್ತವಾಗುತ್ತದೆ. ಕಾರಹುಣ್ಣಿಮೆ ಸಮಯದಲ್ಲಿ ಎತ್ತುಗಳಿಗೆ ವಿವಿಧ ಸ್ಫರ್ಧೆಗಳನ್ನು ನಡೆಸಲಾಗುತ್ತದೆ.[೨]

**ನಾಗರಪಂಚಮಿ**

ಸಾಮಾನ್ಯವಾಗಿ ಈ ಹಬ್ಬ ಶ್ರಾವಣ ಮಾಸದಲ್ಲಿ ಬರುವುದು ಸಿಂಧೂ ಸಂಸ್ಕೃತಿಯ ಅವಶೇಷಗಳಲ್ಲಿ ಸರ್ಪಮಿಥನ ಸಿಕ್ಕಿದ್ದನು ಗಮನಿಸಿದಾಗ ಮಾನವ ಜನಾಂಗದ ಆದಿಕಾಲದಿಂದಲೂ ಈ ನಾಗರಾಧನೆ ನಡೆದುಬಂದಿದ್ದು ತಿಳಿದುಬರುತ್ತದೆ. "ದಯವೇ ಧರ್ಮದ ಮೂಲವಯ್ಯ" ಎಷ್ಟು ಸತ್ಯವೋ 'ಭಯವೇ ಧರ್ಮದ ಮೂಲವಯ್ಯ' ಎಂಬುದು ಅಷ್ಟೇ ಸತ್ಯ ಪ್ರಾಚೀನ ಕಾಲದಲ್ಲಿ ಹಾವಿನ ಭಯಂಕರ ವಿಷವನ್ನು ಅರಿತ ಮಾನವ ಅವುಗಳಿಂದ ತೊಂದರೆ ಬರದಿರಲೆಂಬ ಉದ್ದೇಶದಿಂದ ಈ ಹಬ್ಬ ಆಚರಣೆಗೆ ಬಂದಿತೆಂದು ಊಹಿಸಬಹುದು. ನಾಗರಪಂಚಮಿ ಹೆಚ್ಚಾಗಿ ಹೆಣ್ಣುಮಕ್ಕಳ ಹಬ್ಬ ಅದು ಅವರಿಗೆ ಮಾಂಗಲ್ಯಪ್ರದ ಸಂತಾನಪ್ರದ ಎಂದೂ ನಂಬಿಕೆಯಿದೆ. ಗಂಡನ ಮನೆಯಲ್ಲಿನ ಆಯಾಸ, ಕಿರಿಕಿರಿಗಳನ್ನೆಲ್ಲಾ ಮರೆತ ಹೆಣ್ಣು ಸಂತೋಷದಿಂದ ಈ ಹಬ್ಬವನ್ನು ಆಚರಿಸುತ್ತಾಳೆ. ನಾಗರಪಂಚಮಿ ದಿನದಂದು ಬೆಳಿಗ್ಗೆ ಐದು ಗಂಟೆಯ ಕಾಲದಲ್ಲೇ ಎದ್ದು ಮನೆಯನ್ನೆಲ್ಲಾ ಸ್ವಚ್ಛಗೊಳಿಸಿ ತಂಬಿಟ್ಟು ಉಂಡೆ ಉಸುಳಿಗಳನ್ನೆಲ್ಲ ಅಣಿಗೊಳಿಸಿ ಮಣ್ಣಿನ ಹುತ್ತಗಳಿಗೆ ಮತ್ತು ಕಲ್ಲುನಾಗರ ಮೂರ್ತಿಗೆ ಹಾಲುರೆಯುತ್ತಾರೆ. ಈ ದಿನ ಬೆಳಿಗ್ಗೆ ಪೂಜಾರಿಗಳು ಊರಿಗೆಲ್ಲ ಪತ್ರಿಯನ್ನು ಹಂಚುತ್ತಾರೆ. ಪ್ರಸ್ತುತ ಇತ್ತೀಚಿನ ದಿನಕಾಲದಲ್ಲಿ ರಾಖಿಯನ್ನು ತಂಗಿಯರು ಅಣ್ಣನಿಗೆ ಕಟ್ಟುವಂತಹ ಪದ್ದತಿಯನ್ನು ಕಾಣುತ್ತಾವೆ ಮತ್ತು ಜೋಕಾಲಿಯನ್ನು ಈ ಹಬ್ಬದಲ್ಲಿ ಹಾಡುತ್ತಾರೆ.[೩]

**ಮಕರ ಸಂಕ್ರಾಂತಿ**

ಎಳ್ಳು ಬೆಲ್ಲವನ್ನಂಚಿ ಒಳ್ಳೆಯ ಮಾತುಗಳನ್ನಾಡುವ ಎಂಬ ಪ್ರತೀತಿಯತೆ ನಾಡಿಗೆಲ್ಲ ಸಮೃದ್ದಿಯನ್ನು ತರಲೆಂದು ಮಕರ ಸಂಕ್ರಾಂತಿ ಹಬ್ಬವನ್ನು ಆಚರಿಸಲಾಗುತ್ತದೆ. ಸಂಕ್ರಾಂತಿ ಎಂದರೆ ವಿಶಿಷ್ಟವಾದ ಬದಲಾವಣೆ ಹಾಗೂ ಉಜ್ವಲವಾದ ಬೆಳಕು ಎಂದರ್ಥ. ಬೆಳಕು ಎಂದರೆ ಬದಲಾವಣೆ ಎಂಬ ಅರ್ಥವನ್ನು ತರುತ್ತದೆ. ಭೂಮಿಯ ಮೇಲೆ ನಡೆಯುವ ಎಲ್ಲಾ ರೀತಿಯ ಚಟುವಟಿಕೆಗಳಿಗೆ ಸೂರ್ಯ ಆಧಾರಸ್ತಂಭವಾಗಿರುವಂತೆ ಸೂರ್ಯ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸುವ ಕಾಲಕ್ಕೆ ಸಂಕ್ರಾಂತಿ ಎಂದು ಹೆಸರು ಮೂಲತಃ ಲಕ್ಷ್ಮೀಯ ಆಗಮನದ ತರುವಾಯ

ಸೂರ್ಯನ ದ್ವಾದಶ ರಾಶಿಗಳಲ್ಲೊಂದಾದ ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳ ಕಾಲ ಪ್ರಯಾಣ ಬೆಳೆಸುವನು. ಈ ಪಥ ಬದಲಿಕೆಯ ದಿನವನ್ನು ಮಕರ ಸಂಕ್ರಮಣ ಅಥವಾ ಮಕರ ಸಂಕ್ರಾಂತಿ ಎಂದು ಕರೆಯುತ್ತಾರೆ. ಈ ಕಾಲವನ್ನು ಭಾರತೀಯರ ಉತ್ತರಯಣ ಪುಣ್ಯಕಾಲವೆಂದು ಕರೆಯುತ್ತಾರೆ.

ಪ್ರಸ್ತುತ ಅಧ್ಯಯನ ವ್ಯಾಪ್ತಿಗೆ ಒಳಪಡುವ ಪ್ರತಿಗ್ರಾಮಗಳಲ್ಲಿ ಆರಂಭಿಕ ಹಬ್ಬವಾಗಿ ಸಂಕ್ರಾಂತಿಯನ್ನು ತುಂಬಾ ಸಂಭ್ರಮ ಸಡಗರದಿಂದ ಆಚರಿಸುತ್ತಾರೆ. ಇದೇ ಸಂದರ್ಭದಲ್ಲಿ ಕಷ್ಟಪಟ್ಟು ಬಿತ್ತಿ ಬೆಳೆಯನ್ನು ತೆಗೆದ ರಾಗಿ ಭತ್ತದಂತಹ ಧಾನ್ಯಗಳ ರಾಶಿಯಿಂದ ರೈತನ ಮುಖದಲ್ಲಿ ಮಂದಹಾಸದ ನಗೆ ಬೀರುವ ಸುಖ ಸಂತೋಷ ಸುಗ್ಗಿಯ ಕಾಲವು ಇದಾಗಿದೆ.[೧೪] ಸಾಮಾನ್ಯವಾಗಿ ಈ ಹಬ್ಬದಲ್ಲಿ ವಿವಾಹಿತ ಮತ್ತು ಅವಿವಾಹಿತ ಹೆಣ್ಣು ಮಕ್ಕಳು ಎಳ್ಳು ಬೆಲ್ಲ ಕೊಬ್ಬರಿ ಕಡಲೆ ಶೇಂಗಾಬೀಜ ಕಬ್ಬು ಸಕ್ಕರೆಯಿಂದ ತಯಾರಿಸಿದ ವಿವಿಧ ಆಕಾರದ ಸಿಹಿ ತಿನಸುಗಳು, ಬಾಳೆಹಣ್ಣು ಕಬ್ಬು ಇವುಗಳನ್ನು ಸುತ್ತಮುತ್ತಲಿನ ಮನೆಯವರಿಗೆ ಹಂಚುವುದನ್ನು ಹಿಂದಿನಿಂದಲೂ ಆಚರಿಸಿಕೊಂಡು ಬಂದಿದ್ದಾರೆ. ತಮ್ಮ ಆನಂದ ಸಂತೋಷಕ್ಕಾಗಿ ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತನಾಡೋಣವೆಂದು ಹಂಚುತ್ತಾರೆ.

**ಮಹಾಶಿವರಾತ್ರಿ**

ಪ್ರಸ್ತುತ ಈ ಪ್ರದೇಶದಲ್ಲಿ ಮಹಾಶಿವರಾತ್ರಿಯ ಹಬ್ಬವನ್ನು ತುಂಬಾ ವಿಜೃಂಭಣೆಯಿಂದ ಆಚರಿಸುತ್ತಾರೆ. ಮಾಘ ಬಹುಳ ಚತುರ್ದಶಿ ಶಿವರಾತ್ರಿ ಅಂದು ಪ್ರಪಂಚಕ್ಕೆ ತಂದೆಯೆನಿಸಿದ ಶಿವನ ಆರಾಧನೆಗೆ ಪ್ರಶಸ್ತ ಮೂಹೂರ್ತ ಎಂದು ಹೇಳುತ್ತಾರೆ. ಮಹಾಶಿವರಾತ್ರಿಯಂದು ನಡುರಾತ್ರಿ ಕೋಟಿ ಸೂರ್ಯ ಪ್ರಕಾಶನದ ಪರಶಿವನು ಶಿವಲಿಂಗದಿಂದ ಸ್ವಯಂಭೂವಾಗಿ ಉದ್ಭವಿಸಿದನೆಂದು ತಿಳಿದುಬರುತ್ತದೆ. ಇದಲ್ಲದೆ ಶಿವನು ಹಾಲಹಲ ವಿಷಕುಡಿದ ದಿನವೆಂತಲೂ ತಾಂಡವನೃತ್ಯ ಮಾಡಿದಿನವೆಂತಲೂ ಹೇಳುತ್ತಾರೆ. ಈ ದಿನ ಅರಣೋದಯಕ್ಕೆ ಎದ್ದು ಮುಂಜಾನೆಯಿಂದ ಹಿಡಿದು ರಾತ್ರಿಪೂರ್ತಿ ಭಕ್ತರು ನಿದ್ರೆ ಮಾಡದೇ ಜಾಗರಣೆ ಮಾಡುತ್ತಾರೆ. ಕೆಲವರು ನೀರನ್ನು ಬಿಟ್ಟು ಬೇಯಿಸಿದ ಅಥವಾ ಅಡಿಗೆ ಮಾಡಿದ ಆಹಾರವನ್ನು ಕೆಲವರು ತಿನ್ನುವುದಿಲ್ಲ. ಈ ಕಾಲದಲ್ಲಿ ಜಾಸ್ತಿ ಕಲ್ಲುಂಗಡಿ ಹಣ್ಣುಗಳನ್ನು ಜನರು ವ್ಯಾಪಾರ ಮಾಡಿ ಅಥವಾ ಬೆಳೆದು ತಿನ್ನುತ್ತಾರೆ. ಅಂದು ಶಿವನು ದೇವಾಲಯಗಳಲ್ಲಿ ಅಭಿಷೇಕದೊಂದಿಗೆ ವಿಶೇಷ ಪೂಜೆ ಕೈಗೊಳ್ಳುತ್ತಾರೆ. ಮತ್ತು 'ಓಂ ನಮಃ ಶಿವಾಯ' ಎಂಬ ಮಂತ್ರದೊಂದಿಗೆ ಶಿವನನ್ನು ನೆನೆಯುತ್ತಾರೆ. ಇಂತಹ ಆಚರಣೆಗಳಿಂದ ಆರೋಗ್ಯ ಐಶ್ವರ್ಯ ಸುಖ, ಸಂತೋಷ ಸಂಪತ್ತುಗಳು ಲಭಿಸುತ್ತವೆ. ಶಿವರಾತ್ರಿಯಂದು ಶಿವದರ್ಶನ ಮಾಡಿದರೆ ಪುಣ್ಯ ಪ್ರಾಪ್ತಿಯಾಗುತ್ತದೆ. ಎಂಬ ನಂಬಿಕೆಯಿದೆ ಅಧ್ಯಯನ ಕೈಗೊಂಡಿರು ಈ ಪ್ರದೇಶದಲ್ಲಿ ಎಲ್ಲ ಗ್ರಾಮಗಳು ಈ ಹಬ್ಬವನ್ನು ಆಚರಿಸುತ್ತಾರೆ. ಮತ್ತು ಸಾಮಾನ್ಯವಾಗಿ ಬಿಲ್ವಪತ್ರೆ ಮರವನ್ನು ಹುಡುಕಿ ದೀಕ್ಷೆಯಾಗಿರುವ ಮರಕ್ಕೆ ಪೂಜೆಯನ್ನು ಮಾಡುತ್ತಾರೆ.[೧೫]

## ದೀಪಾವಳಿ ಹಬ್ಬ

ಈ ದೀಪಾವಳಿ ಹಬ್ಬವನ್ನು ಅಣಜಿ ಗ್ರಾಮದಲ್ಲಿ ತುಂಬ ಚೆನ್ನಾಗಿ ಆಚರಣೆ ಮಾಡುತ್ತಾರೆ. ಈ ಹಬ್ಬದಲ್ಲಿ ಹಿರಿಯರ ಪೂಜೆ ಮಾಡುತ್ತಾರೆ. ಮತ್ತು ಕೆರೆ ಹೊನ್ನಮ್ಮನಿಗೆ ತವರು ಊರುಯಾದ ಕೆರ್‍ನೆಹಳ್ಳಿಯವರು ಹಾಲು ಕೊಡ ಹೊತ್ತುಕೊಂಡು ಅಣಜಿ ಕೆರೆ ಒಂದು ಹಾಲು ಬೀಟ್ಟು ಪೂಜೆ ಮಾಡಿ. ಅಣಜಿ ಮತ್ತು ಕೆರ್‍ನೆಹಳ್ಳಿ ಎಂಬ ಎರಡು ಗ್ರಾಮಸ್ಥರು ಸೇರಿ ಸುತ್ತಮುತ್ತಿನ ಗ್ರಾಮಗಳು ಜನರು ಸೇರುತ್ತಾರೆ ಕೆರೆಗೆ ಹಾಲು ಬಿಡುವ ಕಾರ್ಯಕ್ರಮವನ್ನು ಮಾಡುತ್ತಾರೆ. ದೀಪಾವಳಿ ಹಬ್ಬದಲ್ಲಿ ಹೇಳುತ್ತಾರೆ. ತಮಸೋಮ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃಂತಗಮಯ ಎಂಬ ಉಪನಿಷತ್ ವಾಣಿಯಂತೆ ನಮ್ಮನ್ನ ಕತ್ತಲೆಯಿಂದ ಬೆಳಕಿನೆಡೆಗೆ ಮೃತ್ಯುವಿನಿಂದ ಅಮೃತದೆಡೆಗೆ ಒಯ್ಯುವ ಹಬ್ಬವೇ ಬೆಳಕಿನ ಹಬ್ಬ. ದೀಪಾವಳಿ ಬಲಿಪಾಡ್ಯಮಿ, ದೀಪಾವಳಿ ಹಬ್ಬದ ವಿಶೇಷತೆಯಾಗಿದೆ. ಮಹಾದಾನವೀರ ಬಲಿಚಕ್ರವರ್ತಿ, ಮಹಾ ವಿಷ್ಣುಭಕ್ತಿ ಇವನ ದಾನಶೂರತ್ವವನ್ನು ಮೆಚ್ಚಿದ ಶಿವನು ಈತನಿಗೆ ಬೇಕಾದ ವರವನ್ನು ಕೇಳು ಎಂದು ಹೇಳಿದಾಗ ಮೂರುದಿನ ನನ್ನ ರಾಜ್ಯವನ್ನು ನೋಡುವುದಕ್ಕೆ ಅವಕಾಶ ಕೋಡಿ ಎಂದು ಕೇಳುತ್ತಾನೆ.[೧೬] ಈ ಮೂರು ದಿನ ಯಾರು ದೀಪ ಬೆಳಗುತ್ತಾರೋ ಅವರ ಮನೆಯಲ್ಲಿ ನಿನ್ನ ಸಹಧರ್ಮಿಣಿ ಮಹಾಲಕ್ಷ್ಮೀ ಸ್ಥಿರವಗಿ ನೆಲೆಸಲಿ ಎಂದು ಹಾಗೇ ನನ್ನ ಮನೆಯ ಬಾಗಿಲಲ್ಲಿ ಸದಾ ನಿನ್ನ ಸಾನಿಧ್ಯವಿರಲಿ ಎಂದು ಬೇಡಿಕೊಂಡ ಹಾಗಾಗಿ ಈ ದೀಪಾವಳಿ ಹಬ್ಬವನ್ನು ೩ದಿನ ಆಚರಿಸುತ್ತಾರೆ. ಮತ್ತು ಬಲಿಚಕ್ರವರ್ತಿಯ ನೆನಪಿಗಾಗಿ ಈ ದಿನಗಳಲ್ಲಿ ಬಾಗಿಲಿನ ಹೊಸ್ತಿಲನ್ನು ಯಾರು ತುಳಿಯುವುದಿಲ್ಲ. ಈ ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಈ ಹಬ್ಬದಲ್ಲಿ ಹಸುವಿನ ಸಗಣಿ ತಂದು ದಪ್ಪ ಉಂಡೆಗಳಾಗಿ ಮಾಡಿ ಅದಕ್ಕೆ ಜೋಳ, ರಾಗಿ, ಸಜ್ಜೆ ಭತ್ತ ಅವರೆ ತೊಗರಿ ತಲೆಗಳನ್ನು ಚುಚ್ಚಿ ಬಾಗಲಿನ ಎರಡೂ ಬದಿಗಳಿಗೆ ಇಡುತ್ತಾರೆ. ಮತ್ತು ಕೆಲವು ಗ್ರಾಮಗಳಲ್ಲಿ ಅಚೆಹುಲ್ಲನ್ನು ತಂದು ಅದನ್ನು ಜಡೆಯ ರೀತಿಯಲ್ಲಿ ಎಣೆಯುತ್ತಾರೆ. ಇದು ಸುಮಾರು ಮೂರು–ನಾಲ್ಕು ಅಡಿ ಉದ್ದವಿರುತ್ತದೆ. ಇದನ್ನು ಕೂಡ ಬಾಗಿಲಿನ ಎರಡು ಬದಿಗಳಲ್ಲಿ ನಿಲ್ಲಿಸುತ್ತಾರೆ ಮತ್ತು ಅಣ್ಣೆ ಸೊಪ್ಪಿನ ತಲೆ, ಉಚ್ಚಳ್ಳ ಹೂ, ಕುಂಬಳ, ಚೆಂಡು, ಹೂಗಳಿಂದ ಬಾಗಿಲನ್ನು ಅಲಂಕರಿಸಲಾಗುತ್ತದೆ. ಮತ್ತು ಅವರವರ ಶಕ್ತಾನುಸಾರವಾಗಿ ಮನೆಗಳ ಮುಂದೆ ಹೊರಗೆ, ಬಾಗಿಲಲ್ಲಿ ದೀಪಗಳನ್ನು ಸಂಜೆಯ ಅಥವಾ ರಾತ್ರಿಯ ವೇಳೆಗೆ ಹಚ್ಚಿ ಸಂತೋಷದಿಂದ ಪೂಜೆಯನ್ನು ಮಾಡುತ್ತಾರೆ. ಈ ದಿನ ಯಾರು ಬಾಗಿಲನ್ನು ಮತ್ತು ಬಾಗಿಲಿನ ಹೊಸ್ತಿಲನ್ನು ತುಳಿಯಬಾರದು ಎಂದು ಐತಿಹ್ಯ ಹೇಳುತ್ತಾರೆ. ನಂತರದಲ್ಲಿ ರಾತ್ರಿ ಎಲ್ಲಾರು ಸೇರಿ ಪಟಾಕಿ ಮದ್ದುಗಳನ್ನು ಹಚ್ಚಿ ಸಿಡಿಸಿ ಸಂತೋಷದಿಂದ ಹಬ್ಬವನ್ನು ಈ ಅಣಜಿ ಪ್ರದೇಶದ ಸುತ್ತಮುತ್ತಲಿನ ಎಲ್ಲಾ ಗ್ರಾಮಗಳು ಆಚರಿಸುತ್ತಾರೆ.[೧೭]

## ಶ್ರೀರಾಮನವಮಿ ಹಬ್ಬ

ಪ್ರಸ್ತುತ ಅಣಜಿ ಪರಿಸರದಲ್ಲಿ ಈ ರಾಮನವಮಿ ಹಬ್ಬವನ್ನು ಎಲ್ಲಾ ಗ್ರಾಮಗಳಲ್ಲೂ

ರಾಮನವಮಿಯನ್ನು ವಿಜೃಂಭಣೆಯಿಂದ ಮಾಡುತ್ತಾರೆ. ವಸಂತ ಮಾಸದ ಚೈತ್ರ ಶುದ್ಧ ನವಮಿ ಮರ್ಯಾದಾ ಪುರುಷೋತ್ತಮನಾದ ಶ್ರೀರಾಮನ ಜನ್ಮದಿನ, ಅಂದು ಭಾರತ ದೇಶದಲ್ಲಿ ಅಸೇತು-ಶೀತಚಲ ಪರ್ಯಂತ ರಾಮೋತ್ಸವ ಪ್ರಯುಕ್ತ ಎಲ್ಲೆಲ್ಲೂ ಪೂಜೆ ಭಜನೆ ರಥೋತ್ಸವ, ಪಾನಕ, ಪಲ್ಲಾರ ವಿತರಣೆಯ ಸಂಭ್ರಮವೋ ಸಂಭ್ರಮ ರಾಮೋತ್ಸವವನ್ನು ಕೆಲವು ಕಡೆ ನವಮಿಯಿಂದ ಮುಂದಿನ ಒಂಭತ್ತು ದಿನಗಳವರೆಗೂ ಆಚರಿಸುತ್ತಾರೆ. ಆ ನವ ದಿನಗಳೂ ನವೋತ್ಸಾಹದಿಂದ ಶ್ರೀರಾಮನಿಗೆ ಪೂಜೆ, ರಾಮಕಾರಕ ಮಂತ್ರಮಠನ ನಡೆಯುತ್ತದೆ.

ಮನೆಯನ್ನು ಸಂಭ್ರಮ ಮಾಡಿ ಮನೆಮಂದಿಯು ಊರು ಸಂಭ್ರಮದಿಂದ ಶುಭ್ರ ಪೂಜೆಯನ್ನು ಮಾಡುತ್ತಾರೆ. ಮತ್ತು ವಿಶೇಷವಾಗಿ ಬೆಲ್ಲದ ಪಾನಕ ಮತ್ತು ಕಡಲೇಬೆಳೆ ಅಥವಾ ಹೆಸರುಬೆಳೆಯ ಪಲ್ಲಾರವನ್ನು ಮಾಡಿ ಅದನ್ನು ನೈವೇದ್ಯಕ್ಕೆ ಇಡುತ್ತಾರೆ. ನಂತರ ಮನೆಯರೆಲ್ಲಾ ಪಾನಕ ಪಲ್ಲರ ಸವಿದು ಸುತ್ತಮುತ್ತಲಿನವರಿಗೂ ಹಂಚುತ್ತಾರೆ. ಕೆಲವು ಗ್ರಾಮಗಳಲ್ಲಿ ಈಶ್ವರ ದೇವಾಲಯವಿರುವ ಮತ್ತು ದೇವಾಲಯಕ್ಕೆ ಹೋಗಿ ವಿಶೇಷ ಪೂಜೆ ಕಾರ್ಯಕ್ರಮಗಳು ನಡೆದ ನಂತರ ಅಲ್ಲಿಯು ಕೂಡ ಪಾನಕ ಪಲ್ಲಾರವನ್ನು ನೈವೇದ್ಯ ನೀಡಿ ಭಕ್ತದಿಗಳಿಗೆಲ್ಲಾ ಪ್ರಸಾದವನ್ನು ನೀಡುತ್ತಾರೆ ಇಂತಹ ಅಣಜಿ ಪ್ರದೇಶದಲ್ಲಿ ಆಚರಣೆ ಮತ್ತು ಹಬ್ಬಗಳು ಕಾಣುತ್ತಾವೆ.[೧೮]

**ಮೊಹರಂ ಹಬ್ಬ**

ಪ್ರಸ್ತುತ ಈ ಪ್ರದೇಶದಲ್ಲಿ ಹಿಂದೂ ಮತ್ತು ಮುಸ್ಲಿಂ ಎರಡು ಜಾತಿಯವರು ಮಾಡುವಂತಹ ಮೊಹರಂ ಹಬ್ಬ ಮಾಡುತ್ತಾರೆ. ಹಿಂದೂಗಳಿಗೆ ದೀಪಾವಳಿ, ಯುಗಾದಿ, ನಾಗರಪಂಚಮಿ, ಹಬ್ಬಗಳಂತೆ ಮುಸ್ಲಿಂರಿಗೆ ಮೊಹರಂ ಹಬ್ಬ ವಿಶಿಷ್ಟವಾಗಿ ಗೋಚರಿಸಿದೆ. ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ ಪ್ರಚಲಿತವಾಗಿರುವ ಹಿಜರಿ ಸಂವತ್ಸರದ ಮೊದಲೆನೆಯ ತಿಂಗಳು ಮೊಹರಂ ಇದರರ್ಥ ನಿಷಿದ್ಧವಾದುದು ಅಥವಾ ವರ್ಜಿತವಾದುದು. ಮಹಮ್ಮದೀಯರಲ್ಲಿ ಷಿಯಾ ಪಂಗಡದವರು ಮೊಹರಂ ಆಚರಿಸುತ್ತಾರೆ. ಮಹಮ್ಮದೀಯರ ವರ್ಷದ ಮೊದಲ ತಿಂಗಳು ಮೋಹರಂ (ಮುಸ್ಲಿಂ ಹೊಸ ವರ್ಷ ಹಿಜರಿ ೧೪೩೫) ತಿಂಗಳ ಮೊದಲಿನ ೧೦ ದಿನಗಳನ್ನು ಮೊಹರಂ ಎನ್ನುತ್ತಾರೆ. ಮೊಹರಂ ಆಚರಣೆಗೆ ಕಾರಣ ಪ್ರವಾದಿ ಮಹಮ್ಮದರ ಮರಿಮೊಮ್ಮಗ ಹಜರತ್ ಇಮಾಂ ಹುಸೇನ್‌ರ ವೀರಮರಣ ಹುಸೇನ್ ಇದ್ದಿದ್ದು ಮೆಕ್ಕಾದಲ್ಲಿ ಅಗ ಅರಬ್ ರಾಜ್ಯವನ್ನು ಆಳುತ್ತಿದ್ದ ಯಜೀಹ್ ಕಟ್ಟು ಆಡಳಿತಗಾರನಾಗಿ ಜನರಿಗೆ ಬೇಸರ ತರಿಸಿದ್ದ. ಅವನ ಆಡಳಿತದಿಂದ ಬೇಸತ್ತ ಕುಫಾದ ಜನ ಯುಜೀನ್‌ನನ್ನು ಪದಚ್ಯೂತಿಗೊಳಿಸಬೇಕೆಂದು ಹುಸೇನರನ್ನು ಕರೆದರಲ್ಲದೆ ಬೇಕಾದ ಸಹಾಯ ನೀಡಲು ಸಿದ್ದರೆಂದು ಹೇಳಿದರು.

ಮನೆಯವರು ನೂರು ಜನ ಸೈನಿಕರಿಂದ ಹುತಾತ್ಮರಾದರು ಹುಸೇನ್ ಮಡಿದಿದ್ದು ಮೊಹರಂ ಹತ್ತನೆಯದಿನ ಮೊಹರಂನ ಇನ್ನೊಂದು ಹೆಸರು ಸೈಯದುಲ್ ಆಶಹರ್ ಎಂದರೆ ಎಲ್ಲಾ ತಿಂಗಳುಗಳ ದೊರೆ. ಹುಸೇನರು ಹುತಾತ್ಮರಾದ ಈ ತಿಂಗಳು ದುಃಖದಾಯಕದ ಪವಿತ್ರದಿನ

ಎನಿಸಿಕೊಳ್ಳುತ್ತದೆ. ಮೊಹರಂ ಆಚರಣೆ ಮೂಲತಃ ಶೋಕಸ್ಥಾಯಿಯಾಗಿದ್ದರೂ ಕಾಲಚಕ್ರದಲ್ಲಿ ತನ್ನ ಮೂಲಭಾವ ಕಳೆದುಕೊಂಡು ಉತ್ಸವ ರಂಗ ಪಡೆದು ರಂಜಿಸುತ್ತದೆ.[೧೯] ಮೊಹರಂ ಆಚರಣೆಗೆ ಅನೇಕರ ಪ್ರೋತ್ಸಾಹದೊರೆಯಿತು ಬಹುಮನಿ ಸುಲ್ತಾನರು ಆದಿಲ್‌ಶಾಹಿಗಳು ಸಂಭ್ರಮ ಸಡಗರಿಂದ ಮೊಹರಂ ಆಚರಿಸುತ್ತಿದ್ದರು. ಸಾಮ್ರಾಟ ಆಕ್ಬರ್ ದೀನ್-ಉ-ಇಲಾಯಿ ಸ್ಥಾಪಿಸಿದ ಅನಂತರ ಮೊಹರಂ ರಾಷ್ಟ್ರೀಯ ಹಬ್ಬವಾಗಿ ಮಾರ್ಪಡಾಯಿತು.ಇಂದು ಕರ್ನಾಟಕದಾದ್ಯಂತ ಮೊಹರಂ ಆಚರಿಸಲಾಗುತ್ತದೆ.

ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಅಣಜಿ ಆನುಗೋಡು, ಐಗೂರು, ತುಂಬಿಗೆರೆ ಇತ್ಯಾದಿ ಗ್ರಾಮಗಳಲ್ಲಿ ಮುಸ್ಲಿಂರ ಸಂಖ್ಯೆ ಕಡಿಮೆಯಿದ್ದರೂ ಹಿಂದೂಗಳ ಭಾಗವಹಿಸುವಿಕೆಯಿಂದಾಗಿ ಅತ್ಯಂತ ವೈಭವಯುತವಾಗಿ ಅಮಾವ್ಯಾಸೆ (ದೀಪಾವಳಿ)ಯಾದ ಮೂರು ದಿನಗಳ ನಂತರ ಗದ್ದಲಿ ಬೀಳುತ್ತವೆ (ಅಲಾವಿ ಕಣಿ ತೋಡುವುದು) ಅಂದಿನ ಸಂಜೆಯೇ ಮಸೀದಿಗಳಲ್ಲಿ ಪೀರಾ ಮಾಡಿ ಇಡಲಾಗುತ್ತದೆ. ಪೀರಾಗಳನ್ನು ವಿವಿಧ ರೀತಿಯ ಬಟ್ಟೆಗಳಿಂದ ಬೆಳ್ಳಿ-ಕಂಚು-ಬಂಗಾರದ ಮುಖ, ಛತ್ರಿ ತೊಟ್ಟಿಲು ಕುದುರೆ ಇನ್ನೂ ಮುಂತಾದ ವಸ್ತುಗಳಿಂದ ಸಿಂಗರಿಸಲಾಗುತ್ತದೆ. ಪೀರಾಗಳನ್ನು ಖಾಸಿಂಸಾಬ, ಪೀರಲ ಏಳುಸವಾರಿ, ಇಮಾಮ್‌ಸಾಬ್, ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಒಂದೊಂದು ಗ್ರಾಮದಲ್ಲಿ ಕೂರಿಸುವ ಪೀರಾಗಳ ಸಂಖ್ಯೆಯಲ್ಲಿ ವ್ಯತ್ಯಾಸವನ್ನು ಕಾಣಬಹುದು.[೨೦]

ಗುದ್ದಲಿ ಬಿದ್ದ ದಿನದಿಂದ ಪ್ರತಿದಿನ ಒಂದೊಂದು ಪೀರಾಗಳನ್ನು ಮೆರವಣಿಗೆ ಮಾಡಲಾಗುತ್ತದೆ. ಪೀರಾಗಳನ್ನು ಮೆರವಣಿಗೆ ಮಾಡುವಾಗ ಪೀರಾಗಳು ಆ ಗ್ರಾಮದ ಸೀಮೆಯನ್ನು ದಾಟದಂತೆ ನಿಗಾ ವಹಿಸಲಾಗುತ್ತದೆ. ಕಾರಣ ನಮ್ಮೂರು ದೇವರು ಬೇರೆ ಊರಿಗೆ ಹೋಗವಾರದೆಂಬುದು ಒಂದು ನಂಬಿಕೆ ಈ ಒಂಬತ್ತು ದಿನಗಳ ಮಧ್ಯದಲ್ಲಿ ಸಣ್ಣ ಹಾಗೂ ದೊಡ್ಡಖಥಲ್ ರಾತ್ರಿ (ಖಥಲ್‌ರಾತ್)ಗಳು ವಿಶೇಷವಾಗಿರುತ್ತವೆ. ಈ ದಿನದಂದು ಇಡೀ ರಾತ್ರಿ ಅಲಾ ಕುಣಿಯಸುತ್ತ ಅಲಾವಿಯನ್ನು ಅಡಲಾಗುತ್ತದೆ. ಹಾಗೂ ಕೆಲವು ವೇಷ ಧರಿಸಿ ಪದಗಳು ಹಾಡುವುದು, ಕೋಲಾಟ, ಸ್ತ್ರೀಪುರುಷ ವೇಷಗಳನ್ನು ಹಾಕಲಾಗುತ್ತದೆ. ಸಣ್ಣ ಖಥಲ್ ರಾತ್ರಿಯ ಮರುದಿನ ಏಳುಸವಾರಿಯನ್ನು ಮೆರವಣಿಗೆ ಮಾಡಲಾಗುತ್ತದೆ.[೨೧] ದೊಡ್ಡ ಖಥಲ್ ರಾತ್ರಿಯ ಮರುದಿನ ಅಂದರೆ ಮೊಹರಂ ಕೊನೆಯದಿನದಂದು ಎಲ್ಲಾ ಪೀರಾಗಳನ್ನು ಮೆರವಣಿಗೆ ಮಾಡಲಾಗುತ್ತದೆ. ಆ ದಿನ ಸಂಜೆ ಪೀರಾಗಳು ಹೊಳೆಗೆ ಹೋಗುತ್ತಾರೆ ಅಂದರೆ ಹಬ್ಬ ಕೊನೆಗೊಳ್ಳುತ್ತದೆ ಪೀರಾಗಳ ವಸ್ತ್ರ ಆಭರಣಗಳನ್ನು ಬಿಚ್ಚಿ ಪೆಟ್ಟಿಗೆಯಲ್ಲಿ ಹಾಕಿಕೊಂಡು ಶೋಕಗೀತೆಯನ್ನು ಹಾಡುತ್ತ ಮಸೀದಿ ಅಥವಾ ದರ್ಗಾಕ್ಕೆ ಬರುತ್ತಾರೆ. ಈ ಹಬ್ಬದಲ್ಲಿ ಮುಸ್ಲಿಂರು ಮಾತ್ರವಲ್ಲದೆ ಹಿಂದೂಗಳು ಸಹ ಪೀರಾಗಳನ್ನು ಹಿಡಿಯುತ್ತಾರೆ. ಇದು ಮುಸ್ಲಿಂರಂತೆ ಹಿಂದೂಗಳು ಕೂಡ ಶ್ರೇಷ್ಠ ಹಬ್ಬವಾಗಿ ಪರಿಣಮಿಸಿದೆ. ಈ ಹಬ್ಬದಲ್ಲಿ ಕೆಂಡ ತುಳಿಯುವುದು ಈ ಹಬ್ಬದ ಸಮಯದಲ್ಲಿ ಮಾತ್ರನೋಡಲಾಗುವುದು.

ಪ್ರಸ್ತುತ ಈ ಹಬ್ಬವು ಒಟ್ಟಿನಲ್ಲಿ ತಲೆತಲೆಮಾರಿನಿಂದ ಪರಂಪರಾನುಗತವಾಗಿ ಬೆಳೆದುಬಂದ ಹಬ್ಬಗಳ ಆಚರಣೆ ಜಾತ್ರೆ ಉತ್ಸವಗಳನ್ನು ವಿನಾಶಗೊಳಿಸದೇ ಅವುಗಳನ್ನು ಉಳಿಸಿಕೊಂಡು ಬರುವುದು ಒಂದು ಮುಖ್ಯ ನಮ್ಮ ಕರ್ತವ್ಯವಾಗಿದೆ ಎಂದು ಹೇಳುತ್ತಾವೆ.[೨೨]

### ಗೌರಿಹಬ್ಬ

ಹೆಣ್ಣು ಮಕ್ಕಳು ತಮ್ಮ ಮನೆಗಳಲ್ಲಿ ಗೌರಿಹಬ್ಬವನ್ನು ಆಚರಿಸುತ್ತಾರೆ. ಇದು ಸೀಗಿ ಹುಣ್ಣಿಮೆಯಿಂದ ಪ್ರಾರಂಭವಾಗುತ್ತದೆ. ದೀಪಾವಳಿ ತುಳಸಿ ಲಗ್ನದ ನಂತರ ನಂದಿಯ ಮೇಲೆ ಕುಳಿತು ಕೊಂಡು ಶಿವ, ಪಾರ್ವತಿಯ ಮೂರ್ತಿಯನ್ನು ತಯಾರಿಸಿ ೯ದಿನಗಳವರೆಗೆ ಪೂಜಿಸುತ್ತಾರೆ. ಈ ಕಾರ್ಯಕ್ರಮದಲ್ಲಿ ಗೌರಿಯನ್ನು ತೊಟ್ಟಿಲಲ್ಲಿ ಹಾಕುವುದು ಸಕ್ಕರೆ ಅರತಿಯನ್ನು ಬೆಳಗುವುದು ಕೊನೆಯ ೨ ದಿನಗಳಲ್ಲಿ ಕೊಲ ಗೌರಿ ಕೊಲ, ಕಂಚಿನಗೌರಿ ಕೊಲ ಎಂಬ ಜಾನಪದ ಹಾಡು ಭಾವಗೀತೆ ಭಕ್ತಿಗೀತೆ ಮೊದಲಾದ ಮನೋರಂಜನೆ ಕಾರ್ಯಕ್ರಮಗಳನ್ನು ನಡೆಸುತ್ತಾರೆ ಇದೇರೀತಿಯಾಗಿ ಪ್ರತಿಯೊಂದು ಮನೆ ಮನೆಯಲ್ಲಿ ತುಳಸಿ ಲಗ್ನ ಮಣ್ಣಿನ ಮತ್ತು ಗಣಪತಿ ಮೊದಲಾದ ಹಬ್ಬಗಳನ್ನು ಆಚರಿಸುವ ರೂಢಿ ಸಂಪ್ರದಾಯ ಅಣಜಿ ಪರಿಸರದಲ್ಲಿ ಬೆಳೆದು ಬಂದಿದೆ. ಗಣಪತಿಯ ಹಬ್ಬದಲ್ಲಿ ಹೆಣ್ಣು ಮಕ್ಕಳು ಘಟ್ಟವನ್ನು ಹಾಕಿರುತ್ತಾರೆ. ಮಣ್ಣಿನ ಮಡಿಕೆಯಲ್ಲಿ ಮಣ್ಣು ತುಂಬಿ ಅದರಲ್ಲಿ ಗೋದಿಕಾಳು ಅಥವಾ ಭತ್ತವನ್ನು ತುಂಬಿಟ್ಟು ವಿಜಯ ದಶಮಿಯವರೆಗೂ ಮೊಳಕೆಯನ್ನು ಬೆಳೆಸುತ್ತಾರೆ. ಇದಕ್ಕೆ ಘಟ್ಟ ಎಂದು ಕರೆಯುತ್ತಾರೆ. ವಿಜಯ ದಶಮಿ ದಿನ ಗಂಡು ಮಕ್ಕಳು ಬನ್ನಿಮುಡಿಯಲು ಹೋದರೆ ಹೆಣ್ಣುಮಕ್ಕಳು ಘಟ್ಟವನ್ನು ತಲೆಯ ಮೇಲೆ ಹೊತ್ತಕೊಂಡು ಅಣಜಿ ಕೆರೆಗೆ ಹೋಗಿ ಗಂಗಾ ಪೂಜೆ ಮಾಡಿ ತುಂಬಿದ ಅಣಜಿಕೆರೆಯಲ್ಲಿ ಘಟ್ಟಬಿಡುತ್ತಾರೆ.[೨೩] ಮೇಲಿನ ಆಚರಣೆಗಳಲ್ಲದೆ ಪ್ರತಿ ವರ್ಷ ಯುಗಾದಿಯ ನಂತರ ಮೇ ತಿಂಗಳಲ್ಲಿ ಬರುವ ಅಕ್ಷತೃತೀಯ ದಿನದಂದು ಶಂಕರಾಚಾರ್ಯ, ಬಸವ ಮತ್ತು ಶಿವಾಜಿಯ ಜಯಂತಿಗಳನ್ನು ಆಚರಿಸುವುದು ಸಾಮಾನ್ಯವಾಗಿ ನಡೆದುಬಂದಿವೆ. ಪ್ರಸ್ತುತ ಅಣಜಿ ಪ್ರದೇಶವು ಬಹು ಸಮಾಜದಿಂದ ಕೂಡಿದ ಇಲ್ಲಿ ವಾಸವಾಗಿರುವ ಎಲ್ಲಾ ಸಮುದಾಯದವರು ತಮ್ಮ ದೇಯಾದ ನಂಬಿಕೆ, ಸಂಪ್ರದಾಯಗಳಲ್ಲಿ ಅನೇಕ ಹಬ್ಬಗಳನ್ನು ಆಚರಿಸುತ್ತ ಬಂದಿದ್ದಾರೆ. ಇಂದಿನ ನಗರೀಕರಣ ಜಾಗತೀಕರಣ ಮತ್ತು ವೈಜ್ಞಾನಿಕ ಯುಗದಲ್ಲಿ ನಂಬಿಕೆ ಸಂಪ್ರದಾಯಗಳು ಮರೆಯಾಗುತ್ತಿದೆ. ಆದರೂ ಅಣಜಿ ಪರಿಸರದ ಸುತ್ತ ಮುತ್ತಿನ ಜನತೆ ಇವುಗಳ ಆಚರಣೆಯಲ್ಲಿ ಉತ್ಸಾಹವನ್ನು ಕಳೆದು ಕೊಂಡಿಲ್ಲ. ಈ ಮೂಲಕ ಪರಸ್ಪರ ವಿಶ್ವಾಸ, ಸೌಹಾರ್ದತೆಯನ್ನು ಬೆಳೆಸಿಕೊಂಡು ಬರುವಲ್ಲಿ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು ಮಹತ್ವದ ಪಾತ್ರವನ್ನು ವಹಿಸಿವೆ.[೨೪]

## ಅಡಿಟಿಪ್ಪಣೆಗಳು

೧. ಸೋಮಶೇಖರ್ ಎಸ್. ವೈ. ೨೦೧೦ ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪ ಜಗಲೂರು ಪುಟ-೮೬

೨. ಶೀಲಾಕಾಂತ ಪತ್ತಾರ, ೨೦೦೦-ವಾದಮಿ ಸಾಂಸ್ಕೃತಿಕ ಅಧ್ಯಯನ ಪುಟ-೫೮

೩. ಅದೇ ಪುಟ-೫೮

೪. ವಾಸುದೇವ ಬಡಿಗೇರ, ೨೦೦೮, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೨ ಹಾನಗಲ್ಲು ಪುಟ-೧೫೨

೫. ಅದೇ ಪುಟ-೧೫೩

೬. ಮಂಜುನಾಥ ಬೇವಿನ ಕಟ್ಟಿ ೨೦೦೭, ಕನ್ನಡ ಜಾನಪದ ನಂಬಿಕೆಗಳು ಪುಟ-೨೩-೨೬

೭. ಅದೇ ಪುಟ-೨೬

೮. ಅಣಜಿಯ ವಕ್ತೃ ನಾಗಜ್ಜನವರಿಂದ ಪಡೆದ ಮಾಹಿತಿ

೯. ಅಣಜಿಯ ಗ್ರಾಮಸ್ಥರಿಂದ ಪಡೆದ ಮಾಹಿತಿ

೧೦. ಎಲೇ ಬೇತೂರು ವಕ್ತೃ ಚನ್ನಬಸಪ್ಪ ಸ್ವಾತಂತ್ರ್ಯ ಹೋರಾಟಗಾರರು ಪಡೆದ ಮಾಹಿತಿ

೧೧. ಅಲೂರು ಗ್ರಾಮಸ್ಥರಿಂದ ಪಡೆದ ಮಾಹಿತಿ

೧೨. ತುಂಬಿಗೆರೆ ವೃಕ್ತ ವೇಣಗೋಪಾಲ ಶಿಕ್ಷಕರು ಪಡೆದ ಮಾಹಿತಿ

೧೩. ಆನುಗೋಡುನ ಗ್ರಾಮಸ್ಥರಿಂದ ಪಡೆದ ಮಾಹಿತಿ

೧೪. ಜವರೇಗೌಡ ದೇ.೧೯೯೧ ಜಾನಪದ ಮಹಾ ಸಂಪುಟ ಪುಟ -೧೭೮-೧೭೯

೧೫. ಚಿದಾನಂದ ಮೂರ್ತಿ ಎಂ. ಜನ-ಜನಪದ-ಜಾನಪದ ಪುಟ -೬೬-೬೭

೧೬. ಜವರೇಗೌಡದೇ ಪೂರ್ವೋಕ್ತ ಪುಟ-೩೬೦

೧೭. ಭಟ್. ವಿ.ಎನ್.೨೦೦೨ ಭಾರತೀಯ ಹಬ್ಬಗಳ ವೈಶಿಷ್ಟ ಪುಟ-೧

೧೮. ಸಂಪಟೂರು ವಿಶ್ವನಾಥ, ಹಬ್ಬಗಳು ಮತ್ತು ದಿನಾಚರಣೆಗಳು, ಪುಟ-೧೪

೧೯. ಗಿರಿಜ ಟಿ. ಚಿತ್ರದುರ್ಗ ಜಿಲ್ಲಾ ದರ್ಶನಿ, ಪುಟ-೫೨೫-೫೨೬

೨೦. ರಮೇಶ್.ಬಿ.ಜಿ. ೨೦೦೭, ನಮ್ಮ ಹಬ್ಬಗಳು ಪುಟ-೬-೮

೨೧. ಅದೇ ಪುಟ-೧೨

೨೨. ಭಟ್.ವಿ.ಎನ್.ಪೂರ್ವೋಕ್ತ ಪುಟ-೧೧೭

೨೩. ಅದೇ ಪುಟ-೧೭-೧೮

೨೪. ಭೈರಪ್ಪ ಕೆ. ಹರ್ಷ ತರುವ ಹಬ್ಬಗಳು ಪುಟ-೨೧

೨೫. ಅದೇ ಪುಟ-೨೩

# ಅಧ್ಯಾಯ – ೬

## ಸಮಾರೋಪ

ಅಣಜಿಯು ಪರಂಪರೆ ಅನುಗುಣವಾಗಿ ಸಂಸ್ಕೃತಿ ಮತ್ತು ಐತಿಹಾಸಿಕ ಚರಿತ್ರೆಯನ್ನು ಹೊಂದಿರುವ ಮತ್ತು ಅದಕ್ಕಾಗಿ ಹೆಸರುವಾಸಿಯಾಗಿರುವ ಅದನ್ನು ವರ್ತಮಾನದಲ್ಲಿದೆ ಮತ್ತು ಭವಿಷತ್ ಕಾಲಕ್ಕೂ ಮುಂದುವರೆಸಿಕೊಂಡು ಹೋಗುತ್ತಿರುವ ಗ್ರಾಮವಾಗಿದೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದಕೊಂಡಿದೆ. ಅದರಲ್ಲಿ ಅಣಜಿ ಸಂಸ್ಕೃತಿಯೇ ಪ್ರಾಚೀನತೆಯನ್ನು ತನ್ನ ಗರ್ಭದಲ್ಲಿರಿಸಿಕೊಂಡು ನಾಡಿನ ಜನತೆಗೆ "ವಾಸ್ತು ಮತ್ತು ಮೂರ್ತಿಶಿಲ್ಪ"ದ ಸೊಬಗನ್ನು ನೀರುತ್ತದೆ. ಅನೇಕ ರಾಜಮನೆತನಗಳ ಆಳ್ವಿಕೆ ಒಳಪಟ್ಟು ವಾಸ್ತು ಶಿಲ್ಪದ ಜೊತೆಗೆ ಧರ್ಮ ಸಮನ್ವಯವನ್ನು ಕಾಪಾಡುವಲ್ಲಿ ಈ ನಾಡು ನಾಡಿನ ಜನತೆಯ ಮನದಾಳದಲ್ಲಿ ಬೇರೂರಿದೆ. ಇಂತಹ ಪರಂಪರೆಯನ್ನು ಪಡೆದ ಅಣಜಿ ಪ್ರದೇಶವಾಗಿದೆ.

ಪ್ರಸ್ತುತ ಅಣಜಿ ಪ್ರದೇಶದಲ್ಲಿ ನನ್ನ ಅಧ್ಯಯನವ್ಯಾಪ್ತಿಗೆ ಮುಖ್ಯವಾಗಿ ಭೌಗೋಳಿಕ ಹಿನ್ನೆಲೆ. ಐತಿಹಾಸಿಕ ಹಿನ್ನೆಲೆಗೆ ಶಾಸನಗಳು, ದೇವಾಲಯ ವಾಸ್ತು ಮತ್ತು ಮೂರ್ತಿಶಿಲ್ಪ ಹಾಗೂ ಸಾಂಸ್ಕೃತಿಕ ಪರಂಪರೆಗೆ ಸಂಬಂಧಿಸಿದಂತೆ ಅಣಜಿ ಪರಿಸರವು ಮಾತ್ರ ಸೀಮಿತಗೊಳಿಸಿಕೊಂಡಿದ್ದೇನೆ. ಅಣಜಿಯು ಕ್ರಿ.ಶ. ೧೧೮೨ರ ಶಾಸನದಲ್ಲಿ ಅಣಜಿಯ ಗ್ರಾಮದ ಹೆಸರು ಉಲ್ಲೇಖಗೊಂಡಿದೆ. ಈ ಶಾಸನದ ಕಾಲಕ್ಕೂ ಪೂರ್ವದಲ್ಲಿ ಈ ಗ್ರಾಮ ಸ್ಥಾಪಿತವಾಗಿರುವುದು ನಮಗೆ ಈಗಾಗಲೇ ತಿಳಿದಿರುವ ವಿಷಯವಾಗಿದೆ. ಗ್ರಾಮದಲ್ಲಿ ದೊರೆತ ವೀರಗಲ್ಲು ಶಾಸನಗಳು ಈ ಪ್ರದೇಶ ವೀರರ ಸ್ಮರಣೆಯ ಬಗ್ಗೆ ಸಾರುತ್ತವೆ. ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂದಪಟ್ಟಂತೆ ಆಕಾರಗಳನ್ನು ಬಳಸಿಕೊಳ್ಳಲಾಗಿದ್ದು, ಇವು ಅಧ್ಯಯನಕ್ಕೆ ಪ್ರಮುಖವಾದ ವಸ್ತುಗಳಾಗಿವೆ. ಇಲ್ಲಿ ದೊರೆತಿರುವ ಶಾಸನಗಳಿಂದ ರಾಜಕೀಯ ಚರಿತ್ರೆಯನ್ನು ರಾಜರು ನೀಡಿದ ದಾನಗಳಿಂದ ಅಂದಿನ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಿಗೆ ರಾಜಮನೆತನಗಳ ಕೊಡುಗೆ ಎಂಬುದು ತಿಳಿದುಬರುತ್ತದೆ. ಶಾಸನದ ಅಧ್ಯಯನ ನೆಲೆ ವಿಭಿನ್ನಗೊಂಡಾಗ ಇವುಗಳಲ್ಲಿ ಅಡಕವಾಗಿರುವ ಸಾಹಿತ್ಯಿಕ ಅಂಶಗಳಾದ ಛಂದಸ್ಸು. ವರ್ಣನೆ. ಅಲಂಕಾರ ಬಳಕೆಯ ವಿಭಿನ್ನವಾಗಿರುವುದನ್ನು ಗುರುತಿಸಬಹುದು. ಜೊತೆಗೆ ಶಾಸನದ ಉಗಮ ಲಕ್ಷಣ ಪ್ರಾಸದ ಬಳಕೆ ಶಾಸನ ಬರೆಯುವ ಕವಿ ತನ್ನ ಕಾವ್ಯಪ್ರೌಢಿಮೆಯನ್ನು ಶಾಸನದ ಮಿತಿಯೊಳಗೆ ತನ್ನ ತನವನ್ನು ಗುರುತಿಸಿಕೊಳ್ಳುವಲ್ಲಿ ಶಾಸನಗಳು ಮುಖ್ಯವಾಗಿವೆ. ಹೀಗೆ

ವೀರಗಲ್ಲುಗಳು ಈ ಪರಿಸರದಲ್ಲಿ ಮೌಖಿಕ, ಐತಿಹ್ಯಗಳು ಸಂದರ್ಶನ ಮೂಲಕ ಮಾಹಿತಿ ಸಂಗ್ರಹಣೆ ಪಡೆಯುವ ಮುಖಾಂತರ ಪ್ರಮುಖ ಆಕಾರಗಳಾಗಿವೆ. ಪ್ರದೇಶ ಸಾಂಸ್ಕೃತಿಕ ಇತಿಹಾಸವೆಂದರೆ ಆ ಪ್ರದೇಶದ ಅಥವಾ ಸಮಾಜದ ಜನರ ಜೀವನ ವಿಧಾನವೇ ಆಗಿದೆ. ಒಟ್ಟಾರೆಯಾಗಿ ಈ ಪರಿಸರದ ಇತಿಹಾಸ ಮತ್ತು ಪುರಾತತ್ವವನ್ನು ಸಮಗ್ರವಾಗಿ ರಚಿಸುವ ಸಲುವಾಗಿ ಸೂಕ್ಷ್ಮ ಸಂಗತಿಗಳನ್ನು ಅರಿಯುವ ಪ್ರಯತ್ನದ ಹಿನ್ನೆಲೆಯಲ್ಲಿ ವ್ಯಾಪಕವಾದ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಯಿತು.

ಪ್ರಸ್ತುತ ಈ ಪ್ರದೇಶವು ಅಣಜಿ ಪ್ರಾಚೀನ ಐತಿಹಾಸಿಕ ಶಾಸನಸ್ಥ ಗ್ರಾಮ. ಮಾಯಕೊಂಡದ ಕಡೆಯಿಂದ ಕಣಶಿಲೆಯ ಬೋಳು ಬೆಟ್ಟದ ಸಾಲು ಅಣಜಿಯ ಕಡೆಗೆ ಹಬ್ಬಿದ್ದು ಮಟ್ಟಿಯ ಮೇಲೆ ಹಳೆಯ ಊರಿತ್ತು ಮಟ್ಟಿಯ ಪಕ್ಕದಲ್ಲಿ ಕೆರೆ ಇದೆ.ಮಟ್ಟಿಯ ಬಳಿ ಕೋಟೆಯ ಅವಶೇಷವಿದೆ ನೂರಾರು ವರ್ಷಗಳ ಹಿಂದೆ ಈಗಿರುವ ಸ್ಥಳದಲ್ಲಿ ಊರು ಕಟ್ಟಿದ್ದಾರೆ. ಮತ್ತು ಈ ಜಾನಪದದಲ್ಲಿ ಊರು ಕೆರೆಗೊಂದು ಕಥೆಯಿದೆ ಊರು ಗೌಡರು ಎಷ್ಟೇ ಪ್ರಯತ್ನ ಪಟ್ಟರು ಕೆರೆಕಟ್ಟಿಸಿದರೂ ನೀರು ಬರಲಿಲ್ಲ ಹಾಗೂ ಕೆರೆಗೆ ಆಹುತಿ ಕೊಟ್ಟರೆ ಕೆರೆ ನೀರು ಬರುತ್ತದೆ ಎಂದು ಕನಸ್ಸಿನಲ್ಲಿ ಗೌಡನಿಗೆ ಮನೆದೇವರು ಯಲ್ಲಮ್ಮದೇವಿ ಹೇಳಿದ್ದಾಗ ಸೊಸೆ ಹೊನ್ನಮ್ಮಳನ್ನು ಆಹುತಿಕೊಟ್ಟಾಗ ನೀರು ಕೆರೆಗೆ ಬಂತು ಎಂದು ಐತಿಹ್ಯ ತಿಳಿಯಬಹುದು ತನ್ನ ತ್ಯಾಗ ಬಲಿದಾನಗಳಿಂದ ಊರಿನ ಶ್ರೇಯಸ್ಸಿಗೆ ಕಾರಣಳಾದ ಹೊನ್ನಮ್ಮಳನ್ನು ಗೌರವಾರ್ಥವಾಗಿ ಗುಡಿಕಟ್ಟಿ ಪೂಜೆ ಮಾಡುತ್ತಾರೆ. ಊರಿನ ಗ್ರಾಮಸ್ಥರು, ಮತ್ತು ಅಣಜಿ ಪರಿಸರದ ಸುತ್ತಮುತ್ತಲಿನ ಶಾಸನಗಳು ಆನುಗೋಡು, ಅಣಜಿ, ಹೆಮ್ಮನಬೇತೂರು, ಎಲೆಬೇತೂರು, ಆಲೂರು, ಕಾಡಜ್ಜಿ, ಕುರುಡಿ, ಐಗೂರು, ಇನ್ನು ಮುಂತಾದ ಕಡೆ ಅನೇಕ ಶಿಲಾಶಾಸನಗಳು ವೀರಗಲ್ಲುಗಳು ಇರುವುದರಿಂದ ಅಣಜಿ ಪರಿಸರದ ಪ್ರಾಚೀನ ಮತ್ತು ಐತಿಹಾಸಿಕ ಮಹತ್ವವನ್ನು ತಿಳಿಯಲು ಸಾಧ್ಯವಾಗಿದೆ, ಇಂದಿಗೂ ಅಣಜಿ ಚಾರಿತ್ರಿಕ ಹಿರಿಮೆಗೆ ಸಾಕ್ಷಿಯಾಗಿವೆ ಎಂದು ಕಾಣುತ್ತವೆ.

ಈ ಪರಿಸರದಲ್ಲಿ ರಾಜಕೀಯ ಇತಿಹಾಸವು ಮೌರ್ಯರಿಂದ ಪ್ರಾರಂಭವಾಗುತ್ತದೆ. ಅವರ ಆಡಳಿತಕ್ಕೆ ಸೇರಿದ ಅವಶೇಷಗಳು ಕರ್ನಾಟಕದ ಬಳ್ಳಾರಿ ಚಿತ್ರದುರ್ಗ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ವಿಶೇಷವಾಗಿ ಸಿಗುತ್ತಾವೆ ಇವು ಉತ್ತರ ಮತ್ತು ದಕ್ಷಿಣದಲ್ಲಿ ಏಕ ರೂಪ ಆಡಳಿತವನ್ನು ಸೂಚಿಸುತ್ತವೆ. ಈ ಪರಿಸರದಲ್ಲಿ ರಾಜಕೀಯವಾಗಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಕಲ್ಯಾಣ ಚಾಲುಕ್ಯರು, ನೊಳಂಬರು, ಸೇವುಣರು, ಹೊಯ್ಸಳರು ವಿಜಯನಗರದ ಅರಸರು ಮತ್ತು ಚಿತ್ರದುರ್ಗದ ಪಾಳೆಯಗಾರರು ಹೀಗೆ ಹಲವು ರಾಜ ಮನೆತನಗಳು ಕ್ರಮವಾಗಿ ಆಡಳಿತವನ್ನು ನಿರ್ವಹಿಸಿದ್ದವು. ಅರಸರಿಗೆ ನಿಷ್ಠರಾಗಿ ಸಾಮಂತರು ಮತ್ತು ಮಹಾಮಂಡಳೇಶ್ವರರು ಆಡಳಿತ ನಡೆಸುತ್ತಿದ್ದದು ಈ ಪ್ರದೇಶದ ಶಾಸನಗಳಿಂದ ವ್ಯಕ್ತವಾಗುತ್ತವೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಸಾಮಂತ ಮಹಾಮಂಡಲೇಶ್ವರರಾಗಿ ಉಚ್ಚಂಗಿ ಕದಂಬರು, ನೊಳಂಬರು (ಪಲ್ಲವರು) ಮತ್ತು ವಿಜಯನಗರದ ಸಾಮಂತರಾಗಿ ಚಿತ್ರದುರ್ಗದ ಪಾಳೆಯಗಾರರು ಈ ಭಾಗದಲ್ಲಿ ಆಡಳಿತವನ್ನು ನಡೆಸಿದ್ದಾರೆ. ಚಿತ್ರದುರ್ಗದ ಪಾಳೆಯಗಾರರಲ್ಲಿ ಎರಡು ಸಂತತಿಯನ್ನು ಕಾಣುತ್ತೇವೆ. ಮೊದಲನೇಯ ಮತ್ತಿ ಸಂತತಿ ಮತ್ತಿ ತಿಮ್ಮಣ್ಣನಾಯಕ ಮತ್ತು ಎರಡನೇಯ ಸಂತತಿಯಾದ ಬಿಳಿಚೋಡು ಸಂತತಿ. ಅದರಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕನು ಚಿತ್ರದುರ್ಗದ ಪಾಳೆಯಗಾರರಲ್ಲಿ ತುಂಬಾ ಮಹತ್ವ ಪಡೆದ ಪಾಳೆಯಗಾರನಾಗಿದ್ದನು. ಮತ್ತು ಅಣಜಿ ಪರಿಸರದಲ್ಲಿ ಭರಮಣ್ಣ ನಾಯಕನ ಆಳ್ವಿಕೆ ಕಾಲದಲ್ಲಿ ಅಣಜಿ ಕೋಟೆ, ಮತ್ತು ಕೆರೆ, ಮತ್ತು ಆಲೂರು ಕೋಟೆಯನ್ನು ಈ ಎರಡು ಊರುಗಳು ಅಣಜಿ ಮತ್ತು ಆಲೂರು ತುಂಬಾ ಆಯಕಟ್ಟಿನ ಸ್ಥಳವಾಗಿರುವುದರಿಂದ ಕೋಟೆಯನ್ನು ಕಟ್ಟಿಸಿದ್ದ, ಬಿಚ್ಚುಗತ್ತಿ ಭರಮಣ್ಣ ನಾಯಕನು ಚಿತ್ರದುರ್ಗದ ಪಾಳೆಯಗಾರರಲ್ಲಿ ತುಂಬಾ ಮಹತ್ವ ಪಡೆದ ಪಾಳೆಯಗಾರನಾಗಿದ್ದನು. ಈ ಎಲ್ಲ ವಿವರಗಳನ್ನು ಕುರಿತು ವಿವಾರವಾಗಿ ಬರೆಯುವ ಪ್ರಯತ್ನ ಮಾಡಿದ್ದೇನೆ.

ವಾಸ್ತು ಮತ್ತು ಮೂರ್ತಿ ಶಿಲ್ಪಗಳಿಗೆ ಸಂಬಂಧಿಸಿದಂತೆ ಕ್ಷೇತ್ರ ಕಾರ್ಯದ ಮೂಲಕ ಅವುಗಳ ವಾಸ್ತು ವಿನ್ಯಾಸ, ಶೈಲಿ ವಿನ್ಯಾಸವನ್ನು ಗಮನಿಸಲಾಗಿದೆ. ಅಣಜಿ ಪರಿಸರದಲ್ಲಿ ಶೈವ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತೇವೆ. ಬಹುತೇಕ ದೇವಾಲಯಗಳು ಗ್ರಾನೈಟ್ ಶಿಲೆಯಲ್ಲಿ ರಚನೆಗೊಂಡು ಬಹಳ ಸರಳವಾಗಿವೆ ಬಹು ಸಂಖ್ಯೆಯ ದೇವಾಲಯಗಳು ಪೂಜೆ ಪುನಸ್ಕಾರ ಜೀರ್ಣೋದ್ದಾರಗಳಿಂದ ವಂಚಿತಗೊಂಡು ಅವಸಾನದ ಸ್ಥಿತಿಯಲ್ಲಿದ್ದು ಕೆಲವುಗತ ವೈಭವದ ಸಂಕೇತಗಳಾಗಿ ನಿಂತಿವೆ. ಕೆಲವು ದೇವಾಲಯಗಳು ಕೇವಲ ಸಾಂಸ್ಕೃತಿಕ ಆಕಾರಗಳಾಗಿವೆ. ಈ ಪ್ರದೇಶದಲ್ಲಿ ದೇವಾಲಯಗಳು ಹೊಂದಿಕೊಂಡಂತೆ ಶೈವ, ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಮೂರ್ತಿ ಶಿಲ್ಪಗಳು ಮತ್ತು ವೀರಗಲ್ಲುಗಳು ಕಂಡುಬರುತ್ತವೆ. ಈ ಎಲ್ಲಾ ವಿಷಯ ಕುರಿತು ನಾನು ಕ್ಷೇತ್ರಕಾರ್ಯ ಮೂಲಕ ವಿವರಗಳನ್ನು ತಿಳಿದುಕೊಂಡಿರುತ್ತೇನೆ.

ಪ್ರಸ್ತುತ ಈ ದೇವಾಲಯಗಳಲ್ಲಿ ಗಜಲಕ್ಷ್ಮಿ, ಪಾರ್ವತಿ, ಜೈನ ತೀಥಂಕರು ಮೂರ್ತಿಶಿಲ್ಪಗಳು ಬೇತೂರು ಗ್ರಾಮದಲ್ಲಿ ಕಾಣುತ್ತೇವೆ. ಮತ್ತು ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಬಿಡಿ ಶಿಲ್ಪಗಳು ಕಂಡುಬರುತ್ತವೆ. ಈ ಪ್ರದೇಶದಲ್ಲಿ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ಸಾಮಾಜಿಕ, ಧಾರ್ಮಿಕ ಆರ್ಥಿಕ ವಿವರಗಳು ಸುಂಕ ಕಂದಾಯ, ಕುಟುಂಬ ಅಗ್ರಾಹಾರ, ತಂದೆ-ತಾಯಿಗಳಿಗೆ ಧಾನ ನೀಡುವ ಬಗ್ಗೆ ಶಾಸನಗಳಲ್ಲಿ ದಾಖಲಾಗಿರುತ್ತವೆ. ಸಮಾಜದಲ್ಲಿ ಆಳುವ ವರ್ಗ ಮತ್ತು ಶ್ರಮಿಕ ವರ್ಗವೆಂಬ ವರ್ಗೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರಮಿಕ ವರ್ಗ ತುಂಬಾ ಶ್ರಮ ಜೀವಿಗಳಾಗಿದ್ದರಿಂದ ಕಾಲ-ಕಾಲಕ್ಕೆ ಈ ಪ್ರದೇಶದ ಸಾಂಸ್ಕೃತಿಕವಾಗಿ ಬದಲಾವಣೆಯನ್ನು ಕಾಣುತ್ತೇವೆ. ಸ್ತ್ರೀಯರು ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಹೊಂದಿದ್ದರು ಶಿಕ್ಷಣ ಅಂದಿನ ಪೀಳಿಗೆಗೆ ದೇವಾಲಯ, ಮಠ ಅಗ್ರಹಾರ ಘಟಿಕಾಸ್ಥಾನ ಮಹಾಜನರು

ವಿದ್ಯಾದಾನವನ್ನು ನಡೆಸಿಕೊಂಡು ಬರುತ್ತಿದ್ದರು. ಒಂದು ಸಮಾಜದ ಅಸ್ತಿತ್ವದಲ್ಲಿ ಅಲ್ಲಿನ ನಂಬಿಕೆಗಳು ಆಚರಣೆಗಳು ಆ ಸಮಾಜದ ಜೀವಾಳವಾಗಿವೆ. ಮಾನವನು ಜೀವನದಲ್ಲಿ ಇವುಗಳು ಹಾಸುಹೊಕ್ಕಾಗಿದ್ದು, ಸಂಸ್ಕೃತಿಯ ಬೆಳಕನ್ನು ಬೀರಿ ಸಂಸ್ಕೃತಿಗೆ ಸಂಬಂಧಿಸಿದ ಮೌಖಿಕ ಪುರಾವೆಗಳನ್ನು ಬದಗಿಸುವಲ್ಲಿ ಪ್ರಮುಖವಾಗಿವೆ ಜಾತ್ರೆಗಳು ಉತ್ಸವಗಳು ಹಬ್ಬಗಳು ಐತಿಹ್ಯಗಳು ಇವುಗಳೆಲ್ಲವನ್ನು ಆಚರಿಸುವಲ್ಲಿ ಜನರು ಹಿಂದಿನಿಂದಲೂ ನಂಬಿಕೊಂಡು ಬಂದಿರುವ ನಂಬಿಕೆಗಳು ಆ ಮೂಲಕ ಸಮಾಜಕ್ಕೆ "ಒಳ್ಳೆಯದು ಆಗುತ್ತದೆ ಎಂಬ" ನಂಬಿಕೆಗಳೇ ಈ ಪರಿಸರದಲ್ಲಿನ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ. ಈ ಎಲ್ಲಾ ವಿವರಗಳ ಕುರಿತು ಅಧ್ಯಯನದಲ್ಲಿ ಬರೆಯುವ ಪ್ರಯತ್ನ ಮಾಡಿರುತ್ತೇನೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ನಂಬಿಕೆ ಆಚರಣೆಗಳು ಜಾತ್ರೆ, ಹಬ್ಬ ಉತ್ಸವ ಮುಂತಾದವುಗಳನ್ನು ಆಚರಿಸುತ್ತಾರೆ. ಅವುಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯಕೈಗೊಂಡು ಅಧ್ಯಯನ ನಡೆಸಿ ಅವುಗಳನ್ನು ವಿಶ್ಲೇಷಿಸಲಾಗಿದೆ. ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ಫಲಿತಗಳು ಅಧ್ಯಯನ ಸಂದರ್ಭದಲ್ಲಿ ಕಂಡುಬಂದವು ಇಲ್ಲಿನ ಶಾಸನಗಳು, ದೇವಾಲಯಗಳು, ಮೂತಿಶಿಲ್ಪಗಳು, ಸಾಂಸ್ಕೃತಿಕ ಆಚರಣೆಗಳನ್ನು ಸಮಗ್ರ ಅಧ್ಯಯನಕ್ಕೆ ಸಾಹಿತ್ಯ ಮೌಖಿಕ ಆಕಾರಗಳನ್ನು ಬಳಸಿಕೊಳ್ಳಲಾಗಿದೆ. ಪ್ರಾಚ್ಯಾವಶೇಷಗಳು ಹಾಗೂ ಈಗಾಗಲೇ ಬಿಡಿ–ಬಿಡಿಯಾಗಿ ದಾಖಲೆಗೊಂಡ ಈ ಪರಿಸರದ ಚಾರಿತ್ರಿಕ ಅಂಶಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿ "ಅಣಜಿ ಪರಿಸರದ ಸಾಂಸ್ಕೃತಿಕ ಅಧ್ಯಯನ" ಎಂಬ ಸಂಪ್ರಬಂದಲ್ಲಿ ಸ್ಥಳೀಯ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

## ಆಧಾರ ಗ್ರಂಥಗಳು


೧. ಅಪರ್ಣ ಕೂ.ಸ. **ದೇವಾಲಯ ವಾಸ್ತು ಶಿಲ್ಪ ಪರಿಚಯ,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೧೯೯೯

೨. ಈಶ್ವರಪ್ಪ ಎಂ.ಜಿ. **ಶತಮಾನದ ದಾವಣಗೆರೆ,** ಪ್ರಕಾಶನ ಚಂಪಾಲಾಲ್ ಬಿ ಡೆಲ್ಹರಿಯಾ ದಾವಣಗೆರೆ, –೨೦೦೧

೩. ಕ.ರಾ.ಕೃಷ್ಣಸ್ವಾಮಿ, **ಅಣಜಿ ಹೊನ್ನಮ್ಮ** ಪ್ರಕಾಶಕರು ಜಾನಪದ ಸಾಹಿತ್ಯ ಅಕಾಡೆಮಿ ಜಯನಗರ ಮೈಸೂರು – ೧೯೬೪

೪. ಕ್ಯಾತನಹಳ್ಳಿ ಬಸವರಾಜು, **ಹಬ್ಬಗಳು,** ವಿಜಯ ಲಕ್ಷ್ಮಿ ಪ್ರಕಾಶನ, ಮೈಸೂರು – ೨೦೦೫

೫. ಕುಂಬಾಸ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,** ಶ್ರೀ ಮಾಲತೇಶ ಕುಂಚೂರು, ಹರಪನಹಳ್ಳಿ – ೧೯೯೦

೬. ಕೆಮ್ಮೂತ್ತೂರು ರಘಪತಿಭಟ್ಟ, **ತುಳುನಾಡಿನ ಸ್ಥಳನಾಮಗಳು,** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೧೯೭೯

೭. ಗಿರಿಜ ಟಿ **ಚಿತ್ರದುರ್ಗ ಜಿಲ್ಲಾದರ್ಶಿನಿ,** ರೇಖಾ ಪ್ರಕಾಶನ ದಾವಣಗೆರೆ – ೧೯೯೧

೮. ಗಿರಿಜ ಟಿ. **ದಾವಣಗೆರೆ ಇದು ನಮ್ಮ ಜಿಲ್ಲೆ,** ನಿಹಾರಿಕಾ ಪ್ರಕಾಶನ, ದಾವಣಗೆರೆ – ೨೦೦೧

೯. ಗುಡ್ಡದೇಶ್ವರಪ್ಪ.ಹೆಚ್. **ಚಿತ್ರದುರ್ಗದ ಐತಿಹಾಸಿಕ ಸ್ಮಾರಕಗಳು,** ಪೂಜಾ ಪ್ರಕಾಶನ ಚಿತ್ರದುರ್ಗ – ೨೦೧೪

೧೦. ಗುಡ್ಡದೇಶ್ವರಪ್ಪ ಹೆಚ್. **ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪೂಜಾ ಪ್ರಕಾಶನ ಚಿತ್ರದುರ್ಗ – ೨೦೧೦

೧೧. ಗೋಪಾಲ ಆರ್., **ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು,–೨೦೦೫

೧೨. ಗೋಪಾಲಕೃಷ್ಣ ವಿ, **ಸ್ಥಳನಾಮ ಅಧ್ಯಯನಗಳು,** ವಿದ್ಯಾಗಿರಿ ಪ್ರಕಾಶನ, ಕೋಲಾರ, – ೧೯೮೭

೧೩. ಚಿದಾನಂದ ಮೂರ್ತಿ.ಎಂ. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್ ಬೆಂಗಳೂರು – ೨೦೦೨

೧೪. ಜವರೇಗೌಡ ದೇ **ಜಾನಪದ ಅಧ್ಯಯನ,** ಚೇತನ ಬುಕ್‌ಹೌಸ್ ಮೈಸೂರು.೨೪ – ೧೯೯೧

೧೫. ಜೋಶಿ.ಎಸ್.ಕೆ. **ಕರ್ನಾಟಕದ ಕೋಟೆ ಕೊತ್ತಲಗಳು ಭಾಗ** – ೧ ಕರ್ನಾಟಕ ಇತಿಹಾಸ ಸಂಶೋಧನ ಮಂಡಲ ಧಾರವಾಡ – ೨೦೦೮

೧೬. ದಾಸೇಗೌಡ, ಜಿ.ವಿ **ನಮ್ಮ ಜನಪದ ನಂಬಿಕೆಗಳು** ಚೇತನ ಬುಕ್ ಹೌಸ್ ಮೈಸೂರು – ೨೦೦೭

೧೭. ನಂಜುಂಡಸ್ವಾಮಿ **ಎ.ಎಸ್.ಪಾಳೆಗಾರರು ಮತ್ತು ಒಡೆಯರ ಇತಿಹಾಸ,** ಪ್ರಕಾಶಕರು ಸಮಾಜ ಪುಸ್ತಕಾಲಯ ಧಾರವಾಡ – ೨೦೧೨.

೧೮. ನರಸಿಂಹಮೂರ್ತಿ ಎ.ವಿ. **ಚಾಲುಕ್ಯ ವಾಸ್ತುಶಿಲ್ಪ ಪರಿಚಯ,** ಐಬಿಎಚ್ ಪ್ರಕಾಶನ ಗಾಂಧಿನಗರ, ಬೆಂಗಳೂರು–೧೯೭೬

೧೯. ನಾರಾಯಣ. ಕೆ.ವಿ(ಸಂ) **ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – ೧೯೯೯.

೨೦. ಪ್ರಭಾಕರ ನಾ., **ಮದಕರಿ ನಾಡಿನಲ್ಲಿ,** ಸಂಜಯ್ ಪ್ರಿಂಟರ್‍ಸ ಮೈಸೂರು–೧, ೧೯೯೧

೨೧. ಪುಟ್ಟಣ್ಣ ಎಂ.ಎಸ್ **ಚಿತ್ರದುರ್ಗದ ಪಾಳೆಯಗಾರರು** ಕಾವ್ಯಾಲಯ ಪ್ರಕಾಶಕರು ಜಯನಗರ ಮೈಸೂರು – ೧೯೯೭

೨೨. ಭಟ್ಟ ಬೆತ್ತಗೇರಿ ವಿ.ಎನ್. **ಭಾರತೀಯ ಹಬ್ಬಗಳ ವೈಶಿಷ್ಟ,** ಪ್ರಾಚೀ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು – ೨೦೦೨

೨೩. ಭೈರಪ್ಪ ಕೆ. **ಹರ್ಷ ತರುವ ಹಬ್ಬಗಳು** ಸಿ.ವಿ.ಜಿ ಪಬ್ಲಿಕೇಷನ್ಸ್ ಬೆಂಗಳೂರು – ೧೯೯೫

೨೪. ಮಂಜುನಾಥ ಬೇವಿನಕಟ್ಟೆ, **ಕನ್ನಡ ಜನಪದ ನಂಬಿಕೆಗಳು** ಜ್ಯೋತಿ ಪ್ರಕಾಶನ ಮೈಸೂರು – ೨೦೦೭

೨೫. ರಮೇಶ್ ಬಿ.ಜಿ. **ನಮ್ಮ ಹಬ್ಬಗಳು,** ಚಂದನ ಪ್ರಕಾಶನ, ಬೆಂಗಳೂರು – ೨೦೦೭

೨೬. ರಮೇಶ್‌ನಾಯಕ, **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ ಅಧ್ಯಯನಗಳ ಮರುಚಿಂತನೆ,** ಪ್ರಸಾರಂಗ, ಕನ್ನಡ ವಿಶ್ವವಿಧ್ಯಾಲಯ ಹಂಪಿ–೨೦೦೭

೨೭. ರಾಜಶೇಖರಪ್ಪ ಬಿ., **ದುರ್ಗಶೋಧನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,–೨೦೦೧

೨೮. ರಾಮಚಂದ್ರರಾವ್.ಎನ್.ಕೆ. **ಮೂರ್ತಿಶಿಲ್ಪ ನೆಲೆ ಹಿನ್ನಲೆ,** ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು – ೧೯೭೫

೨೯. ರಾಜಪ್ಪ ಟಿ.ಎಸ್. **ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು,** ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವ ವಿದ್ಯಾನಿಲಯ – ೧೯೭೪.

೩೦. ರಾಜಶೇಖರಪ್ಪ ಬಿ **ಇತಿಹಾಸ ಕಥನ,** ಸಿ.ವಿ.ಜಿ ಪಬ್ಲಿಕೇಷನ್ಸ್ ಬೆಂಗಳೂರು – ೨೦೦೧

೩೧. ಲಕ್ಷ್ಮಣ್ ತೆಲಗಾವಿ ಮತ್ತು ವೆಂಕಣ್ಣಾಚಾರ್. **ಐತಿಹಾಸಿಕ ಚಿತ್ರದುರ್ಗ,** ಜಿಲ್ಲಾ ಇತಿಹಾಸ ಸಂಶೋಧನೆ ಮಂಡಲಿ ಚಿತ್ರದುರ್ಗ – ೧೯೭೯

೩೨. ಲಕ್ಷ್ಮಣ್ ತೆಲಗಾವಿ, **ಇದು ಚಿತ್ರದುರ್ಗ,** ಸ್ವಾತಿ ಪ್ರಕಾಶನ ಬೆಂಗಳೂರು ೧೮ – ೧೯೯೭

೩೩. ಲಕ್ಷ್ಮಣ್ ತೆಲಗಾವಿ, **ಮೌರ್ಯ ಮತ್ತು ಶಾತವಾಹನ ಯುಗ** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೪

೩೪. ಲಕ್ಷ್ಮಣ್ ತೆಲಗಾವಿ, **ಎಪ್ಪತ್ತೇಳು ಪಾಳೆಗಾರರು,** ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ – ೨೦೧೦

೩೫. ಲಕ್ಷ್ಮಣ್ ತೆಲಗಾವಿ, **ಚಿತ್ರದುರ್ಗ ನಾಯಕ ಅರಸರು ರಾಜಕೀಯ ಚಿತ್ರ,** ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ಚಿತ್ರದುರ್ಗ ಜಿಲ್ಲೆ – ೨೦೦೯

೩೬. ವಸು.ಎಂ.ವಿ **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೦೧

೩೭. ವಾಸುದೇವ ಬಡಿಗೇರ, **ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ–೨ ಹಾನಗಲ್ಲು,** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೦೮

೩೮. ವಿಶ್ವನಾಥ, **ಸ್ಥಳನಾಮಗಳು,** ಸಂವಹನ ಪ್ರಕಾಶನ ಮೈಸೂರು – ೧೯೯೬

೩೯. ವಿಶ್ವನಾಥ ವಿ, **ಸ್ಥಳನಾಮಗಳ ಸಾಂಸ್ಕೃತಿಕ ಪರಿವೇಶ,** ದೇವಿ ಪ್ರಕಾಶನ, ಯು–೧೯– ಸಿಜಬ್–೧೯ ಪಂಪಾವತಿ ರಸ್ತೆ ಸರಸ್ವತಿಪುರ, ಮೈಸೂರು – ೨೦೦೦

೪೦. ವಿರೂಪಾಕ್ಷಿ ಪೂಜಾರಹಳ್ಳಿ **ಚಿನ್ನಹಗರಿ ಸಿರಿ,** ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ – ೨೦೦೬

೪೧. ವೆಂಕಟರತ್ನ.ಎ.ಬಿ ಮತ್ತು ಪದ್ಮ ಎಂ.ಬಿ **ಇತಿಹಾಸ ಸಂಶೋಧನಾ ಮಾರ್ಗ,** ಪ್ರಿಂಟಿಗ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್ ಬೆಂಗಳೂರು – ೧೯೯೧

೪೨. ವೇಣು ಬಿ.ಎಲ್. **ಚಿತ್ರದುರ್ಗ ವೀರ ಪಾಳೆಗಾರ ಕಥೆಗಳು** ಧರತಿ ಪ್ರಕಾಶನ, ಬೆಂಗಳೂರು – ೨೦೧೦

೪೩. ವೆಂಕಟರಮಣಯ್ಯ ಟಿ.ವಿ **ಹಬ್ಬಗಳು,** ಮುದ್ರಕರು ಸ್ವತಂತ್ರ ಮುದ್ರಣಾಲಯ, ಬೆಂಗಳೂರು – ೨೦೦೩

೪೪. ಶ್ಯಾಮಲ.ಸಿ.ಆರ್.ಪೂರ್ವ **ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಾಯ** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೦೮

೪೫. ಶಿರೂರು.ಬಿ.ವಿ. **ಸಂಶೋಧನೆಯ ಸ್ವರೂಪ.** ಅನ್ನಪೂರ್ಣ ಪ್ರಕಾಶನ ಹುಬ್ಬಳ್ಳಿ – ೨೦೦೮

೪೬. ಶ್ರೀನಿವಾಸ್ ಎಂ.ವಿ ಮತ್ತು ಲಕ್ಷ್ಮಣ್ ತೆಲಗಾವಿ **ಚಂದ್ರವಳ್ಳಿ ಜಿಲ್ಲಾ ಇತಿಹಾಸ** ಸಂಶೋಧನ ಮಂಡಲಿ ಚಿತ್ರದುರ್ಗ–೧೯೭೬

೪೭. ಸಂತೇಬೆನ್ನೂರು ಸುಮಂತ್ರಿದ್ರನಾಡಿಗ್. **ದಾವಣಗೆರೆ ಜಿಲ್ಲೆ ಇತಿಹಾಸ ಕೆಲವು ಹೆಜ್ಜೆಗಳು,** ಪ್ರಕಾಶಕರು, ಸಂತೇಬೆನ್ನೂರು – ೨೦೧೦

೪೮. ಸದಾಶಿವಪ್ಪ ಕುಂಬಾ, **ಹರಪನಹಳ್ಳಿ ಪಾಳೆಯಗಾರರು,** ಮಾಲತೇಶ ಪ್ರಕಾಶನ, ಹರಪನಹಳ್ಳಿ–೧೯೯೨

೪೯. ಸಂತೆಬೆನ್ನೂರು ಸುಮತೀಂದ್ರ ನಾಡಿಗ್, **ಸಂತೆಬೆನ್ನೂರು ನಾಯಕರು** (ಇತಿಹಾಸ ಮತ್ತು ದಾಖಲೆಗಳು), ಕನಾಟಕ ರಾಜ್ಯ ಪತ್ರಗಾರ ನಿರ್ದೇಶನಾಲಯ ಕರ್ನಾಟಕ ಸರ್ಕಾರ, ಬೆಂಗಳೂರು,–೨೦೦೮

೫೦. ಸಿ.ಪಿ.ಕೆ., **ಶಾಸನ ಶಾಸ್ತ್ರ ಪ್ರವೇಶ,** ಚೇತನ ಬುಕ್ ಹೌಸ್ ಮೈಸೂರು–೨೦೦೧

೫೧. ಸಿದ್ದಲಿಂಗಯ್ಯ. **ಗ್ರಾಮ ದೇವತೆಗಳು,** ಲಕ್ಷ್ಮಿ ಮುದ್ರಣಾಲಯ ಬೆಂಗಳೂರು – ೧೯೯೭

೫೨. ಸುರೇಶ್.ಬಿ. **ಚಿತ್ರದುರ್ಗ –ದಾವಣಗೆರೆ ಜಿಲ್ಲೆಗಳ ದೇವಾಲಯಗಳು** ಸಂಶೋಧನ ಪ್ರಕಾಶನ, ಬಾಲೇನಹಳ್ಳಿ ಚಳ್ಳಿಕೆರೆ – ೨೦೦೯

೫೩. ಸೋಮಶೇಖರ್.ಎಸ್.ವೈ. **ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ –೪** ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೧೦

೫೪. ಹಿರೇಮಠ ಎಸ್.ಎಸ್ **ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆಭಾಗ – ೨ ಜಾತ್ರೆಗಳು,** ಸಮತಾ ಪ್ರಕಾಶನ ಹೊಸಪೇಟೆ – ೧೯೯೩

೫೫. ಷಡಕ್ಷರಯ್ಯರು ಮ. ಮತ್ತು ಜಯಮ್ಮ ಬಿ. **ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು,** ಧಾರವಾಡ ಉತ್ಸವ ಸಮಿತಿ, ಧಾರವಾಡ – ೨೦೦೭

<u>ಲೇಖನಗಳು</u>

೧. ವಿರೂಪಾಕ್ಷಿ ಪೂಜಾರಹಳ್ಳಿ, **ಅಣಜಿ ಗ್ರಾಮದ ಪುರಾತತ್ವ ಮತ್ತು ಚರಿತ್ರೆ,** ಇತಿಹಾಸ ದರ್ಶನ ಸಂಪುಟ – ೧೭ ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು – ೨೦೦೨

೨. ಸಂತೋಷ್ ಎನ್.ಜಿ., ಮತ್ತು ನಾಗವೇಣಿ ಜೆ.ಬಿ **ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೆರೆ ನೀರಾವರಿ ವ್ಯವಸ್ಥೆ (ಕ್ರಿಶ ೧೩೩೬ – ೧೮೦೦)** ಇತಿಹಾಸ ದರ್ಶನ ಸಂಪುಟ – ೨೮ ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು – ೨೦೧೩

## ಗ್ಯಾಸಟಿಯರ್‌ಗಳು ಸಂಪುಟಗಳು

೧. ಎಫಿಗ್ರಾಫಿಯ ಕರ್ನಾಟಕ ಸಂಪುಟ – ೧೧

೨. ಸತ್ಯನ್.ಬಿ.ಎನ್.ಚಿತ್ರದುರ್ಗ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಗವರ್ನಮೆಂಟ್ ಆಫ್ ಕರ್ನಾಟಕ ಬೆಂಗಳೂರು – ೧೯೬೭

೩. ಸೂರ್ಯನಾಥ ಕಾಮತ್. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ – ೧ ಕರ್ನಾಟಕ ರಾಜ್ಯ ಸರಕಾರ ಬೆಂಗಳೂರು – ೧೯೮೪

೪. ಸೂರ್ಯನಾಥ ಕಾಮತ್ (ಸ) ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ – ೩ ಕರ್ನಾಟಕ ರಾಜ್ಯ ಸರಕಾರ ಬೆಂಗಳೂರು – ೧೯೮೬

೫. ಗಂಗಾನಾಯಕ್ ಕೆ.ಎನ್ ಮತ್ತು ಶೈಲಜ.ಬಿ.ಎಂ. ಪಾಳೆಯಗಾರರ ಶಾಸನಗಳು ಸಂಪುಟ – ೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು – ೨೦೧೨.

## ಅಪ್ರಕಟಿತ ಪ್ರಬಂಧಗಳು

೧. ತಿಪ್ಪೇಸ್ವಾಮಿ ಹೆಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು ಪಿ.ಹೆಚ್.ಡಿ. ಅಪ್ರಕಟಿತ ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೦೦

೨. ಮಲ್ಲೇಶಪ್ಪ ಪಿ., ಬಿಳಿಚೋಡು ಪರಿಸರದ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ನಿಬಂದ ಕನ್ನಡ ವಿಶ್ವ ವಿದ್ಯಾಲಯ, ಹಂಪಿ – ೨೦೧೩

೩. ಶರತ್‌ಬಾಬು ಕೆ.ಎಸ್., ತುರುವನೂರು ಹೋಬಳಿಯ ಪುರಾತತ್ವ ಅಧ್ಯಯನ, ಪ್ರಕಟಿತ ಎಂ.ಫಿಲ್ ನಿಬಂಧ ಕನ್ನಡ ವಿಶ್ವ ವಿದ್ಯಾಲಯ, ಹಂಪಿ – ೨೦೧೦

೪. ವೇದಾವತಿ ಎಂ., ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೧೩

೫. ಅಮರೇಶ, ಬಳಗನೂರು ಹೋಬಳಿ ಪರಿಸರ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ ಫಿಲ್ ಪ್ರೌಢ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೧೩

## ಸೋಮೇಶ್ವರ ದೇವಾಲಯ ತಲನಕ್ಷೆ ಅಣಜಿ



ದಾವಣಗೆರೆ ಜಿಲ್ಲೆ ನಕ್ಷೆ



# ದಾವಣಗೆರೆ ತಾಲೂಕು ನಕ್ಷೆ



## ROAD NETWORK - MAP OF DAVANGERE TALUK







0 5 10
Kilometres

LEGEND

- Taluk Boundary
- GP - Headquatres
- Railway Track
- Davangere Town
- State Highway
- National Highway
- MRD - Road
- Village Boundary
- DVG- Town

PREPARED BY:
Dist. DIST. NRDMS Centre,
Z.P. Davangere

## ಛಾಯಾ ಚಿತ್ರಗಳು



೧. ಕಲ್ಲೇಶ್ವರ ದೇವಾಲಯ ಎಲೇಬೇತೂರು



೨. ಆಂಜನೇಯ ದೇವಾಲಯ ಆನುಗೋಡು



೩. ಸೋಮೇಶ್ವರ ದೇವಾಲಯ ಅಣಜಿ (ಹೊನ್ನಮ್ಮನ ದೇವಾಲಯ)



೪. ಕಲ್ಲೇಶ್ವರ ದೇವಾಲಯ ಪಾರ್ಶನೋಟ ಎಲೇಬೇತೂರು



೫. ದ್ವಿಕುಟ ದೇವಾಲಯ ಕುರುಡಿ



೬. ವೀರಗಲ್ಲುಗಳು



೭. ಬುರುಜು ಆಲೂರು



೮. ಗಜಲಕ್ಷ್ಮಿ ಶಿಲ್ಪ ಎಲೇಬೇತೂರು



೯. ಶಾಸನಗಳು ಆಲೂರು

